# ಸವಣೂರು ನವಾಬರು

ಗೋವಿಂದಮೂರ್ತಿ ದೇಸಾಯಿ



ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

# ಸವಣೂರು ನವಾಬರು



ಗೋವಿಂದಮೂರ್ತಿ ದೇಸಾಯಿ



ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

*

# ದೇಸಿಯೊಳ್ ಪುಗುವುದು

ಡಾ.ಎಂ.ಎಂ.ಕಲಬುರ್ಗಿ
ಕುಲಪತಿಗಳು

ಕನ್ನಡ ವಿಶ್ವವಿದ್ಯಾಲಯದ ಪ್ರಥಮ ಗುರಿ 'ಕನ್ನಡ ಸಂಸ್ಕೃತಿ'ಯ ಶೋಧ, ವಿಮರ್ಶೆ ಮತ್ತು ಪ್ರಸಾರ. ಅಂತಿಮ ಗುರಿ ಸುತ್ತಲಿನ ಸಂಸ್ಕೃತಿಗಳ ವಿವೇಕಪೂರ್ಣ ವಿನಿಯೋಗ. ಆದಿಕವಿ ಪಂಪ, ಸಾಹಿತ್ಯಕ್ಕೆ ಅನ್ವಯಿಸಿ ಹೇಳಿರುವ 'ದೇಸಿಯೊಳ್ ಪುಗು ವುದು, ಪೊಕ್ಕು ಮಾರ್ಗದೊಳೆ ತಳ್ಪುದು' ಎಂಬ ಮಾತು ಪರ್ಯಾಯವಾಗಿ ಇದನ್ನೇ ಧ್ವನಿಸುತ್ತದೆ

ಸಮಾಜವೆನ್ನುವುದು ಸಮೂಹಸಮ್ಮತ ಜೀವನಪದ್ಧತಿಯಾಗಿದೆ. ಕನ್ನಡಿಗರ ಇಂತಹ ಜೀವನಪದ್ಧತಿಗೆ ಸಾವಿರ ಸಾವಿರ ವರ್ಷಗಳ ಇತಿಹಾಸವಿದೆ. ತನ್ನ ಆಯುರ್ಮಾನದಲ್ಲಿ ಆರ್ಯ-ಆಂಗ್ಲ ಸಂಸ್ಕೃತಿಗಳನ್ನು ಜೀರ್ಣಿಸಿಕೊಳ್ಳುತ್ತ ಬಂದ ಕನ್ನಡ ಸಮಾಜ, ಉದ್ದಕ್ಕೂ ದ್ವಿಭಾಷಾಸಂದರ್ಭದಲ್ಲಿ ಬದುಕುಮಾಡಿದೆ. ಹಿಂದಿನದು ಕನ್ನಡ-ಸಂಸ್ಕೃತ ದ್ವಿಭಾಷಾ ಸಂದರ್ಭ, ಇಂದಿನದು ಕನ್ನಡ-ಇಂಗ್ಲಿಷ್ ದ್ವಿಭಾಷಾ ಸಂದರ್ಭ. ಗ್ರಂಥಸ್ಥ ಭಾಷೆಯಾದ ಸಂಸ್ಕೃತಕ್ಕಿಂತ ಜೀವಂತ ಭಾಷೆಯಾದ ಇಂಗ್ಲಿಷ್ ಬೆಳಕಾಗುತ್ತಲೇ ಬೆಂಕಿಯಾಗಬಹುದೇ? ಎಂಬ ಭಯ ನಮ್ಮಲ್ಲಿ ಹುಟ್ಟಿದೆ. ಹೆಚ್ಚಿನದಾಗಿ ಆಂಗ್ಲ ಜೀವನಶೈಲಿ ನಮ್ಮ ಜೀವನಾಡಿಗಳನ್ನು ದಿನೇ ದಿನೇ ನಿಯಂತ್ರಿಸತೊಡಗಿ, ಒಂದು ಬಗೆಯ ಅತಿರೇಕ ಸೃಷ್ಟಿಯಾಗುತ್ತಲಿದೆ.

ಗಾಂಧೀಜಿಯವರು ಈ ಅತಿರೇಕವನ್ನು ಬಹಳ ಹಿಂದೆಯೇ ಊಹಿಸಿ, 'ಸ್ವದೇಶೀ ಚಳುವಳಿ'ಯನ್ನು ಕೈಗೆತ್ತಿಕೊಂಡಿದ್ದರು. ಈ ಮತ್ತು ಇಂಥ ದೇಶೀ ಚಿಂತನೆಗಳ ಆದರ್ಶ ದಲ್ಲಿ ಕನ್ನಡ ವಿಶ್ವವಿದ್ಯಾಲಯ ಮೊದಲು ಮಾಡಬೇಕಾದ ಕೆಲಸವೆಂದರೆ ವಿಸ್ಮೃತಿಯ ಸಾಗರದಲ್ಲಿ ಮುಳುಗಿಹೋಗಿರುವ ನಮ್ಮ ಪಾರಂಪರಿಕ ಕ್ರಿಯೆ, ಪ್ರಕ್ರಿಯೆ ರೂಪದ 'ಸ್ವದೇಶೀ ಸತ್ಯ'ಗಳನ್ನು ಶೋಧಿಸುವುದು; ಬಳಿಕ ಅಲ್ಲಿ ಸೇರಿಕೊಂಡಿರುವ ದೋಷಗಳನ್ನು ದೂರ ಸರಿಸಿ ಗುಣಾಂಶಗಳನ್ನು ಗುರುತಿಸುವ, ಜೊತೆಗೆ ಪೂರ್ಣ ಬದುಕಿಗೆ ಅವಶ್ಯವಿರುವ ಕೊರತೆಗಳನ್ನು ಅನ್ಯಸಂಸ್ಕೃತಿಯಿಂದ ಎಚ್ಚರ ವಹಿಸಿ ತುಂಬಿಕೊಳ್ಳುವ ಕೆಲಸ ನಮ್ಮಲ್ಲಿ ನಡೆಯಬೇಕಾಗಿದೆ. ಒಟ್ಟಾರೆ ಅನ್ಯಸಂಸ್ಕೃತಿಗಳ ಸಹಯೋಗದಲ್ಲಿಯೂ 'ಕನ್ನಡವು ಕನ್ನಡವ ಕನ್ನಡಿಸುತಿರಬೇಕು' ಎಂಬಂತೆ ನಾವು ಕನ್ನಡವನ್ನು ಸ್ಥಾನಿಕದಲ್ಲಿ ಬದುಕಿಸಬೇಕಾಗಿದೆ, ಜಾಗತಿಕದಲ್ಲಿ ಬೆಳೆಸಬೇಕಾಗಿದೆ. ಹಾಗೆ ಮಾಡಿದಾಗ ಮಾತ್ರ ಕನ್ನಡತ್ವವನ್ನು

ನಾಶಮಾಡಿಕೊಂಡು ಜಾಗತಿಕವಾಗುವುದು ತಪ್ಪಿ, ಕನ್ನಡವೂ ಜಾಗತಿಕವಾಗುತ್ತದೆ. ಜಾಗತಿಕವಾಗುವುದೆಂದರೆ ಸ್ಥಾನಿಕದ ನಿರಾಕರಣೆಯಲ್ಲವೆಂಬ ಸತ್ಯ ಸ್ಥಾಪನೆಗೊಳ್ಳುತ್ತದೆ.

ಹೆಗಲ ಮೇಲೆ ಈ ಹೊಣೆಯನ್ನು ಹೊತ್ತು, ಅಸ್ತಿತ್ವಕ್ಕೆ ಬಂದಿರುವ ಕನ್ನಡ ವಿಶ್ವವಿದ್ಯಾಲಯ, 'ಎಲ್ಲ ರಸ್ತೆಗಳು ರೋಮ್‌ದ ಕಡೆಗೆ' ಎಂಬಂತೆ ಕನ್ನಡದ ಎಲ್ಲ ಹಾದಿಗಳು ಹಂಪಿಯ ಕಡೆಗೆ ಕೇಂದ್ರೀಕರಣಗೊಳ್ಳುವ ಮತ್ತು ಇಲ್ಲಿಂದಲೇ ಜಗತ್ತಿನ ಅಂಚಿನತ್ತ ವಿಕೇಂದ್ರೀಕರಣಗೊಳ್ಳುವ ವಾತಾವರಣವನ್ನು ನಿರ್ಮಾಣ ಮಾಡಬೇಕಾಗಿದೆ. ಈ ರೀತಿ ಐತಿಹಾಸಿಕ ಪರಂಪರೆ ಮತ್ತು ಭೌಗೋಳಿಕ ಪರಿಸರಗಳಲ್ಲಿ ಶ್ರಮಿಸಬೇಕಾಗಿರುವ ಕನ್ನಡ ವಿಶ್ವವಿದ್ಯಾಲಯ "ಎಂದೆಂದಿಗೂ ನೀ ಕನ್ನಡವಾಗಿರು" ಎಂಬ ಪ್ರಜ್ಞೆ ಕನ್ನಡಿಗರಲ್ಲಿ ಜಾಗೃತವಾಗಿರುವಂತೆಯೂ ನೋಡಿಕೊಳ್ಳಬೇಕಾಗಿದೆ.

ಈ ಎಲ್ಲ ನೆಲೆಗಳಲ್ಲಿ ಸೃಷ್ಟಿಯಾಗುವ ತನ್ನ ಶೋಧನೆ-ಚಿಂತನೆಗಳನ್ನು ದಾಖಲಿಸ ಬೇಕೆಂಬ ಮತ್ತು ಸಂವಹನಗೊಳಿಸಬೇಕೆಂಬ ತೀವ್ರ ಹಂಬಲದಿಂದ ಈ ವಿಶ್ವವಿದ್ಯಾಲಯ 'ಪ್ರಸಾರಾಂಗ' ಹೆಸರಿನ ಪ್ರಸಾರಮಾಧ್ಯಮ ಸಂಸ್ಥೆಯನ್ನು ಅಸ್ತಿತ್ವಕ್ಕೆ ತಂದಿದೆ. ಶ್ರವ್ಯ, ದೃಶ್ಯ, ವಾಚನ ಸಾಮಗ್ರಿಗಳ ಉತ್ಪಾದನೆ-ವಿತರಣೆ ಇತ್ಯಾದಿ ಕಾರ್ಯಗಳನ್ನು ಕೈಗೆತ್ತಿ ಕೊಂಡಿರುವ ಇದು, ವಾಚನ ಸಾಮಗ್ರಿಯಾಗಿರುವ ಪುಸ್ತಕಗಳ ಉತ್ಪಾದನೆಗೆ ವಿಶೇಷ ಕಾಳಜಿವಹಿಸಿದೆ. ಆಂತರಿಕ ಸತ್ವ, ಬಾಹ್ಯ ಸೌಂದರ್ಯಗಳಿಂದ ಕೂಡಿರುವ ವಿಶಿಷ್ಟ 'ಪುಸ್ತಕಸಂಸ್ಕೃತಿ'ಯನ್ನು ಅಸ್ತಿತ್ವಕ್ಕೆ ತಂದಿದೆ. ಈ ನಿಟ್ಟಿನಲ್ಲಿ ಪ್ರಕಟವಾಗುತ್ತಿರುವ ಪುಸ್ತಕ 'ಸವಣೂರು ನವಾಬರು.'

ದೇಶವೆನ್ನುವುದು ಬಹುಸಂಸ್ಕೃತಿಗಳ ಕೋಶ. ಇವುಗಳ ಭೌತಿಕ ಮತ್ತು ಅಭೌತಿಕ ಅಧ್ಯಯನ ಮಾತ್ರ ಆ ದೇಶವನ್ನು ಇಡಿಯಾಗಿ ಕಾಣಿಸಿಕೊಡುತ್ತದೆ. ಕನ್ನಡ ದೇಶದ ವಿಷಯದಲ್ಲಿ ಈ ಕನಸನ್ನು ನನಸನ್ನಾಗಿಸಲು ಹೊರಟಿರುವುದರ ದ್ಯೋತಕವೆಂಬಂತೆ 'ಸವಣೂರು ನವಾಬರು' ಕೃತಿಯನ್ನು ಕನ್ನಡ ವಿಶ್ವವಿದ್ಯಾಲಯ ಪ್ರಕಟಿಸುತ್ತಲಿದೆ. ಇದನ್ನು ರಚಿಸಿದ ಶ್ರೀ ಗೋವಿಂದಮೂರ್ತಿ ದೇಸಾಯಿ ಅವರಿಗೆ ನಮ್ಮ ಕೃತಜ್ಞತೆಗಳು ಸಲ್ಲುತ್ತವೆ.



# ಲೇಖಕನ ಅನಿಸಿಕೆಗಳು

೧೯೮೯ ರಿಂದ ೧೭೮೯ರವರೆಗೆ ತುಂಗಭದ್ರೆಯಿಂದ ಕೃಷ್ಣೆಯವರೆಗೆ ಚಾಚಿದ ಕರ್ನಾಟಕ ಪ್ರದೇಶವನ್ನು ವೈಭವದಿಂದ ಆಳಿದವರು ಸವಣೂರಿನ ನವಾಬರು! ೧೦೮ ವರುಷಗಳ ಕಾಲ ಕರ್ನಾಟಕ ಸುಬಾವನ್ನು ಆಳಿದ ನವಾಬರ ಇತಿಹಾಸವು ಇಲ್ಲಿಯವರೆಗೆ ಯಾರ ಗಮನಕ್ಕೂ ಬರದ್ದು ಸೋಜಿಗವೆನಿಸುತ್ತದೆ. ೧೭೯೪ರಲ್ಲಿ ಇಪ್ಪತ್ತೆರಡು ಮಹಲುಗಳ ವಿಶಾಲ ರಾಜ್ಯ, ೭೫ ಹಳ್ಳಿಗಳ ಸಣ್ಣ ರಾಜ್ಯವಾಗಿ, ೧೮೧೮ರಲ್ಲಿ ಸಂಸ್ಥಾನವಾಯಿತು.

೧೮೭೩ರಲ್ಲಿ ಅಬ್ದುಲ್ ದಿಲೇರಖಾನ ಅನ್ನುವ ನವಾಬನು 'ದಿಲೇರಜಂಗಿ' ಅನ್ನುವ ಪರ್ಶಿಯನ್ ಕಾವ್ಯವನ್ನು ಬರೆಸಿ, ತನ್ನ ಮನೆತನದ ಇತಿಹಾಸವನ್ನು ಪ್ರಕಟಿಸಿದ್ದಾನೆ. ಈ ಕಾವ್ಯ ಇಂದಿಗೂ ಹಸ್ತಲಿಖಿತವಾಗಿಯೇ ಇದೆ. ಇದರ ಮೂರು ನಾಲ್ಕು ಕಲ್ಲಚ್ಚು ಪ್ರತಿಗಳು ಮಾತ್ರ ಈಗ ಲಭ್ಯ. ಇಂತಹ ಹಸ್ತಪ್ರತಿಯಿದೆ ಅನ್ನುವ ಸಂಗತಿ ನನಗೆ ತಿಳಿದದ್ದು ೧೯೮೬ರಲ್ಲಿ. ಅದನ್ನು ದೊರಕಿಸಲು ನನಗೆ ಐದಾರು ವರುಷಗಳೆ ಹಿಡಿದವು. ಅದರ ಒಂದು 'ನೆಳಲು' ಪ್ರತಿ ಮಾಡಿಸಿಕೊಂಡು ಮೂರು ನಾಲ್ಕು ವರುಷ ಅದರ ಭಾಷಾಂತರಕ್ಕೆ ಪರಿತಪಿಸಬೇಕಾಯಿತು. ಕೊನಗೆ ನಾನು ಕಲಿತ ಮಜೀದ ಹಾಯ್‌ಸ್ಕೂಲಿನಲ್ಲಿ, ನಮ್ಮ ವಿದ್ಯಾಗುರುಗಳಾದ ಶ್ರೀ ಎ.ಎಮ್.ಖಾಂಜೌದೆ ಅವರು ಆ ಕಾರ್ಯವನ್ನು ಪೂರೈಸಿದರು. ಅವರದು ತೀರಿಸಲಾರದ ಋಣ. ಆ ಕಾರ್ಯದಲ್ಲಿ ನೇರವಾಗಿ ನನಗೆ ಪ್ರೋತ್ಸಾಹವನ್ನು ಕೊಟ್ಟವರು ನನ್ನ ಇನ್ನೊಬ್ಬ ಗುರುಗಳಾದ ಶ್ರೀ ಜಿ.ಎಮ್.ರಾಶೇನಕರರು, ಸವಣೂರ ಪ್ರಥಮ ದರ್ಜೆಯ ಕಾಲೇಜಿಗೆ ಪ್ರಾಂಶುಪಾಲರಾಗಿ ಬಂದಿದ್ದ ಡಾ.ಆರ್.ಆರ್. ಕುಲಕರ್ಣಿ ಅವರು, ನನ್ನ ಆಪ್ತಸ್ನೇಹಿತರಾದ ದಾವಣಗೇರಿ ವೈದ್ಯಕೀಯ ವಿದ್ಯಾಲಯದಲ್ಲಿ ಪ್ರಾಧ್ಯಾಪಕರಾಗಿರುವ ಡಾ.ವ್ಹಿ.ಕೆ.ಖಾರದ ಅವರು ಹಾಗೂ ಸವಣೂರಿನವರೇ ಆದ ಡಾ.ಶ್ರೀಕಾಂತ ಪಡಸಲಗಿಯವರು ಇವರೆಲ್ಲರಿಗೂ ನಾನು ಉಪಕೃತ. ಹಸ್ತಪ್ರತಿಯನ್ನು ಸಿದ್ಧಪಡಿಸಿವಾಗ, ಎಲ್ಲ ರೀತಿ ನೆರೆವನ್ನಿತ್ತ ನನ್ನ ಸ್ನೇಹಿತರು ಮತ್ತು ಇತಿಹಾಸಜ್ಞರು ಆದ ಶ್ರೀ ಆದ್ಯ ರಾಮಚಾರ್ಯರನ್ನು ನಾನಿಲ್ಲಿ ನೆನೆಯಲೇ ಬೇಕು.

ನಾನೊಬ್ಬ ಸಾಮಾನ್ಯ ಬರೆಹಗಾರ. ಇತಿಹಾಸದ ಅರ್ಹತೆಯಿರುವ ಯಾವ ಪದವಿಯೂ ನನಗಿಲ್ಲ. ಹೀಗಾಗಿ ಈ 'ಸವಣೂರು ನವಾಬರು' ಎನ್ನುವ ಇತಿಹಾಸ ಗ್ರಂಥವನ್ನು ಯಾರು ಪ್ರಕಟಿಸುವರು ಎನ್ನುವ ಸಂದೇಹವು ನನ್ನನ್ನು ಕಾಡುತ್ತಿರುವಾಗ, ಪ್ರಕಟನೆಯ ಕಾರ್ಯಕ್ಕೆ ಮುಂದೆ ಬಂದವರು ಹಂಪಿಯ ಕನ್ನಡ ವಿಶ್ವವಿದ್ಯಾಲಯದವರು. ಅದಕ್ಕೆ ಪ್ರೇರಕ ಶಕ್ತಿಯಾಗಿರುವ ಕುಲಪತಿ ಡಾ. ಎಂ.ಎಂ.ಕಲಬುರ್ಗಿ ಅವರು ಮನಸ್ಸು ಮಾಡದಿದ್ದರೆ, ಪ್ರಾಯಶಃ ಸವಣೂರಿನ ಇತಿಹಾಸ ಇನ್ನು ಅಜ್ಞಾತಾವಸ್ಥೆಯಲ್ಲಿಯೇ ಉಳಿಯುತ್ತಿತ್ತೇನೋ! ಡಾ. ಕಲಬುರ್ಗಿಯವರಿಗೂ ಹಾಗೂ ಕನ್ನಡ ವಿಶ್ವವಿದ್ಯಾಲಯದವರಿಗೂ ನಾನು ಚಿರ ಋಣಿ.

ಈ ಗ್ರಂಥದಲ್ಲಿ ಬಂದಿರುವ ಸವಣೂರನಕ್ಷೆ ಚಿತ್ರಗಳನ್ನು ಸಿದ್ಧಪಡಿಸಿಕೊಟ್ಟ, ಪ್ರಾಧ್ಯಾಪಕ ಡಾ.ಬಿ.ಜಿ.ಕುಲಕರ್ಣಿ ಅವರಿಗೆ ನನ್ನ ನಮನ. ಈ ಗ್ರಂಥದ ಸರ್ವಾಂಗ ಸುಂದರತೆಗೆ ನೆರವಾದ ಪ್ರಸಾರಾಂಗದ ಪದಾಧಿಕಾರಿಗಳಿಗೂ ಮತ್ತು ಅಂದವಾಗಿ ಮುದ್ರಿಸಿ ಕೊಟ್ಟ, ಬೆಂಗಳೂರಿನ 'ಕೈಲಾಸ ಪ್ರಿಂಟರ್ಸ್' ಅವರಿಗೂ ನಾನು ಆಭಾರಿ.

**- ಗೋವಿಂದಮೂರ್ತಿ ದೇಸಾಯಿ**

ಗೀತಾಂಜಲಿ
೧೭, ಎಸ್.ಬಿ.ಐ. ಆಫೀಸರ ಕಾಲೊನಿ,
ಬಸವೇಶ್ವರನಗರ. ಬೆಂಗಳೂರು - ೫೬೦ ೦೭೯

# ಸವಣೂರು ನವಾಬರು

ಧಾರವಾಡ ಜಿಲ್ಲೆಯ ಸವಣೂರಿನ ನವಾಬರು ಮೂಲತಃ ಅಫಘಾನಿಗಳು. ಕಾಬೂಲದ ಪಾರ್ಶ್ವದಲ್ಲಿರುವ ಕೋಲಸ್ತಾನದ ಮಿಯಾನಾ ಗುಡ್ಡಗಾಡು ಪ್ರದೇಶಕ್ಕೆ ಬಂದ ಪಠಾಣರು. ಶಸ್ತ್ರವಿದ್ಯೆಯಲ್ಲಿ ಪರಿಣತರಾಗಿದ್ದ ಇವರು ತಮ್ಮ ದೇಶಕ್ಕೆ ಅತ್ಯಂತ ನಿಷ್ಠರಾಗಿರುತ್ತಿದ್ದರು. ಆದರೆ, ಸಿಂಹಾಸನದ ವಿರುದ್ಧ ದಂಗೆಯೆದ್ದರೆ, ಭಯಂಕರರಾಗಿ ವರ್ತಿಸುತ್ತಿದ್ದರು; ಬೀದಿಗಿಳಿದು ನಿರ್ದಯದಿಂದ ಶತ್ರುಗಳನ್ನು ಕೊಲ್ಲುತ್ತಿದ್ದರು. ಆದ್ದರಿಂದ ಪಠಾಣರನ್ನು ಯಾರೂ ತಡವುತ್ತಿರಲಿಲ್ಲ.

ಈ ಮನೆತನದ ಮೂಲಪುರುಷರು ಹಿಂದೂಸ್ತಾನಕ್ಕೆ ಬರುವ ಪೂರ್ವದಲ್ಲಿ, ಕಾಬೂಲಿಧಲ್ಲಿರುವಾಗ, ಮಲೀಕ (ಮುಖ್ಯಸ್ಥ) ಎಂಬ ಬಿರುದನ್ನು ಧರಿಸುತ್ತಿದ್ದರು. ಈ ಮಲೀಕರ ಮೂಲ ಪುರುಷನು ಮಲೀಕ್ ಅಬ್ದುಲ್ ಕರೀಮ್ ಖಾನ್ ಮೀಯಾನಾ ಬಹದ್ದೂರನು. ಇವನು ದಿಲ್ಲಿಯಲ್ಲಿದ್ದನು. ಇವನ ವೆಚ್ಚಕ್ಕೆಂದು ದಿಲ್ಲಿ ಪ್ರಾಂತದ ಸಮೀಪದಲ್ಲಿದ್ದ 'ಝೂರಾಸಾ ಭವರಾಸಾ' ಜಹಗೀರುಗಳನ್ನು ಕೊಡಲಾಗಿತ್ತು. ಈ ಜಹಗೀರು ಈ ಮನೆತನದ ಕೊನೆಯ ತಲೆಯ ವರೆಗೂ ಇದ್ದಿತು. ಈ ಮನೆತನದ ಹದಿನೈದನೇ ತಲೆಯವನಾದ ಮಲೀಕ್ ಅಬ್ದುಲ್ ಅವತಾನಖಾನ್ ಮೀಯಾನಾ ಬಹದ್ದೂರನು, ಕುದುರೆಯ ಮೇಲೆ ಕುಳಿತು ತೈಮೂರಲಿಂಗನ ಸೈನ್ಯದೊಂದಿಗೆ ಹಿಂದೂಸ್ತಾನವನ್ನು ಪ್ರವೇಶ ಮಾಡಿದ್ದನು. ಈ ಮನೆತನದ ಹದಿನೆಂಟನೇ ತಲೆಯವನಾದ ಮಲೀಕ್ ದೋಧಾಖಾನ ಬಹದ್ದೂರನು ಆನುವಂಶಿಕವಾಗಿ ತಮ್ಮ ಮನೆತನದವರು ಹಚ್ಚಿಕೊಳ್ಳುತ್ತಿದ್ದ 'ಮಲೀಕ್' ಬಿರುದನ್ನು ತ್ಯಜಿಸಿ, 'ನವಾಬ'(ವೈಸರಾಯ್) ಎಂಬ ಬಿರುದನ್ನು ಧರಿಸಿದನು. ಇವನ ಮಗನಾದ ನವಾಬ ಅಬ್ದುಲ್ ಹಸನ್ ಖಾನ್ ಬಹದ್ದೂರನು ದಿಲ್ಲಿಯ ಸಮ್ರಾಟ ಮಹಮ್ಮದ್ ಜಲಾಲುದ್ದೀನ ಅಕಬರಶಹಾ ಗಾಝೀ ರಾಜ್ಯದಲ್ಲಿ ಕಂದಾಯ ಸಚಿವನಾಗಿ ನಿಯಮಿಸಲ್ಪಟ್ಟನು. ಅಬ್ದುಲ್ ಹಸನಖಾನನ ನಂತರ, ಅವನ ಮಗನಾದ ನವಾಬ ಅಬ್ದುಲ್ ಬಹಲೋಲಖಾನ ಬಹದ್ದೂರನು, ದಿಲ್ಲಿಯಲ್ಲಿ ತಂದೆಯ ಸ್ಥಾನವನ್ನು ಅಲಂಕರಿಸಿದನು. ಬಹಲೋಲಖಾನನು ಈ ಮೀಯಾನಾ ಮನೆತನದ ಇಪ್ಪತ್ತನೇ ತಲೆಯವನು. ಇವನ ಕಾಲಕ್ಕೆ ದೈವೀ ಶಕ್ತಿಯನ್ನು ಸಂಪಾದಿಸಿದ್ದ, ದಿಲ್ಲಿ ಫಕೀರನೊಬ್ಬನು ಬಹಲೋಲಖಾನನ ಹೆಸರನ್ನು ಸರಿಯಾಗಿ ಉಚ್ಚರಿಸಲು ಬಾರದೆ, ಇವನನ್ನು 'ರಗಟೆ' ಎಂದು ಕರೆಯುತ್ತಿದ್ದನು. ಆದರಿಂದ ಎಲ್ಲರೂ ಇವನನ್ನು ರಗಟೆ

ಬಹಲೋಲಖಾನ ಎಂದೇ ಕರೆಯಲು ಪ್ರಾರಂಭಿಸಿದರು. ಇವನು ಅತ್ಯಂತ ಮಲಿನ ವಸ್ತ್ರಗಳನ್ನು ಧರಿಸುತ್ತಿದ್ದನು. ಇವನು ಸ್ಥೂಲದೇಹಿಯಾಗಿದ್ದು, ನೋಡಲು ಕಪ್ಪು ಇದ್ದುದರಿಂದ ಇವನನ್ನು ಕಾಲಾಪಹಾಡ (ಕರಿದಿನ್ನೆ) ಎಂದು ಕರೆಯುತ್ತಿದ್ದರು. ನವಾಬ ಅಬ್ದುಲ್ ರಗಟೆ ಬಹಲೋಲಖಾನನಿಗೂ ಹಾಗೂ ದಿಲ್ಲಿ ಸಿಂಹಾಸನದ ಮೇಲೆ ವಿರಾಜಮಾನನಾಗಿದ್ದ ಸಮ್ರಾಟ ಜಹಂಗೀರನಿಗೂ (೧೬೦೫-೧೬೨೭) ಭಿನ್ನಾಭಿಪ್ರಾಯಗಳು ತಲೆದೋರಿದ್ದರಿಂದ, ಬಹಲೋಲಖಾನನು ೧೬೨೬ರಲ್ಲಿ ಮೊದಲು ಮೊಗಲ್ ಸುಬೇದಾರನಾಗಿದ್ದ ಖಾನ್ ಜಹಾನ್ ಲೋದಿಯ ಬಳಿ ಸೇವೆಯನ್ನು ಸ್ವೀಕರಿಸಿದನು. ಮುಂದೆ ಸಮ್ರಾಟ ಜಹಂಗೀರನಿಗೂ ಹಾಗೂ ಖಾನ್ ಜಹಾನ್ ಲೋದಿಗೂ ಹೊಂದಾಣಿಕೆಯಾಗದ್ದರಿಂದ ಸಮ್ರಾಟನು ಖಾನ್ ಜಹಾನ್ ಖಾನನ್ನು ಕೊಲ್ಲಿಸಿದನು. ಲೋದಿಯ ಆಶ್ರಯವು ತಪ್ಪಿದೊಡನೆ ನವಾಬ ಬಹಲೋಲಖಾನನು, ಹೈದ್ರಾಬಾದಿನ ಮುರ್ತಜಾ ನಿಜಾಮಶಹಾನ (೧೬೦೫-೧೬೩೦) ಸೈನ್ಯವನ್ನು ಸೇರಿದನು. ದುರ್ದೈವದಿಂದ ಮುರ್ತಜಾ ನಿಜಾಮಶಹಾನು ಕೂಡ ಅವನ ಸಚಿವ ಫತೇಖಾನನಿಂದ ಕೊಲೆಗೀಡಾದಾಗ, ಬಹಲೋಲಖಾನನು ಮತ್ತೆ ನಿರಾಶ್ರಿತನಾಗಿ, ವಿಜಾಪುರಕ್ಕೆ ಬಂದನು; ಸುಲ್ತಾನ ಮಹಮ್ಮದ ಅದಿಲ್ ಶಹಾನಲ್ಲಿ (೧೬೨೬-೧೬೫೬) ಸಚಿವನಾಗಿ ಅಧಿಕಾರವನ್ನು ವಹಿಸಿಕೊಂಡನು. ವಿಜಾಪುರ ದರ್ಬಾರನಲ್ಲಿ ಇವನಿಗೆ ಅತ್ಯಂತ ಗೌರವಾನ್ವಿತ ಸ್ಥಾನವು ಲಭಿಸಿತು. ವಿಜಾಪುರದ ಸುಲ್ತಾನನು ಇವನ ಶೌರ್ಯ ಹಾಗೂ ಬುದ್ಧಿಮತ್ತೆಗೆ ಮೆಚ್ಚಿ, ಇವನಿಗೆ ಒಂದು ಸಣ್ಣ ಜಹಗೀರನ್ನು ದಯಪಾಲಿಸಿದನು. ಅಲ್ಲಿ ಇವನು ಮನೆ ಕಟ್ಟಿಸಿಕೊಂಡು ವಾಸಿಸಹತ್ತಲು, ಅದನ್ನು 'ಬಹಲೋಲಪುರ'ವೆಂದೇ ನಾಮಕರಣ ಮಾಡಿದರು. ವಿಜಾಪುರದ ಒಂದು ಭಾಗವಾಗಿದ್ದ ಬಹಲೋಲಪುರದಲ್ಲಿ ಇಂದಿಗೂ ಇವನ ಗೋರಿಯಿದೆ. ಅಬ್ದುಲ್ ಬಹಲೋಲಖಾನನ ಮಗ ಅಬ್ದುಲ್ ರಹೀಮಖಾನನು ವಿಜಾಪುರದ ದರ್ಬಾರದಲ್ಲಿ ತಂದೆಯ ಸ್ಥಾನ ಹಾಗೂ ಗೌರವವನ್ನು ಪಡೆದನು. ಇವನು ವಿಜಾಪುರದ ಎರಡನೇ ಅಲಿ ಆದಿಲ್ ಶಹಾನ(೧೬೫೬-೧೬೭೨) ಸೇವೆಯನ್ನು ಅತ್ಯಂತ ನಿಷ್ಠೆಯಿಂದ ಮಾಡಿದ್ದರಿಂದ ಇವನಿಗೆ ಕೊಪ್ಪಳದ ಜಹಗೀರನ್ನು ದಯಪಾಲಿಸಲಾಯಿತು. ಆ ಕಾಲಕ್ಕೆ ಈ ಭಾಗದಲ್ಲಿ ಮರಾಠರ ಉಪಟಳವು ಹೆಚ್ಚಿದ್ದರಿಂದ ಸುಲ್ತಾನ ಅಲಿ ಅದಿಲ್ ಶಹಾನು, ಅಬ್ದುಲ್ ರಹಿಮಾನಖಾನನ್ನು ೧೬೬೦ರಲ್ಲಿ ಶಿವಾಜಿಯನ್ನು ಸದೆಬಡಿಯಲು, ಮೊದಲು ಮುಧೋಳದ ಬಾಜೀ ಘೋರ್ಪಡೆಯೊಂದಿಗೆ, ನಂತರ ವಿಜಾಪುರದ ಸರದಾರ ಖವಾಸಖಾನನೊಂದಿಗೆ, ಕಳಿಸಿಕೊಟ್ಟನು. ಇವನು ೧೬೭೨ರಲ್ಲಿ ತೀರಿಕೊಂಡಮೇಲೆ ಇವನ ಮಗನಾದ ಅಬ್ದುಲ್ ಕರೀಮಖಾನ ನವಾಬನು ವಿಜಾಪುರದ ದರ್ಬಾರದಲ್ಲಿ ಶ್ರೇಷ್ಠ ಸರದಾರನೆಂಬ ಕೀರ್ತಿಗೆ ಪಾತ್ರನಾದನು. ೧೬೭೫ರ ಹೊತ್ತಿಗೆ ವಜೀರನಾದನು. ಮುಂದೆ ಎರಡೇ ವರುಷಗಳಲ್ಲಿ, ೧೬೭೭ರಲ್ಲಿ ಇವನಿಗೆ ಮಿರಜ ಪ್ರಾಂತದ ಜಹಗೀರನ್ನು ಕೊಡಲಾಯಿತು.

ಅಬ್ದುಲ್ ಕರೀಮಖಾನನಿಗೆ, ಆದವಾನಿ ನವಾಬನಾಗಿದ್ದ ಮಸೂದಖಾನನು ತನ್ನ ಮಗಳನ್ನು ಕೊಟ್ಟು ವಿವಾಹವನ್ನು ಮಾಡಿದನು. ವರದಕ್ಷಿಣೆಯೆಂದು ತನ್ನ ವಶದಲ್ಲಿದ್ದ ಬಾಗಲಕೋಟೆಯನ್ನು ಕೂಡ ಕೊಟ್ಟನು. ಈ ವಿವಾಹ ಸಂಬಂಧದಿಂದ, ಅಬ್ದುಲ್ ಕರೀಮಖಾನ್ ನವಾಬನು ವಿಜಾಪುರ ದರ್ಬಾರದಲ್ಲಿ ಒಬ್ಬ ಪ್ರತಿಷ್ಠಿತ ಸರದಾರನಾಗಿ ವಿಜೃಂಭಿಸಿದನು. ಕಾರಣ, ಆಗ ವಿಜಾಪುರ ದರ್ಬಾರದಲ್ಲಿ, ಸರದಾರ್ ಸಿದ್ದೀ ಜವ್ ಹಾರನು ಅತ್ಯಂತ ಪ್ರಭಾವೀ ವ್ಯಕ್ತಿಯಾಗಿದ್ದನು. ಇವನ ಮಗಳನ್ನೇ ಆದವಾನಿ ನವಾಬ ವಸೂದಖಾನನಿಗೆ ಕೊಟ್ಟಿತ್ತು. ಅಂದು ವಿಜಾಪುರ ದರ್ಬಾರದಲ್ಲಿ ಅಬಿಸೀನಿಯರ ಗುಂಪು ಹೆಚ್ಚು ಪ್ರಭಾವ ಬೀರುವ ಗುಂಪಾಗಿತ್ತು. ಇದೇ ಗುಂಪಿಗೆ ಸೇರಿದ್ದ ಸಿದ್ದೀ ಜವ್‌ಹಾರನ ಮೊಮ್ಮಗಳ (ಮಸೂದ ಖಾನನ ಮಗಳು) ಗಂಡನಾದ ಅಬ್ದುಲ್ ಕರೀಮಖಾನನ ಅಂತಸ್ತು ಒಮ್ಮಿಂದೊಮ್ಮೆಲೇ ಹೆಚ್ಚಾಯಿತು.

ವಿಜಾಪುರದ ಸುಲ್ತಾನ ಎರಡನೇ ಆದಿಲ್ ಶಹಾನು ತೀರಿಕೊಂಡ ಮೇಲೆ ಸರದಾರರ ಮಧ್ಯದಲ್ಲಿ ಅಧಿಕಾರಕ್ಕಾಗಿ ಕಿತ್ತಾಟ ಪ್ರಾರಂಭವಾಯಿತು. ಮುಂಗೈ ಜೋರಿದ್ದವರು ಮುಂದೆಬರಲು ಸ್ಪರ್ಧೆಯನ್ನು ಒಡ್ಡಹತ್ತಿದರು. ಕಾರಣ, ಎರಡನೇ ಆದಿಲ್ ಶಹಾನ ನಂತರ ಸಿಂಹಾಸನವನ್ನೇರಬೇಕಿದ್ದ ಸುಲ್ತಾನ ಸಿಕಂದರ್ ಆದಿಲ್ ಶಹಾ ಕೇವಲ ಏಳು ವರುಷದ ಚಿಕ್ಕ ಬಾಲಕನಿದ್ದನು. ಆದ್ದರಿಂದ ದೌಲತ್ ಖವಾಸಖಾನನು ದರ್ಬಾರದ ಕೆಲವು ಸರದಾರರೊಂದಿಗೆ ಮಸಲತ್ತು ಮಾಡಿ, ಎಳೆಯ ಸಿಕಂದರನ ರಾಜಪ್ರತಿನಿಧಿಯಾಗಿ ಆದಿಲ್ ಶಾಹಿ ಸಾಮ್ರಾಜ್ಯದ ಅಧಿಕಾರದ ಸೂತ್ರಗಳನ್ನು ತನ್ನ ಕೈಗೆತ್ತಿಕೊಂಡನು.ನಿಜವಾಗಿ ಈ ಅಧಿಕಾರವು ದರ್ಬಾರದಲ್ಲಿ ಹೆಚ್ಚು ಪ್ರಭಾವೀ ವ್ಯಕ್ತಿಯಾಗಿದ್ದ ಅಬ್ದುಲ್ ಕರೀಮಖಾನ ನವಾಬನಿಗೆ ದೊರೆಯಬೇಕಿತ್ತು. ಸುಲ್ತಾನ ಸಿಕಂದರನ ತಂದೆ ಎರಡನೇ ಆದಿಲ್ ಶಹಾನು ತಾನು ಜೀವಿಸಿರುವಾಗಲೇ ಸ್ವಾದಿ, ಕೊಂಕಣಗಳನ್ನು ಒಳಗೊಂಡ ಇಪ್ಪತ್ತೆರಡು ಮಹಲುಗಳ ಕರ್ನಾಟಕ ಸುಬಾ (ಆಡಳಿತ ವಿಭಾಗ) ರಚಿಸಿ, ಅಬ್ದುಲ್ ಕರೀಮಖಾನ ನವಾಬನನ್ನು ಸುಬೇದಾರನೆಂದು ನಿಯಮಿಸಿದ್ದನು. ಈ ಸುಬಾದ ರಾಜಧಾನಿ ಬಂಕಾಪುರವಾಗಿತ್ತು. ಅಬ್ದುಲ್ ಕರೀಮಖಾನನು ಸುಬೇದಾರನಾಗಿ ಬಂಕಾಪುರಕ್ಕೆ ಹೋದರೆ, ಇವನ ಪ್ರಭಾವವು ಮತ್ತಷ್ಟು ಬೆಳೆಯಬಹುದೆಂದು ಇವನಿಗೆ ದೌಲತ್ ಖವಾಸಖಾನನು ಅಧಿಕಾರವನ್ನು ವಹಿಸಿಕೊಳ್ಳುವ ಅವಕಾಶವನ್ನು ತಪ್ಪಿಸಿದನು.

ಖವಾಸಖಾನನು ಅಬ್ದುಲ್ ಕರೀಮಖಾನ ನವಾಬನನ್ನು ಶಿವಾಜಿಯ ವಿರುದ್ಧ ಹೋರಾಡಲು ವಿಜಾಪುರದಿಂದ ಹೊರಗೆ ಕಳಿಸಿದನು. ಕರೀಮಖಾನನು ರಾಜ್ಯದ ಹೊರಗಿದ್ದು, ಮರಾಠರೊಂದಿಗೆ ಹೋರಾಡಿ ವಿಜಯವನ್ನು ಸಾಧಿಸಿದನು. ಇದರಿಂದ ಕರೀಮಖಾನನ ಕೀರ್ತಿ ಮತ್ತಷ್ಟು ಹೆಚ್ಚಾಯಿತು.ಇದನ್ನು ಸಹಿಸದ ದೌಲತ್ ಖವಾಸಖಾನನು ಹೇಗಾದರೂ ಮಾಡಿ ಅಬ್ದುಲ್ ಕರೀಮಖಾನ ನವಾಬನನ್ನು ಕೊಲ್ಲಿಸುವ

ಒಳಸಂಚನ್ನು ಮಾಡಿದನು. ಆದರೆ ರಾಜಕಾರಣದಲ್ಲಿ ಚಲಿಸುವ ಕಾಲಚಕ್ರವು ಎತ್ತ ಹೊರಳುತ್ತದೆಂಬುದು ಯಾರಿಗೂ ತಿಳಿಯದು.

ಯುದ್ಧಕ್ಕೆಂದು ಬಂಕಾಪುರಕ್ಕೆ ಬಂದಿದ್ದ ಅಬ್ದುಲ್ ಕರೀಮಖಾನನು ದೌಲತ್ ಖವಾಸಖಾನನ್ನು ರಮಜಾನ ಭೋಜನಕ್ಕೆ ಆಹ್ವಾನಿಸಿದನು. ಈ ಭೋಜನ ಕಾಲದಲ್ಲಿ ದೌಲತ್ ಖವಾಸಖಾನನು ಕರೀಮಖಾನನ್ನು ಕೊಲ್ಲಬೇಕೆಂದು ಯೋಜಿಸಿದ್ದನು. ಖವಾಸಖಾನನಿಗೆ ಈಗ ನವಾಬ ಕರೀಮಖಾನನು ತನ್ನ ಬಲೆಯಲ್ಲಿ ಸಿಕ್ಕ ಇಲಿಯಂತೆ ಕಂಡನು. ಆದರೆ, ಅಬ್ದುಲ್ ಕರೀಮಖಾನ ನವಾಬನು ವಜೀರ ದೌಲತ್ ಖವಾಸಖಾನನು ಭೋಜನಕ್ಕೆ ಬಂಕಾಪುರ ಕೋಟೆಯನ್ನು ಪ್ರವೇಶಿಸುತ್ತಿದ್ದಂತೆಯೇ ೧೬೭೫ ನವೆಂಬರ್ ಹನ್ನೊಂದರಂದು ಬಂಧಿಸಿ ಸೆರೆಯಲ್ಲಿಟ್ಟನು. ನಂತರ, ಕರೀಮಖಾನ ನವಾಬನು ಖವಾಸಖಾನನ್ನು ಬಂಕಾಪುರ ಕೋಟೆಯಲ್ಲಿ ಕೊಲೆ ಮಾಡಿಸಿ, ರಮಜಾನದ ಹದಿನಾಲ್ಕನೇ ದಿವಸ ವಿಜಾಪುರಕ್ಕೆ ಧಾವಿಸಿದನು. ಮೊದಲು ವಿಜಾಪುರ ನಗರದ ರಕ್ಷಣೆಯನ್ನು ಬಿಗಿಗೊಳಿಸಿ, ಸುಲ್ತಾನ ಸಿಕಂದರನ ರಾಜಪ್ರತಿನಿಧಿಯಾಗಿ ಆದಿಲ್ ಶಾಹಿ ಸಾಮ್ರಾಜ್ಯದ ಸೂತ್ರಗಳನ್ನು ವಹಿಸಿಕೊಂಡನು. ಕರೀಮಖಾನನನ್ನು ಯಾರೂ ವಿರೋಧಿಸಲಿಲ್ಲ. ಇವನು ೧೬೭೮ರಲ್ಲಿ ಮರಣವನ್ನಪ್ಪುವವರೆಗೂ ಮೂರು ವರುಷ ಅಧಿಕಾದಲ್ಲಿದ್ದನು. ಇವನ ಅಧಿಕಾರ ಕಾಲದಲ್ಲಿ ಮೊಗಲರು ವಿಜಾಪುರದ ಮೇಲೆ ದಂಡೆತ್ತಿ ಬಂದು, ಸೋತು, ಒಪ್ಪಂದವನ್ನು ಮಾಡಿಕೊಂಡು ಮರಳಿ ಹೋದರು. ಅಬ್ದುಲ್ ಕರೀಮ್ ಖಾನನಿಂದ ಆದಿಲ್ ಶಾಹಿ ರಾಜ್ಯದ ಕರ್ನಾಟಕ ಸುಬಾದಲ್ಲಿ ಶಾಂತಿ ನೆಲೆಸಿತ್ತು. ಅಬ್ದುಲ್ ಕರೀಮಖಾನನು ಎರಡನೇ ಆದಿಲ್ ಶಹಾನ ಕಾಲಕ್ಕೆ ತನಗೆ ಕೊಡಲ್ಪಟ್ಟಿದ್ದ ಇಪ್ಪತ್ತೆರಡು ಮಹಲುಗಳ ಅಧಿಕಾರವನ್ನು ಅಂದೇ ವಹಿಸಿಕೊಂಡಿದ್ದರೆ, ಅವನೇ ಸವಣೂರು ರಾಜ್ಯದ ಮೂಲ ಸಂಸ್ಥಾಪಕನಾಗುತ್ತಿದ್ದನು. ಆದರೆ ಇವನ ಕಾಲಕ್ಕೆ ಸವಣೂರು ರಾಜ್ಯವು ಅಸ್ತಿತ್ವಕ್ಕೆ ಬರಲಿಲ್ಲ. ಅಂತಲೇ ಇವನು ಕೇವಲ ಕರ್ನಾಟಕದ ಸುಬೇದಾರನಾಗಿ ನಿಯಮಿಸಲ್ಪಟ್ಟಿದ್ದನು. ಆದರೆ ಆಂತರಿಕ ತೊಂದರೆಗಳಿಂದ ಆತ ವಿಜಾಪುರದಲ್ಲಿಯೇ ಉಳಿಯಬೇಕಾಯಿತು.

ಅಬ್ದುಲ್ ಕರೀಮಖಾನ ನವಾಬನಿಗೆ, ಅಬ್ದುಲ್ ನಬೀಖಾನ, ಮಹಮ್ಮದ ಇಕ್ಲಾಲಸ್ ಖಾನ್, ಅಬ್ದುಲ್ ಅಜೀಜಖಾನ, ಮತ್ತು ಅಬ್ದುಲ್ ರವೂಫಖಾನ್ ಎಂಬ ನಾಲ್ವರು ಪುತ್ರರಿದ್ದರು. ಜೇಷ್ಠ ಪುತ್ರನಾದ ಅಬ್ದುಲ್ ನಬೀಖಾನ್ ವಿಜಾಪುರದಿಂದ ಹೊರಗೆ ಹೋಗಿ, ಸವಣೂರಿನ ಆಗ್ನೇಯಕ್ಕೆ ೨೪೦ ಮೈಲುಗಳ ಮೇಲಿರುವ ಕಡಪಾ ಗೆದ್ದು, ಕಡಪಾ ನವಾಬನಾದನು. ಕರೀಮಖಾನನ ಉಳಿದ ಮೂವರು ಮಕ್ಕಳು ವಿಜಾಪುರದ ಸುಲ್ತಾನ ಸಿಕಂದರನ ಸೈನ್ಯದಲ್ಲಿದ್ದರು. ಎರಡನೇ ಮಗ ಮಹಮ್ಮದ್ ಇಕ್ಲಾಲಸ್ ಖಾನ ಮತ್ತು ಮೂರನೆಯವನಾದ ಅಜೀಜಖಾನನು ಮೊಗಲರೊಡನೆ ಯುದ್ಧ ಮಾಡುವಾಗ ಮಡಿದರು. ಹೀಗಾಗಿ ಕೊನೆಯ ಮಗನಾದ ಅಬ್ದುಲ್ ರವೂಫ್ ಖಾನ

ನವಾಬನು. ತಂದೆಯ ನಂತರ ಸುಲ್ತಾನ ಸಿಕಂದರನ ವಿಶ್ವಾಸಕ್ಕೆ ಪಾತ್ರನಾಗಿ, ಅವನ ಆಪ್ತ ಸಲಹೆಗಾರನಾದನು. ಮುಂದೆ ಸಿಕಂದರ ಸುಲ್ತಾನನ ಅಂತರಂಗದ ಸ್ನೇಹಿತನೂ ಆದನು. ಆದಿಲ್ ಶಾಹಿ ರಾಜ್ಯದಲ್ಲಿ ರವೂಫ್‌ಖಾನನಿಗೆ ತುಂಬಾ ಗೌರವವಿತ್ತು.

ಸಮ್ರಾಟ ಔರಂಗಜೇಬನು ವಿಜಾಪುರವನ್ನಲ್ಲದೆ, ದಕ್ಷಿಣದ ಉಳಿದೆರಡು ಶಾಹೀ ರಾಜ್ಯಗಳನ್ನು ಉಧ್ವಸ್ತಗೊಳಿಸಿ, ತಾನೇ ಶಹಾನುಶಹಾ ಆಗುವ ಪ್ರತಿಜ್ಞೆ ಮಾಡಿ ಅಪಾರ ಸೈನ್ಯದೊಂದಿಗೆ ೧೬೮೫ ಮೇ ತಿಂಗಳಲ್ಲಿ ವಿಜಾಪುರಕ್ಕೆ ಬಂದು ತಳವೂರಿದನು. ವಿಜಾಪುರದ ಕೋಟೆಯಿಂದ ಅವನ ಸೈನ್ಯವು ಒಂದು ಯೋಜನೆ (ಸುಮಾರು ೧೨ ಮೈಲು) ಅಂತರದಲ್ಲಿ ನಿಂತಿತು. ಔರಂಗಜೇಬನು ಎಲ್ಲ ದಿಕ್ಕುಗಳಿಂದಲೂ ವಿಜಾಪುರವನ್ನು ಮುತ್ತಿದಾಗ ಆದಿಲ್ ಶಾಹಿ ಸೈನ್ಯವು ತತ್ತರಿಸಿತು. ೨೨-೦೬-೧೬೮೬ ರಂದು ಔರಂಗಜೇಬನು ವಿಜಾಪುರವನ್ನು ಗೆದ್ದನು. ಆಗ ಸಿಕಂದರ ಸುಲ್ತಾನನು, ತನ್ನ ಮಂತ್ರಿಯಾಗಿದ್ದ ಅಬ್ದುಲ್ ರವೂಫ್ ಖಾನನ್ನು ಸಂಧಾನಕ್ಕೆಂದು ಔರಂಗಜೇಬನ ಕಡೆ ಕಳಿಸಿದನು. ಅಬ್ದುಲ್ ರವೂಫ್ ಖಾನನು ಔರಂಗಜೇಬನ ಸೈನ್ಯಾಧಿಕಾರಿಯಾಗಿದ್ದ ಗಾಜೀ ಉದ್ದೀನ ಖಾನನೊಡನೆ ಪೂರ್ವಾಭಾವಿಯಾಗಿ ವಿಚಾರ ವಿನಿಮಯ ಮಾಡಿದನು. ನಂತರ ಗಾಜೀಉದ್ದೀನ ಖಾನನು ಅಬ್ದುಲ್‌ರವೂಫ್‌ಖಾನನ್ನು ಔರಂಗಜೇಬನ ಬಳಿ ಕರೆದುಕೊಂಡು ಹೋಗಿ ಭೇಟಿ ಮಾಡಿಸಿದನು. ರವೂಫ್‌ಖಾನನು ತನ್ನ ಸುಲ್ತಾನನ ಇಂಗಿತವನ್ನು ಅವನ ಮುಂದಿಟ್ಟನು. ಇಬ್ಬರ ಮಧ್ಯೆ ಒಪ್ಪಂದವಾಗಿ, ೧೬೮೬ ಸೆಪ್ಟೆಂಬರ್ ೧೩ ರಂದು ಸಿಕಂದರ ಸುಲ್ತಾನನು ವಿಜಾಪುರ ಸಿಂಹಾಸನ, ಕೋಟೆ ಹಾಗೂ ಆದಿಲ್ ಶಾಹಿ ಸಾಮ್ರಾಜ್ಯದ ಸರ್ವಸ್ವವನ್ನೂ ಔರಂಗಜೇಬನಿಗೆ ಒಪ್ಪಿಸಿದನು. ಔರಂಗಜೇಬನು ಪರಾಜಿತನಾದ ಸಿಕಂದರ ಸುಲ್ತಾನನ್ನು ಅರಮನೆಯಿಂದ ಹೊರಗೆ ಕರೆತಂದು ತನ್ನ ಡೇರೆಯ ಬದಿಯಲ್ಲಿಯೇ ಇನ್ನೊಂದು ಡೇರೆಯನ್ನು ಹಾಕಿಸಿ, ಪರಿವಾರ ಸಮೇತ ಅವನು ಅಲ್ಲಿರುವಂತೆ ವ್ಯವಸ್ಥೆ ಮಾಡಿದನು. ಔರಂಗಜೇಬನು ಸಿಕಂದರನಿಗೆ ಒಂದು ಲಕ್ಷ ರೂಪಾಯಿ ವರ್ಷಾಶನವನ್ನು ಮಂಜೂರು ಮಾಡಿದನು. ಸಮ್ರಾಟ ಔರಂಗಜೇಬ ಈಗ ಆದಿಲ್ ಶಾಹಿ ರಾಜ್ಯದ ಒಡೆಯನಾದನು. ಸುಲ್ತಾನ ಸಿಕಂದರನು ಔರಂಗಜೇಬನ ಕೈದಿಯಾದನು.

ಸುಲ್ತಾನ ಸಿಕಂದರನು ವಿಜಾಪುರ ಕೋಟೆಯ ಮೇಲಿನ ತನ್ನ ಹಕ್ಕುಗಳನ್ನು ತ್ಯಜಿಸಿ, ಸೆರೆಯಾಳಾಗಿ, ಡೇರೆ ವಾಸಕ್ಕೆ ಬರುವಾಗ, ಕೋಟೆಯ ಬೀಗದ ಕೈ ಮತ್ತು ರಾಜಮುದ್ರೆಯನ್ನು ಔರಂಗಜೇಬನಿಗೆ ಕೊಟ್ಟುಬರಲು ಮತ್ತೆ ಅಬ್ದುಲ್ ರವೂಫಖಾನನನ್ನು ಕಳುಹಿಸಿದನು. ಅಂದಿಗೆ ಆದಿಲ್ ಶಾಹಿ ರಾಜ್ಯವು ಅಸ್ತಂಗತವಾಯಿತು. ಇದರಿಂದ ಅಬ್ದುಲ್ ರವೂಫಖಾನ ಕೂಡ ನಿರಾಶ್ರಿತನಾದನು. ಆದಿಲ್‌ಶಾಹಿ ಸಾಮ್ರಾಜ್ಯದ ಮೊಹರನ್ನು ಕೊಡಲು ಬಂದ ಅಬ್ದುಲ್ ರಾವೂಫಖಾನನನ್ನು ಔರಂಗಜೇಬನು ನೋಡಿ, ಆಕರ್ಷಿತನಾದನಲ್ಲದೆ, ಅವನಿಗೆ ಮೊಗಲ್ ಸೇವೆಯನ್ನು ಸ್ವೀಕರಿಸಲು ಆಹ್ವಾನವನ್ನಿತ್ತನು.

ರವೂಫ್‌ಖಾನನ ರೂಪ, ಶೌರ್ಯ, ಬುದ್ಧಿಮತ್ತೆ, ಮತ್ತು ಆಫಘಾನಿ ದರ್ಪವನ್ನು ಅವನು ಈ ಮೊದಲೇ ತಿಳಿದುಕೊಂಡಿದ್ದನು. ಆದ್ದರಿಂದ ಸಮ್ರಾಟ ಔರಂಗಜೇಬನು ಅವನಿಗೆ ಕರ್ನಾಟಕ ಸುಬೇದಾರಿಕೆಯನ್ನು ದಯಪಾಲಿಸಿದನು.ಸಿಕಂದರ ಆದಿಲ್ ಶಾಹಿ ಆಶ್ರಯವು ತಪ್ಪಿದ್ದರಿಂದ ಅಬ್ದುಲ್ ರವೂಫ್‌ಖಾನನಿಗೆ ಬೇರೆ ಚಾಕರಿ ಬೇಕಿತ್ತು. ಅರಸಿಕೊಂಡು ಹೋಗಬೇಕಿದ್ದ ವನಸ್ಪತಿ ಬಳ್ಳಿ ಈಗ ಕಾಲಿಗೆ ತಾನೇ ತಗಲಿದಂತಾಯಿತು.

ಔರಂಗಜೇಬನು ಅಬ್ದುಲ್ ರವೂಫ್‌ಖಾನನಿಗೆ ದಿಲೇರಜಂಗ ದಿಲೇರ ಬಹದ್ದೂರ ಎಂಬ ಬಿರುದು, ಹತ್ತು ಸಾವಿರ ಕಾಲ್ದಳ ಹಾಗೂ ಏಳು ಸಾವಿರ ಅಶ್ವದಳದ ಮನಸುಬದಾರಿಕೆ(ಮುಖ್ಯಸ್ಥ) ಕೊಟ್ಟು, ವಿಜಾಪುರದಿಂದ ಬಂಕಾಪುರಕ್ಕೆ ಕಳಿಸಿದನು. ಔರಂಗಜೇಬನು ಮೂರು ಸರಕಾರ್ ಮತ್ತು ಇಪ್ಪತ್ತೆರಡು ಮಹಲುಗಳನ್ನು ಒಳಗೊಂಡ ಕರ್ನಾಟಕ ಸುಬಾ (ಪ್ರಾಂತ) ರಚಿಸಿ ಸನದನ್ನು ಕೊಟ್ಟನು:

೧. ಸರಕಾರ್ - ಬಂಕಾಪುರ
೨. ಸರಕಾರ್ - ಅಜಂನಗರ (ಬೆಳಗಾವಿ)
೩. ಸರಕಾರ್ - ತೊರಗಲ್ಲ

೧. ಪರಗಣಾ - ಕುಂದಗೋಳ
೨. ಪರಗಣಾ - ಕಾರಡಗಿ
೩. ಪರಗಣಾ - ಮಿಶ್ರೀಕೋಟೆ
೪. ಪರಗಣಾ - ಹಾನಗಲ್ಲ
೫. ಪರಗಣಾ - ಬಂಕಾಪುರ
೬. ಪರಗಣಾ - ತಿಳವಳ್ಳಿ
೭. ಪರಗಣಾ - ಅಡೂರು
೮. ಪರಗಣಾ - ಕುಪ್ಪೇಲ್ಲೂರು
೯. ಪರಗಣಾ - ರಾಣೇಬೆನ್ನೂರು
೧೦. ಸಮತ್ - ಬೊಮ್ಮಗಟ್ಟ
೧೧. ಸಮತ್ - ಕೆರೂರು (ಬದ್ರೂಕ)
೧೨. ಸಮತ್ - ಕೆರೂರು (ಖುರ್ದ್)
೧೩. ಸಮತ್ - ಕೋಡ
೧೪. ಸಮತ್ - ಕಾಗಿನೆಲ್ಲಿ
೧೫. ಸಮತ್ - ನಿಡಸಂಗಿ
೧೬. ಸಮತ್ - ಶಿಗ್ಗಾವಿ
೧೭. ಸಮತ್ - ಮಾಸೂರು

೧೮. ಸಮತ್ - ಕಲಘಟಗಿ
೧೯. ಸಮತ್ - ತಡಸ
೨೦. ಪೇಟ - ಹಾವೇರಿ
೨೧. ಪೇಟ - ಹಂಸಭಾವಿ
೨೨. ದೇಹಾತ- ಕಿಲ್ಲೆ ಐರಣಿ

ಮೂರು ಸರಕಾರ್ ಹಾಗೂ ಇಪ್ಪತ್ತೆರಡು ಮಹಲುಗಳ ವಿಶಾಲ ಸವಣೂರು ರಾಜ್ಯಕ್ಕೆ ಎರಡು ಕೋಟಿ ನಲವತ್ತು ಸಾವಿರ ರೂಪಾಯಿ ವಾರ್ಷಿಕ ಉತ್ಪನ್ನ ಬರುತ್ತಿತ್ತು. ಕೃಷ್ಣ ಮತ್ತು ತುಂಗಭದ್ರಾ ನದಿಗಳ ಮಧ್ಯದ ಪ್ರದೇಶವೆಲ್ಲವೂ ಸವಣೂರು ರಾಜ್ಯಕ್ಕೆ ಸೇರಿತ್ತು. ಕರ್ನಾಟಕ ಸುಬೇದಾರಿಕೆಯಲ್ಲದೆ, ಕಿತ್ತೂರು, ಕೊಣ್ಣೂರು,ಹೊಸರಿತ್ತಿ, ನವಲಗುಂದ, ಹುನಗುಂದ, ಜಾಲೀಹಾಳ, ಕೌಜಲಗಿ, ಹಳೇಹುಬ್ಬಳ್ಳಿ, ಮುಳಗುಂದ, ಗದಗ, ಡಂಬಳ ಮತ್ತು ಕುಂಕೂರು ಜಮೀನುದಾರನ್ನು ಹತೋಟಿಯಲ್ಲಿಟ್ಟುಕೊಂಡು ಅವರಿಂದ ಖಂಡಣಿ ಎತ್ತಿ ಔರಂಗಜೇಬನಿಗೆ ಮುಟ್ಟಿಸುವ ಅಧಿಕಾರವನ್ನು ರವೂಫ್‌ಖಾನ ನವಾಬನು ಪಡೆದನು. ಸಮ್ರಾಟ ಔರಂಗಜೇಬನು ಅಧಿಕಾರ ಹಸ್ತಾಂತರದ ಸನದನ್ನು ವಿಜಾಪುರದಲ್ಲಿ ೧೬೮೬ರ ಕೊನೆಯಲ್ಲಿಸಹಿ ಮಾಡಿರಬೇಕು. ಅಬ್ದುಲ್ ರವೂಫ್‌ಖಾನನು ಕರ್ನಾಟಕ ಪ್ರಾಂತದ ಸುಬೇದಾರನೆಂದು ಮೊದಲು ಬಂಕಾಪುರಕ್ಕೆ ಬಂದನು.

ಅಬ್ದುಲ್ ರವೂಫ್‌ಖಾನನಿಗೆ ಸಮ್ರಾಟ ಔರಂಗಜೇಬನು ತನ್ನ ಮಗಳನ್ನು ಕೊಟ್ಟು ವಿವಾಹ ಮಾಡಿದನು ಎಂದು 'ದಿಲೇರಜಂಗ' ಕಾವ್ಯದಲ್ಲಿ ಉಲ್ಲೇಖಿಸಲಾಗಿದೆ. ಆದರೆ ಸಮಕಾಲೀನ ಮೊಗಲ ಇತಿಹಾಸದಲ್ಲಿ ಇದನ್ನು ಪುಷ್ಟೀಕರಿಸುವ ಸಂಗತಿಯ ಉಲ್ಲೇಖವಿಲ್ಲ. ಪ್ರಾಯಶಃ ಕವಿಯ ಉತ್ಪ್ರೇಕ್ಷೆ ಇರಬೇಕು.

## ಅಬ್ದುಲ್ ರವೂಫ್‌ಖಾನ (೧೬೮೬-೧೭೨೯)

ಸವಣೂರು ರಾಜ್ಯದ ಜನಕನೆನಿಸುವ ಅಬ್ದುಲ್‌ರವೂಫ್‌ಖಾನ ದಿಲೇರಜಂಗ ದಿಲೇರ ಬಹದ್ದೂರನು ಕರ್ನಾಟಕ ಸುಬೇದಾರನೆಂದು ಮೊದಲು ನೇಮಕಗೊಂಡನು. ಇವನ ತಂದೆ ಅಬ್ದುಲ್ ಕರೀಮಖಾನನೂ ಈ ಮೊದಲೇ ಸುಬೇದಾರನೆಂದು ನೇಮಕಗೊಂಡಿದ್ದನು. ಆದರೆ ವಿಜಾಪುರದ ಆಂತರಿಕ ಕಲಹಗಳಿಂದ ಖವಾಸಖಾನ ವಜೀರನು ಕರೀಮಖಾನನ ಈ ಅವಕಾಶವನ್ನು ತಪ್ಪಿಸಿದನು. ಇದರಿಂದ ೧೬೮೬-೮೭ರಲ್ಲಿ ಸವಣೂರು ರಾಜ್ಯದ ಪ್ರಪ್ರಥಮ ಸುಬೇದಾರಿಕೆಯನ್ನು ವಹಿಸಿಕೊಂಡ ಅಬ್ದುಲ್ ರವೂಫ್ ಖಾನನೇ ರಾಜ್ಯದ ಸಂಸ್ಥಾಪಕನಾದನು. ಬಂಕಾಪುರವನ್ನು ರಾಜಧಾನಿಯನ್ನಾಗಿಸಿಕೊಂಡು ತಲೆ ಎತ್ತಿದ ಕರ್ನಾಟಕ ಸುಭಾ, ಸವಣೂರು ರಾಜ್ಯವಾದದ್ದು, ಅಬ್ದುಲ್ ರವೂಫ್ ಖಾನನು ಸವಣೂರನ್ನು ಕಟ್ಟಿಸಿ ರಾಜಧಾನಿಯನ್ನು ಹೊಸ ಊರಿಗೆ ತೆಗೆದುಕೊಂಡು ಹೋದಾಗ!

ಮೊದಲು ಸವಣೂರು ಅಸ್ತಿತ್ವದಲ್ಲಿ ಇರದ್ದರಿಂದ, ಅಬ್ದುಲ್ ರವೂಫ್‌ಖಾನನು ರಾಷ್ಟ್ರೀಯ ಹೆದ್ದಾರಿಯ ಮೇಲಿದ್ದ ಬಂಕಾಪುರವನ್ನು ತನ್ನ ಮೊದಲಿನ ರಾಜಧಾನಿಯನ್ನಾಗಿ ಮಾಡಿಕೊಂಡು,ಕರ್ನಾಟಕ ಸುಬಾದ ಆಡಳಿತೆಯನ್ನು ನಡೆಸಹತ್ತಿದನು. ರವೂಫ್‌ಖಾನನಿಗೆ ತನ್ನ ರಾಜ್ಯಕ್ಕೆ ಒಂದು ಹೊಸ ರಾಜಧಾನಿ ಬೇಕೆನಿಸಿತು. ಅದು ಪ್ರಶಸ್ತ ತಾಣದಲ್ಲಿ ಇರಬೇಕೆಂದೂ ಅವನಿಗೆ ಆಶೆಯಾಯಿತು. ಅದಕ್ಕಾಗಿ ಅವನು, ರಮ್ಯವಾದ ಸ್ಥಳವನ್ನು ಹುಡುಕುತ್ತಿರುವಾಗ ಮರಗಳಿಂದ ಆವೃತವಾದ 'ಜನ್ಮರನಹಳ್ಳಿ' (ಜನಮಾನರನ ಹಳ್ಳಿ) ಅವನಿಗೆ ಕಂಡಿತು. ಈ ಹಳ್ಳಿ ಬಂಕಾಪುರದ ಪಕ್ಕದಲ್ಲಿಯೇ ಇದ್ದಿತು. ಅಬ್ದುಲ್ ರವೂಫ್ ಖಾನನು ಈ ಹಳ್ಳಿಯಲ್ಲಿ ಹೊಸ ರಾಜಧಾನಿಯನ್ನು ಕಟ್ಟಿಸಿದನು. ಸ್ಥಾಪನೆಯ ಕಾಲಕ್ಕೆ ಈ ರಾಜಧಾನಿಗೆ ಯಾವ ಹೆಸರಿಟ್ಟನು ಅನ್ನುವ ಉಲ್ಲೇಖಗಳಿಲ್ಲ. ಅವನು ತನ್ನ ರಾಜಧಾನಿಯನ್ನು ಬಂಕಾಪುರದಿಂದ ಈ ಹೊಸ ಊರಿಗೆ ಶ್ರಾವಣ ಮಾಸದಲ್ಲಿ ಬದಲಾಯಿಸಿದ್ದರಿಂದ ಈ ಹೊಸ ರಾಜಧಾನಿ ಶ್ರಾವಣೂರು, ಸಾವಣೂರು, ಸವಣೂರು ಆಗಿರಬೇಕು ಎಂಬ ಹೇಳಿಕೆ ಜನಜನಿತವಾಗಿದೆ. ಸವಣೂರು ನವಾಬರ ಇತಿಹಾಸವನ್ನು ಹೇಳುವ ೧೮೬೦ರಲ್ಲಿ ಪ್ರಕಟವಾದ 'ದಿಲೇರಜಂಗೀ' ಎಂಬ ಪರ್ಶಿಯನ್ ಕಾವ್ಯ ಇದನ್ನು 'ಶಹಾನೂರು' ಎಂದೂ ಕರೆದಿದೆ. 'ಶಹಾ'(ಅರಸು) ಅನ್ನುವ ಪರ್ಶಿಯನ್ ಶಬ್ದಕ್ಕೆ 'ಊರು' ಅನ್ನುವ ದ್ರಾವಿಡ ಶಬ್ದ ಹೇಗೆ ಸೇರಿತೋ ಗೊತ್ತಿಲ್ಲ. ಈದು ಪೂರ್ಣ ಪರ್ಶಿಯನ್ ಶಬ್ದದ ಊರಾಗಿದ್ದರೆ 'ಶಹಾಬಾದ' ಆಗಬೇಕಿತ್ತೇನೋ! ಆದರೆ ಅದು ಹಾಗಾಗಿಲ್ಲ: ಸವಣೂರು ಹೆಸರಿನ ಮೂಲ ಬೇರೆಯೇ ಇರಬೇಕು.

ಸವಣೂರಿನ ಮೂಲವನ್ನು ಹೇಳುವ ಪ್ರಾಚೀನ ಹಾಗೂ ನಂತರದ ಇಪ್ಪತ್ತು ಶಿಲಾಶಾಸನಗಳಿವೆ. ಪೂರ್ವದಲ್ಲಿ ಸವಣೂರನ್ನು ಎರಡು ನೂರು ಮಹಾಜನರು (ಬ್ರಾಹ್ಮಣ ಮುಖಂಡರು) ಆಡಳಿತವನ್ನು ನೋಡಿಕೊಳ್ಳುತ್ತಿದ್ದರು. ೧೦೮೭ರ ಶಿಲಾಶಾಸನದಲ್ಲಿ ಸವಣೂರಿನ ಮಹಾಜನರು ಮಧುಸೂದನ ಅನ್ನುವ ಯೋಧನನ್ನು ಸವಣೂರನ್ನು ರಕ್ಷಿಸಲು ಊರ ಮುಖ್ಯಸ್ಥನನ್ನಾಗಿ ಆಯ್ಕೆ ಮಾಡಿದರು ಎಂದಿದೆ. ಎರಡನೇ ಇಬ್ರಾಹಿಂ ಆದಿಲ್ ಶಾಹಿ ಕಾಲದ(೧೫೫೮) ಒಂದೇ ರೀತಿಯಲ್ಲಿರುವ ಕನ್ನಡ ಮತ್ತು ಮರಾಠಿ ಭಾಷೆಯ ಕೆಲ ಶಿಲಾಶಾಸನಗಳನ್ನು ಈಗಿನ ಸವಣೂರು ತಾಲೂಕು ಕಚೇರಿಯ (ಸಂಸ್ಥಾನವಿದ್ದಾಗ ಈ ಕಚೇರಿ ರಾಜಧಾನಿಯ ಆಡಳಿತ ಕಚೇರಿಯಾಗಿತ್ತು. ಇಲ್ಲಿಯೇ ನವಾಬನು ದರ್ಬಾರನ್ನು ನಡೆಯಿಸುತ್ತಿದ್ದನು) ಗೋಡೆಗಳಿಗೆ ತಗಲಿಸಿದ್ದಾರೆ. ಹೀಗಾಗಿ ಸವಣೂರಿನ ಪ್ರಾಚೀನತೆ ಇಂದಿಗೂ ನಿಗೂಢವಾಗಿಯೇ ಉಳಿದಿದೆ.

೧೮೬೦ರಲ್ಲಿ ಪ್ರಕಟವಾದ 'ದಿಲೇರಜಂಗೀ' ಅನ್ನುವ ಪರ್ಶಿಯನ್ ಕಾವ್ಯವು ಪ್ರಾರಂಭದಲ್ಲಿ ಸವಣೂರನ್ನು ಶಹಾನೂರು ಎಂದು ಕರೆದರೂ ಹದಿನೈದನೇ ಪ್ರಕರಣದಲ್ಲಿ ಸವಣೂರಿನ ಮೊಟ್ಟಮೊದಲಿನ ನವಾಬ ಅಬ್ದುಲ್ ರವೂಫ್‌ಖಾನನು ಹೊಸ

ರಾಜಧಾನಿಯನ್ನು 'ಸಾವನಹಳ್ಳಿ' ಅನ್ನುವ ಜನರಹಿತ ಹಳ್ಳಿಯಲ್ಲಿ ಕಟ್ಟಿದ್ದರಿಂದ ಇದಕ್ಕೆ 'ಸಾವನೂರು' 'ಸವಣೂರು' ಅನ್ನುವ ಹೆಸರು ಬಂದಿತೆಂದು ಹೇಳುತ್ತದೆ. ಅವನು ಇಲ್ಲಿ ಏಕೆ ತನ್ನ ರಾಜಧಾನಿಯನ್ನು ಕಟ್ಟಿದನೆಂಬುದಕ್ಕೆ ಅತ್ಯಂತ ರೋಚಕವಾದ ಸಂಗತಿಯನ್ನು ಕವಿ ಕೆಳಗಿನಂತೆ ಉಲ್ಲೇಖಿಸಿದ್ದಾನೆ. ಪ್ರಾಯಶಃ ಈ ಕನ್ನಡ ಗ್ರಾಮ 'ಸಾವನಹಳ್ಳಿ' ಸಂಸ್ಕೃತೀಕರಣಗೊಂಡು 'ಜನ್ಮರನ' ಹಳ್ಳಿಯಾಯಿತೇನೋ!:

## ಸವಣೂರು ಅನ್ನುವ ಹೆಸರು ಹೇಗೆ ಬಂಧಿತು?

ಈಶ್ವರನ ಕೃಪೆಯಿಂದ ನವಾಬ ರವೂಫ್‌ಖಾನನು ಮೊಗಲ್ ದೊರೆ ಔರಂಗಜೇಬನಿಂದ ಕರ್ನಾಟಕ ಸುಬೇದಾರಿಕೆಯನ್ನು ಪಡೆದು ವಿಜಾಪುರದಿಂದ ಬಂಕಾಪುರಕ್ಕೆ ಬಂದನು. ಅಲ್ಲಿ ಆಗ ಭದ್ರವಾದ ಕೋಟೆಯಿತ್ತು. ಅದು ರಾಜಮಾರ್ಗದ ಬದಿಗಿತ್ತು. ಔರಂಗಜೇಬನು ರವೂಫ್‌ಖಾನನಿಗೆ ಸುಬೇದಾರಕಿ ಸನದನ್ನು ಕೊಟ್ಟಾಗ, ಅವನಿಗೆ ಕರ್ನಾಟಕ ಸುಬಾದ ಮುಖ್ಯಸ್ಥನೆಂದು ಕೊಟ್ಟಿದ್ದನೇ ಹೊರತು ಸವಣೂರ ನವಾಬನೆಂದು ಸನದನ್ನು ಕೊಟ್ಟಿರಲಿಲ್ಲ. ಕಾರಣ ಆಗ ಸವಣೂರೇ ಅಸ್ತಿತ್ವದಲ್ಲಿ ಇರಲಿಲ್ಲ. ಬಂಕಾಪುರದ ಸುತ್ತಲೂ ಜನವಸತಿ, ಫಲವತ್ತಾದ ಭೂಮಿಗಳಿದ್ದವು. ಆದರೆ ಬಂಕಾಪುರ ರಾಜ್ಯದ ದುರಾಡಳಿತದಿಂದ ಪ್ರಜೆಗಳು ಬೇಸತ್ತಿದ್ದರು. ಕಳ್ಳಕಾಕರ, ಹಾದಿಹೋಕರ ಭಯವು ಅತಿಯಾಗಿತ್ತು. ಜನರು ಭಯದ ನೆರಳಿನಲ್ಲಿಯೇ ಜೀವನವನ್ನು ಸಾಗಿಸುತ್ತಿದ್ದರು. ಅಬ್ದುಲ್ ರವೂಫ್‌ಖಾನನು ಅಧಿಕಾರವನ್ನು ವಹಿಸಿಕೊಂಡೊಡನೆ ಈ ಕಳ್ಳರ ಹಾಗೂ ದರೋಡೆಕೋರರ ಭಯದಿಂದ ಪ್ರಜೆಗಳನ್ನು ಮುಕ್ತ ಮಾಡಿದನು. ಬಂಕಾಪುರ ಹಾಗೂ ಅದರ ಸುತ್ತಲಿನ ಪ್ರದೇಶದಲ್ಲಿ ಶಾಂತಿ ನೆಲೆಸಿತು.

ಅಬ್ದುಲ್ ರವೂಫ್‌ಖಾನನಿಗೆ ಬೇಟೆಯ ಗೀಳು. ಮೇಲಿಂದ ಮೇಲೆ ಕಾಡುಮೃಗ ಹಾಗು ಕಾಡು ಪಕ್ಷಿಗಳ ಬೇಟೆಗೆ ಹೋಗತ್ತಿದ್ದನು. ಅವನ ಜೊತೆ ಸರದಾರರ, ಸ್ನೇಹಿತರ, ಸಂಬಂಧಿಕರ ಒಂದು ಗುಂಪು ಇರುತ್ತಿತ್ತು. ರವೂಫ್‌ಖಾನನು ಬೇಟೆಯಾಡುತ್ತ ಬಂಕಾಪುರದಿಂದ ಪೂರ್ವಕ್ಕೆ ಐದು ಮೈಲುಗಳ ಅಂತರದಲ್ಲಿರುವ ಸಾವನಹಳ್ಳಿಗೆ ಬಂದನು. ಅದು ನಿರ್ಜನವಾಗಿತ್ತಲ್ಲದೆ, ಬಂಜರು ಭೂಮಿಯಾಗಿತ್ತು. ಅಲ್ಲಲ್ಲಿ ಯಾರೋ ಉತ್ತು ಬಿತ್ತು ಬೆಳೆಯನ್ನು ಪಡೆಯುತ್ತಿದ್ದರು.

ಅಬ್ದುಲ್ ರವೂಫ್ ಖಾನನು ಬೇಟೆಯನ್ನು ಹುಡುಕುತ್ತಿದ್ದಾಗ, ಕಂಟಿಯಿಂದ ಒಂದು ಮೊಲವು ಹಾರಿ ಓಡಹತ್ತಿತ್ತು. ಅದನ್ನು ನೋಡಿ ನವಾಬನ ಬೇಟೆ ನಾಯಿಗಳು ಹಿಂದೆ ಬೆನ್ನಟ್ಟಿದವು. ಮುಂದೆ ಮೊಲವು ಓಡಹತ್ತಿತು. ದುರ್ಬಲವಾದ ಮೊಲಕ್ಕೆ ಈ ಬಲಿಷ್ಠ ನಾಯಿಗಳ ಕೈಯಲ್ಲಿ ಸಾಯುವುದು ಖಚಿತವೆಂದು ಅನಿಸಿದೊಡನೆ ಓಡುವುದನ್ನು ನಿಲ್ಲಿಸಿ, ಆತ್ಮರಕ್ಷಣೆಗೆಂದು ತನ್ನ ಕಣ್ಣಾನ್ನರಳಿಸಿ ಸಿಟ್ಟಿನ ಮುಖದಿಂದ ನಾಯಿಗಳೊಡನೆ ಹೋರಾಟಕ್ಕೆ

ಸಿದ್ಧವಾದಂತೆ ಉಗ್ರವಾಯಿತು. ನಾಯಿಗಳು ಅಂಜಿ ಮೊಲದೊಡನೆ ಹೋರಾಡಲು ಮುಂದೆ ಹೋಗಲಿಲ್ಲ. ಈ ನಿಸರ್ಗದ ವೈಚಿತ್ರ್ಯವನ್ನು ನೋಡಿದ ನವಾಬ ಅಬ್ದುಲ್ ರವೂಫ್‌ಖಾನನು ದುರ್ಬಲವಾದ ಸಣ್ಣ ಮೊಲವೊಂದು ಸಶಕ್ತ ದೊಡ್ಡ ನಾಯಿಗಳನ್ನು ಅಂಜಿಸಬೇಕಾದರೆ ಈ ನೆಲದ ಗುಣವೇ ಇದ್ದಿರಬೇಕೆಂದು ಅಂದುಕೊಂಡು ಸಾವನಹಳ್ಳಿ ಮಣ್ಣಿನಲ್ಲಿ ಅಡಗಿದ ಶೂರ ಗುಣಗಳನ್ನು ಗುರುತಿಸಿ, ಈ ಮಣ್ಣಿನ ಮೇಲೆಯೇ ತನ್ನ ಹೊಸ ರಾಜಧಾನಿಯನ್ನು ಕಟ್ಟಬೇಕೆಂದು ನಿರ್ಧರಿಸಿದನು. ನವಾಬನ ವಿಚಾರಕ್ಕೆ ಸುತ್ತಲಿದ್ದ ಸರದಾರರು, ಸ್ನೇಹಿತರು ಬೆಂಬಲವಿತ್ತರು.

ಅಬ್ದುಲ್ ರವೂಫ್‌ಖಾನನು ಬಂಕಾಪುರಕ್ಕೆ ಮರಳಿ ಬಂದು ತಾನೇ ಹೊಸ ರಾಜಧಾನಿಯ ನೀಲಿ ನಕ್ಷೆಯನ್ನು ಸಿದ್ಧಪಡಿಸಿದನು. ಸುಮುಹೂರ್ತದಲ್ಲಿ ರಾಜಧಾನಿಯ ನಿರ್ಮಾಣ ಪ್ರಾರಂಭವಾಯಿತು. ಮೊದಲು ಕಟ್ಟಲು ಪ್ರಾರಂಭವಾದದ್ದು, ದಲೇಲಪುರ ಅಥವಾ ಲಷ್ಕರ ಬಜಾರ. ಇಲ್ಲಿ ಜೀವನಾವಶ್ಯಕ ಪದಾರ್ಥಗಳು ಹಾಗೂ ಔಷಧಿಗಳು ದೊರೆಯುವಂತೆ ನವಾಬನು ವ್ಯವಸ್ಥೆ ಮಾಡಿದನು. ನಂತರ ಎರಡನೆಯದಾಗಿ ಜುಮ್ಮೇರಾತಪೇಟ ಮೂರನೆಯದಾಗಿ 'ಮಂಗಲಪೇಟೆ', ನಾಲ್ಕನೆಯದಾಗಿ 'ರಹಮತ್‌ಪುರ' ಅಥಾ 'ಜಮ್ಮಾಬಜಾರ'ಗಳನ್ನು 'ಜುಮ್ಮಾಬಜಾ' ಗಳನ್ನು ಕಟ್ಟಿಸಿದನು. ಊರ ಮಧ್ಯದಲ್ಲಿ ಐದನೆಯ 'ಬಾಜೀಕಟ್ಟಾ'(ತರಕಾರಿ ಪೇಟೆ) ನಿರ್ಮಿಸಿದನು. ಹಾಗೆಯೇ 'ಶಹಾಬಜಾರ್ '(ಹಳೇಪೇಟೆ), 'ಕೋರೀಪೇಟೆ' ಚಾರ್‌ಘುಂಬಾ ಬಜಾರ' ಎಂದು ಒಟ್ಟು ಎಂಟು ಪೇಟೆಗಳ ವಿಶಾಲ ರಾಜಧಾನಿಯನ್ನು ನಿರ್ಮಿಸಿದನು.

ಈ ನಗರದ ಕೋಟೆಗೆ ಆಯಾಯ ದಿಕ್ಕುಗಳಿಗೆ ಇರುವ ಊರುಗಳಿಗೆ ಅಭಿಮುಖವಾಗಿ ಲಕ್ಷ್ಮೇಶ್ವರ ದರವಾಜ, ಫತೇ ದರವಾಜ, ಬಂಕಾಪುರ ದರವಾಜ, ಹಾವೇರಿ ದರವಾಜ, ಹುರಳೀಕೊಪ್ಪೀ ದರವಾಜ, ಮೋತೀತಲಾವ ಬಾಗಿಲು ಎಂದು ದೊಡ್ಡ ದೊಡ್ಡ ಅಗಸೆಗಳನ್ನು ನಿರ್ಮಿಸಿದನು.

ಪ್ರಜೆಗಳಿಗೆ ವಾಸಿಸಲಿಕ್ಕೆ ವಿಶಾಲವಾದ, ಉನ್ನತವಾದ, ಸೌಧಗಳನ್ನು ನಿರ್ಮಿಸಿಕೊಳ್ಳಲು ಅನುಮತಿಯನ್ನಿತ್ತನು. ಹೀಗೆ 'ಸಾವನಹಳ್ಳಿ' ಸಾವನೂರು - ಸವಣೂರು ಆಯಿತು. ಈ ಸವಣೂರು ರಾಜಧಾನಿ ೧೬೮೬-೧೬೮೭ರ ಮಧ್ಯೆ ಅಸ್ತಿತ್ವದಲ್ಲಿ ಬಂದಿರಬಹುದು. ಹೀಗಾಗಿ ಶ್ರಾವಣ ಮಾಸಕ್ಕೂ ಸವಣೂರಿಗೂ ಸಂಬಂಧವೇ ಇದ್ದಿರಲಿಕ್ಕಿಲ್ಲವೆಂದು ನನ್ನ ಅಭಿಪ್ರಾಯ. ಶಹಾನೂರು ಸವಣೂರು ಆಗಿರುವ ಸಾಧ್ಯತೆಗಳನ್ನು ಸುಲಭವಾಗಿ ಅಲ್ಲಗಳೆಯಲು ಬರುವಂತಿಲ್ಲ!

ಸವಣೂರು ಪರಿಧಿಯು ಆರು ಮೈಲು ಇದ್ದಿತು. ಊರಿನ ಒಂದು ತುದಿಗೆ ನವಾಬ ಅಬ್ದುಲ್ ರವೂಫ್‌ಖಾನನು ತನ್ನ ಅರಮನೆಯನ್ನು ನಿರ್ಮಿಸಿದನು.

ಸವಣೂರು ಅಭಿವೃದ್ಧಿಗೊಂಡು, ಜನಸಂಖ್ಯೆ ಬೆಳೆಯುವ ಮೊದಲು ಹಜರತ್ ಶಹಾ ದಿವಾಣ ಅನ್ನುವ ಒಬ್ಬ ಸಂತನು ಸಾವನಹಳ್ಳಿಗೆ ಬಂದನು. ಅಲ್ಲಿಯೇ ಅವನಿಗೆ ಒಂದು ಗುಮ್ಮಟವನ್ನು ನಿರ್ಮಿಸಬೇಕೆಂಬ ಇಚ್ಛೆಯಾಯಿತು. ಅವನು ಒಂದು ಗುಮ್ಮಟಕ್ಕೆ, ಒಂದು ಮಸೀದಿಗೆ ಹಾಗೂ ಒಂದು ಮುಸಾಫಿರಖಾನಕ್ಕೆ ಬೇಕಾಗುವಷ್ಟು ಭೂಮಿಯನ್ನು ತೆಗೆದುಕೊಂಡು ತಾನೇ ಗುಮ್ಮಟವನ್ನು ಕಟ್ಟಿಸಲು ಪ್ರಾರಂಭಿಸಿದನು. ಗುಮ್ಮಟಕ್ಕೆ ತಳಪಾಯವನ್ನು ತೋಡಿದೊಡನೆ ಕಟ್ಟಡದ ಕೆಲಸಗಾರರು, ಶಿಲ್ಪಿಗಳು, ಕಲ್ಲು ಕಟೆಯುವವರು ಈ ಗುಮ್ಮಟದ ನಿರ್ಮಾಣಕ್ಕೆ ಸ್ವಯಂ ಸ್ಫೂರ್ತಿಯಿಂದ ಮುಂದೆ ಬಂದರು. ಪವಾಡ ಪುರುಷನಾಗಿದ್ದ ಹಜರತ್ ಶಹಾ ದಿವಾಣನು ಒಂದು ಬೇವಿನ ವೃಕ್ಷದ ಕೆಳಗೆ ಚಿಗರಿ ಚರ್ಮವನ್ನು ಹಾಸಿಕೊಂಡು ಹಗಲಿರುಳೂ ವಾಸಿಸುತ್ತಿದ್ದನು. ಎಷ್ಟಾದರೂ ಅವನು ಫಕೀರ. ಕಟ್ಟಡದ ಕೆಲಸ ಮಾಡಿದವರಿಗೆಲ್ಲ ಆ ಸಂತನು ಒಂದೊಂದು ಬೇವಿನ ಕಡ್ಡಿಯನ್ನು ಕೂಲಿಯೆಂದು ಕೊಡುತ್ತಿದ್ದನು. ಕೆಲಸವನ್ನು ಮಾಡಿದವರು ಅದನ್ನು ಸ್ವೀಕರಿಸಿದೊಡನೆ ಅವರು ಮಾಡಿದ ಕಾರ್ಯಕ್ಕನುಸಾರವಾಗಿ ಆ ಬೇವಿನ ಕಡ್ಡಿ ಬಂಗಾರದ ಅಥವಾ ಬೆಳ್ಳಿಯ ಅಥವಾ ತಾಮ್ರದ ಕಡ್ಡಿಯಾಗುತ್ತಿತ್ತು. ಹೆಚ್ಚು ಕೆಲಸ ಮಾಡಿದವರ ಬೇವಿನ ಕಡ್ಡಿ ಬಂಗಾರದ್ದಾದರೆ, ಕನಿಷ್ಠ ಕೆಲಸ ಮಾಡಿದವನದು ತಾಮ್ರದ ಕಡ್ಡಿಯಗುತ್ತಿತ್ತು. ಕೆಲದಿವಸಗಳಲ್ಲಿ ಆ ಗುಮ್ಮಟವು ಸಿದ್ಧವಾದಾಗ ಅದರ ಉದ್ದ ಒಂಬತ್ತು ಗಜ (ಮೂವತ್ತು ಅಡಿ) ಹಾಗೂ ಅದಕ್ಕೂ ಸ್ವಲ್ಪ ಹೆಚ್ಚು ಅಗಲವಾಗಿತ್ತು. ಅದರ ಮೇಲೆ ಬಂಗಾರದ ನೀರು ಕುಡಿಸಿದ ನಾಲ್ಕು ಗಜದ ಕಳಸವನ್ನು ಇಡಲಾಯಿತು. ಈ ಗುಮ್ಮಟಕ್ಕೆ ಸುಮಾರು ಒಂದುಲಕ್ಷ ರೂಪಾಯಿ ವೆಚ್ಚವಾಯಿತು. 'ಇದಕ್ಕೆ ಕಮಾಲ ಬಾಂಗಡಿ' ಅನ್ನುವ ಅಭಿದಾನವಾಯಿತು. ಈ ಗುಮ್ಮಟದ ಪ್ರಭಾವವು ಅದೆಷ್ಟು ಬೆಳೆಯಿತೆಂದರೆ ಸವಣೂರು ರಾಜ್ಯದ ಸಿಂಹಾಸನವನ್ನೇರುವ ನವಾಬರು ಮೊದಲು ಈ ಕಮಾಲ ಬಾಂಗಡಿಗೆ ಹೋಗಿ ಹಜರತ್ ಶಹಾರ ದರ್ಶನವನ್ನು ಪಡೆದು ಬರುತ್ತಿದ್ದರು. ಸಂತ ಹಜರತ್ ಶಹಾ ಕಮಾಲನು ನಂತರ ಇಲ್ಲಿಯೇ ಮೃತ್ಯುವನ್ನಪ್ಪಿದನು. ಈ ಸಂತ ಶಹಾ ಕಮಾಲ ದಿವಾಣನು,ಅಬ್ದುಲ್‌ರವೂಫ್ ಖಾನನಿಗೆ ಶಿಫಾರಸ್ಸನ್ನು ಮಾಡಿ, ಸರದಾರ ಮುಸ್ತಾಫ್ ಖಾನನಿಗೆ ರಾಜ್ಯದ ದಿವಾಣಗಿರಿಯನ್ನು ಕೊಡಿಸಿದನು. ಅದರಿಂದ ಮುಸ್ತಾಫ್ ಖಾನನು ಸಂತ ಕಮಾಲ ಶಹಾನಿಗೆ ತನ್ನ ಕೃತಜ್ಞತೆಯನ್ನು ಸೂಚಿಸಲು, 'ಮಸೀದಿ, ಮುಸಾಫಿರ್ ಖಾನಾ ಕಟ್ಟಿಸಿ ಅವುಗಳ ದಕ್ಷಿಣಕ್ಕೆ ಒಂದು ಮಹಾದ್ವಾರವನ್ನು ಕಟ್ಟಿಸಿದನು.

ಅಬುಲ್ ರವೂಫ್‌ಖಾನನು (೧೬೮೬-೧೭೧೯) ಸವಣೂರು ರಾಜ್ಯದಲ್ಲಿ ವ್ಯವಸಾಯ ಮತ್ತು ಕೈಗಾರಿಕೆಗಳಿಗೆ ಉತ್ತೇಜನವನ್ನಿತ್ತನು. ಅವನು ಅತ್ಯಂತ ಚಾಣಕ್ಷತನದಿಂದ ಈ ಇಪ್ಪತ್ತೆರಡು ಮಹಲುಗಳನ್ನು ಹಾಗೂ ಮೂರು ಸರಕಾರಗಳನ್ನು ಆಳಿದ್ದರಿಂದ ರಾಜ್ಯದಲ್ಲಿ ಶಾಂತಿ ಸುವ್ಯವಸ್ಥೆಗಳು ನೆಲೆಯಾಗಿದ್ದವು. ಕರ್ನಾಟಕ ಸುಬಾದ ಪ್ರಜೆಗಳು ಈ

ಆಳ್ವಿಕೆಯಿಂದ ಸುಪ್ರೀತರಾಗಿದ್ದರಿಂದ, ಆಲಂಗಿರಿ ಬಾದಶಹ ಔರಂಗಜೇಬನಿಗೆ ಸಂತೋಷವಾಯಿತು. ಆದರೆ ಔರಂಗಜೇಬನ ಮಗನಾದ ಸುಲ್ತಾನ ಮೌಜಮ್‌ನು ದಕ್ಷಿಣದಲ್ಲಿ ಗೊತ್ತುಗುರಿಯಿಲ್ಲದೆ ಉದಾಸೀನನಾಗಿ ಅಲೆಯುತ್ತಿರುವುದನ್ನು ಕೇಳಿ ತಂದೆ ವ್ಯಥಿತನಾದನು. ಅವನು ಒಂದು ರಾಜಾಜ್ಞೆಯನ್ನು ಹೊರಡಿಸಿ, ಅಬ್ದುಲ್ ರವೂಫ್‌ಖಾನನಿಗೆ ತನ್ನ ಮಗನನ್ನು ಎಲ್ಲಿದ್ದರೂ ಶೋಧಿಸಿ ದಿಲ್ಲಿಗೆ ಕಳಿಸಬೇಕೆಂದು ಆದೇಶವಿತ್ತನು. ಅಬ್ದುಲ್ ರವೂಫ್‌ಖಾನನು ಯುವರಾಜನನ್ನು ಶೋಧಿಸಿ ಅವನಿಗೆ ಬುದ್ಧಿ ಹೇಳಿ ದಿಲ್ಲಿಗೆ ಕಳಿಸಿದನು. ಪ್ರಾಯಶಃ ಔರಂಗಜೇಬ ಮತ್ತು ಮಗನ ಮಧ್ಯೆ ಹಣಕ್ಕಾಗಿ ಮನಸ್ತಾಪವಾಗಿತ್ತೇನೋ. ರವೂಫ್‌ಖಾನ ನವಾಬನು ಮೊಗಲ್ ಯುವರಾಜನಿಗೆ ಅವನ ತಂದೆಯ ಬಗ್ಗೆ ವಿಶ್ವಾಸ ಮೂಡಿಸಿ ದಿಲ್ಲಿಗೆ ಕಳಿಸಿದ್ದರಿಂದ ಔರಂಗಜೇಬ ಬಾದಶಹನು ಸವಣೂರು ನವಾಬ ರವೂಫ್‌ಖಾನನಿಗೆ ಜರೀವೇಷ ಮತ್ತು ವಜ್ರಗಳನ್ನು ಕೊಟ್ಟು ಮರ್ಯಾದೆ ಸಲ್ಲಿಸಿದನು.

ಕೂಸನೂರಿನ ಚೆನ್ನಯ್ಯನೆನ್ನುವ ಜಮೀನುದಾರನು ೧೭೧೦ರಲ್ಲಿ ದಂಗೆಯೆದ್ದು ತಾನು ಮೊಗಲರ ಬಂಧನವನ್ನು ಹರಿದು ಹಾಕಿರುವೆನೆಂದು ಪ್ರಕಟವಾಗಿ ಹೇಳಿದನು. ಇದು ಅಬ್ದುಲ್ ರವೂಫ್‌ಖಾನನಿಗೆ ಅವಮಾನವೆನಿಸಿತು. ಕೂಡಲೇ ನವಾಬನು ಚೆನ್ನಯ್ಯನ ಮೇಲೆ ಏರಿ ಹೋಗಿ ಅವನನ್ನು ಕೊಂದು ಹಾಕಿದನು. ಇದೇ ವರುಷ ಗದ್ವಾಲದ ಸೋಮಾರ ಅನ್ನುವ ರಾಜನು ತಾನು ಸ್ವತಂತ್ರನಾದನೆಂದು ಘೋಷಿಸಿದನು. ಇದು ಕೂಡ ಅಬ್ದುಲ್ ರವೂಫ್‌ಖಾನನಲ್ಲಿ ಕಿಚ್ಚನ್ನೆಬ್ಬಿಸಿತು. ಅದರಿಂದ ನವಾಬನು ಅವನ ಮೇಲೆ ದಾಳಿ ಮಾಡಲು ಸವಣೂರಿನಿಂದ ಹೊರಟು ಗದ್ವಾಲದ ಗಡಿಯಲ್ಲಿದ್ದ ಕನಕಗಿರಿಯಲ್ಲಿ ಆ ರಾಜನನ್ನು ಎದುರಿಸಿದನು. ಗದ್ವಾಲದ ರಾಜನು ನವಾಬನ ಮುಂದೆ ಕಾದಾಡುವಾಗ ಸೋಲಬೇಕಾಯಿತು. ಆಗ ಅಬ್ದುಲ್ ರವೂಫ್‌ಖಾನನು ಅವನಿಂದ 'ದಲ್ ಬದಲ್' ಅನ್ನುವ ದೈತ್ಯಾಕಾರದ ಜೋಡಿ ರಣಭೇರಿಗಳನ್ನು ಕಸಿದುಕೊಂಡನು. ಈ ಭೇರಿಗಳನ್ನು ಬಾರಿಸಿದರೆ ಮೂರು ಕೋಶ ಅಥವಾ ೧೨೦೦೦ ಗಜ ಅಥವಾ ಸುಮಾರು ಆರೂವರೆ ಮೈಲು ದೂರಕ್ಕೆ ಕೇಳಿಸುತ್ತಿತ್ತು. ಆ ನಗಾರಿಗಳ ಮೇಲೆ ನವಾಬನು ತನ್ನ ವಿಜಯದ ನಿಮಿತ್ತ 'ಕನ್ನಡಿಗರಿಂದ ಬಂದ ಕಾಣಿಕೆ' ಎಂದು ಪರ್ಶಿಯಾ ಭಾಷೆಯಲ್ಲಿ ಬರೆಸಿದನು. ಇದರ ಜೊತೆ ಅಬ್ದುಲ್ ರವೂಫ್‌ಖಾನನಿಗೆ ಫತೇರ ಹಬರ್ ಅನ್ನುವ ತೋಪು ದೊರಕಿತು. ಆ ದಲ್ -ಬದಲ್ ನಗಾರಿಗಳ ಮೇಲೆ ನವಾಬನು 'ಹಬೀಬೇ ಖಿದಾಪತ್ ಹತಾಪ ಸೋಮಾ ಕಾಫೀರಕಾ ಶಿರ ಕಾಟೆ ಆಜ್ -ಸನ್ ೧೧೨೪' (ಕಾಫೀರ ಸೋಮಾರನ ತಲೆ ಕತ್ತರಿಸಿದ್ದು ೧೭೧೦)ಎಂದು ಬರೆಸಿದನು. ಈ ಯುದ್ಧದಲ್ಲಿ ಸಹಾಯ ಮಾಡಿದ್ದಕ್ಕೆ ನವಾಬ ರವೂಫ್‌ಖಾನನು ಅಹಮ್ಮದ್ ಖಾನ ಖಾದರಿ ಉರುಫ್ ಸೈಯ್ಯದ್ ಆಲಿ ಖಾದರಿ ಸಾಹೇಬನಿಗೆ ಹಾನಗಲ್ಲ ಪರಗಣಾದ ಗಾಜೀಪುರವೆಂಬ ಊರನ್ನು ಜಹಗೀರಾಗಿ ಕೊಟ್ಟನು.

ಮೊಗಲ್ ದೊರೆಯು ತನ್ನ ಪ್ರತಿನಿಧಿಯಾದ ಅಬ್ದುಲ್ ರವೂಫ್‌ಖಾನನನ್ನು ತನ್ನ ರಾಜ್ಯದ ಇತರ ಪ್ರದೇಶಗಳಲ್ಲಿ ಗಲಭೆಗಳಾದಾಗ ಹತ್ತಿಕ್ಕಲು ಕಳಿಸುತ್ತಿದ್ದನು.ಅಲ್ಲದೆ, ಉತ್ತರ ಕರ್ನಾಟಕದ ಜಮೀನುದಾರರಾಗಿದ್ದ ದೇಸಾಯಿ,ದೇಶಪಾಂಡೆ, ನಾಡಗೌಡರರನ್ನು ರವೂಫ್‌ಖಾನನು ಸದೆಬಡಿದು ತನ್ನ ಸಾಮಂತರನ್ನಾಗಿ ಮಾಡಿಕೊಂಡಿದ್ದನು. ಕಿತ್ತೂರಿನ ಮುದಿಮಲ್ಲಪ್ಪ ದೇಸಾಯಿ ಮತ್ತು ಚಿಕ್ಕಮಲ್ಲಪ್ಪ ದೇಸಾಯಿ, ನವಿಲುಗುಂದದ ಲಿಂಗನಗೌಡ ದೇಸಾಯಿ, ಶಿರಹಟ್ಟಿಯ ಐದನೇ ಕೆಂಚನಗೌಡ ದೇಸಾಯಿ, ಡಂಬಳದ ದೇಸಾಯರು ರವೂಫ್‌ಖಾನನಿಗೆ ಪ್ರತಿವರುಷವೂ ಕಪ್ಪಕಾಣಿಕೆಗಳನ್ನು ಸಲ್ಲಿಸುತ್ತಿದ್ದರು. ಬೆಟಗೇರಿಯ ಮಾಂಡಲೀಕನು ಸವಣೂರು ರಾಜ್ಯದ ಕಪ್ಪ ಕಾಣಿಕೆ ಕೊಡಲು ನಿರಾಕರಿಸಿದಾಗ, ನವಾಬನು ನವಲಗುಂದದ ಲಿಂಗನಗೌಡ ದೇಸಾಯಿಯವರನ್ನು ಕಳಿಸಿ ವಸೂಲು ಮಾಡಿದನು.

ದಿಲ್ಲಿಯ ಸಮ್ರಾಟನ ಆಜ್ಞೆಯಂತೆ ಅಬ್ದುಲ್ ರವೂಫ್‌ಖಾನನು ಸುರಪುರದ ಬೇಡರ ನಾಯಕ ವಾಘನಗೆರೆ ಪಿತಾಂಬರ ಬಹಾರಿ ಪೀಡ ನಾಯಕನನ್ನು ಸದೆಬಡಿದು ಬಂದನು. ನವಾಬ ಅಬ್ದುಲ್ ರವೂಫ್ ಖಾನನ ಕಾಲದಲ್ಲಿ ಸವಣೂರಲ್ಲಿ ಶಾಂತಿ ನೆಲೆಸಿತ್ತು. ಪ್ರಜೆಗಳೆಲ್ಲರೂ ಸುಖಿವಾಗಿದ್ದರು. ಅವನ ಮೂವತ್ತೆರಡು ವರುಷಗಳ ಆಳ್ವಿಕೆಯು ಒಂದು ಒಳ್ಳೆಯ ಕಾಲವೆಂದು ಹೇಳಬಹುದು. ಅಬ್ದುಲ್ ರವೂಫ್‌ಖಾನನು ೧೭೭೯ರಲ್ಲಿ ತೀರಿಕೊಂಡನು. ಅವನಿಗೆ ಹನ್ನೆರಡು ಜನ ಗಂಡು ಮಕ್ಕಳಿದ್ದರು. ರವೂಫ್‌ಖಾನನ ನಂತರ ಅವನ ಮೊದಲ ಮಗ ಅಬ್ದುಲ್ ಫತೇಖಾನನು ಸಿಂಹಾನಸವನ್ನೇರಿದನು. ಆದರೆ ಅವನು ಮೂರು ತಿಂಗಳಲ್ಲೇ ಮರಣವನ್ನಪ್ಪಿದನು. ಅವನಿಗೆ ಗಂಡು ಸಂತಾನವಿಲ್ಲದ್ದರಿಂದ ಅವನ ತಮ್ಮನಾದ ಅಬ್ದುಲ್ ಯಾದಖಾನ ಉರ್ಫ್ ಮಹಮ್ಮದ್ ಖಾನನು (ರವೂಫ್‌ಖಾನನ ಎರಡನೇ ಮಗ) ಸಿಂಹಾಸನವನ್ನೇರಿದನು. ಅವನು ಕೂಡ ಆರೇ ತಿಂಗಳು ಗಾದಿಯ ಮೇಲೆ ಕುಳಿತನು. ಇವನು ನಿಪುತ್ರಕನಾಗಿ ಸತ್ತಿದ್ದರಿಂದ ಉಳಿದ ಸಹೋದರರಲ್ಲಿ ಸಿಂಹಾಸನಕ್ಕಾಗಿ ಅಂತಃಕಲಹಗಳು ಪ್ರಾರಂಭವಾದವು. ರವೂಫ್‌ಖಾನನ ಮೂರನೇ ಮಗನು ರವೂಫ್‌ಖಾನನು ಜೀವಿಸಿರುವಾಗಲೇ ತೀರಿಕೊಂಡಿದ್ದನು. ನಾಲ್ಕನೇ ಮಗನಾದ ಅಬ್ದುಲ್ ಸೂಲಖಾನ ಮತ್ತು ಐದನೆಯವನಾದ ಅಬ್ದುಲ್ ಕರೀಮಖಾನ ಬಾಗಿಲುಕೋಟೆಯಲ್ಲಿ ನಡೆದ ಘರ್ಷಣೆಯಲ್ಲಿ ಈ ಮೊದಲೇ ಮೃತರಾಗಿದ್ದರು. ಈ ಬಾಗಲಕೋಟೆ ಘರ್ಷಣೆಯಲ್ಲಿ ಬ್ಯಾಡಗಿ ಪ್ರಾಂತ್ಯದ ಗಳಸಂಗ ಜಹಗೀರು ನವಾಬನ ಕೈಬಿಟ್ಟಿತ್ತಲ್ಲದೆ, ಅವನ ಹಸಿರು ನಿಶಾನೆ, 'ದಲ್ - ಬದಲ್' ರಣಭೇರಿ ಮತ್ತು ಪಾಲಕಿಗಳು ಅಸ್ತವ್ಯಸ್ತವಾದವು. ಮುಂದೆ ೧೭೭೯ರಲ್ಲಿ ರವೂಫ್‌ಖಾನನ ಆರನೇ ಮಗನಾದ ಅಬ್ದುಲ್ ಗಫಾರಖಾನ ಸವಣೂರು ಸಿಂಹಾಸನವನ್ನೇರಿದನು. ಆಗ ನಡೆದ ಬಾಗಲಕೋಟೆ ಘರ್ಷಣೆಯಲ್ಲಿ ಕಳೆದುಹೋಗಿದ್ದ ಪಾಲಕಿ, ಯುದ್ಧಭೇರಿಗಳನ್ನು ಅವನ ಸೈನಿಕರು ಮರಳಿ ಪಡೆದು, ಹೊಸ ನವಾಬನಿಗೆ

ಕೊಟ್ಟರು. ಇದೇ ಘರ್ಷಣೆಯಲ್ಲಿ ಶೇಖ ಬಹಾಉದ್ದೀನನು ಹುತಾತ್ಮನಾಗಿದ್ದರಿಂದ ಅವನ ಸ್ಮರಣಾರ್ಥ ಅನಾಥಾಲಯವನ್ನು ನಡೆಸಲು ಅಬ್ದುಲ್ ಗಫಾರ್‌ಖಾನ್ ನವಾಬನು ನಂದೀಹಳ್ಳಿ ಮತ್ತು ಬನಹಳ್ಳಿ ಗ್ರಾಮಗಳನ್ನು ಇನಾಮಾಗಿ ಕೊಟ್ಟನು. ನಂದೀಹಳ್ಳಿ ಸವಣೂರಿನ ಬಳಿ ಇದೆ.

ಗಫಾರಖಾನನು ಯುವರಾಜನಿರುವಾಗ ಸವಣೂರು ಕೋಟೆಗೆ ದಿಲ್ಲಿ ದರವಾಜಾ ಮತ್ತು ಹೊರಗಿನ ಕೋಟೆಯ ಗೋಡೆಗಳನ್ನು ಕಟ್ಟಲಾಯಿತೆಂದು ಹೇಳಲಾಗುತ್ತದೆ. ಗಫಾರ್ ಖಾನನ ತಂದೆ ಅಬ್ದುಲ್ ರವೂಫ್‌ಖಾನನು ಬೇರೆಡೆ ದಂಡೆತ್ತಿ ಹೋದಾಗ, ಈ ಕೋಟೆಯಲ್ಲಿ ಗಫಾರ್ ಖಾನನು ಬದಲಾವಣೆ ಮಾಡಿದನಂತೆ. ತಂದೆ ವಿಜಯಿಯಾಗಿ ಸವಣೂರಿಗೆ ಬಂದಾಗ, ತನ್ನ ಮಗನು ದಿಲ್ಲಿ ದರವಾಜ ಕಟ್ಟಲು ವ್ಯಯಿಸಿದ ಅಪಾರ ಹಣವನ್ನು ನೋಡಿ ಆತಂಕವನ್ನು ವ್ಯಕ್ತಪಡಿಸಿದನು. ಆಗ ರವೂಫ್‌ಖಾನನು ಸಿಟ್ಟಿಗೆದ್ದು, "ನನ್ನ ಮಗನನ್ನು ಹೌದಿನಲ್ಲಿ ಮುಳುಗಿಸಿರಿ'' ಎಂದು ಹೇಳಿದನಲ್ಲದೆ, ಮಗನು ಇನ್ನು ತನ್ನ ಮುಂದೆ ಬರಬಾರದೆಂದು ಆಜ್ಞಾಪಿಸಿದನು. ಕಾರಣ, ಅಬ್ದುಲ್ ಗಫಾರ್ ಖಾನ ವ್ಯಯಿಸಿದ ಹಣದಿಂದ ನವಾಬನಿಗೆ ಸೈನಿಕರಿಗೆ ಸಂಬಳ ಕೊಡಲು ರಾಜ್ಯ ಭಂಡಾರದಲ್ಲಿ ಹಣವಿಲ್ಲದಂತಾಯಿತು. ಅಬ್ದುಲ್ ರವೂಫ್‌ಖಾನನು ತನ್ನ ಮಗನು ತನ್ನೆದುರು ಕಾಣಿಸಿಕೊಳ್ಳಬಾರದೆಂಬ ಆಜ್ಞೆ ಮಾಡಿರುವುದನ್ನು ನೋಡಿ ಸರದಾರರು ನೊಂದುಕೊಂಡರು. ಆಗ ದರಬಾರದ ಸರದಾರರು, ಜಮಾದಾರರು ಸೈನ್ಯದ ಜೇಷ್ಠ ಅಧಿಕಾರಿಗಳು ಸೇರಿ ಅಬ್ದುಲ್ ರವೂಫ್‌ಖಾನ ನವಾಬನನ್ನು ಕಂಡು "ಜಹಾಪನಾ, ನಿಮ್ಮ ಮಗನಾದ ರಾಜಕುಮಾರ ಅಬ್ದುಲ್ ಗಫಾರ್ ಖಾನನು 'ದಿಲ್ಲಿ ದರವಾಜ' ಪ್ರವೇಶ ದ್ವಾರವನ್ನು ನಿರ್ಮಿಸಲು ರಾಜ್ಯ ಭಂಡಾರದ ಸಂಪತ್ತನ್ನು ವ್ಯಯಿಸಿದ್ದರಿಂದ ಸಂಪತ್ತಿನ ಕೊರತೆಯಾಗಿ ಸೈನಿಕರಿಗೆ ಸಂಬಳಕ್ಕೆ ಹಣವಿಲ್ಲದ್ದು ಸಾಮಾನ್ಯ ಮಾತಲ್ಲ. ಆದರೆ ಅದಕ್ಕಾಗಿ ತಾವು ರಾಜಕುಮಾರರನ್ನು ಶಿಕ್ಷಿಸುವುದಾದರೆ, ಸೈನಿಕರೆಲ್ಲರೂ ಸಂಬಳವನ್ನು ಪಡೆಯದೇ ನಿಮ್ಮ ಸೇವೆಯನ್ನು ಮಾಡುವುದಾಗಿ ಒಪ್ಪಿದ್ದಾರೆ. ರಾಜ್ಯದ ಸಂಪತ್ತಿಕ ಸ್ಥಿತಿ ಸುಧಾರಿಸಿದಾಗ ಸೈನಿಕರಿಗೆ ತಾವು ಸಂಬಳವನ್ನೀಯಬೇಕು. ದಯವಿಟ್ಟು ರಾಜಕುಮಾರ ಅಬ್ದುಲ್ ಗಫಾರ್ ಖಾನರಿಗೆ ವಿಧಿಸಿದ ಶಿಕ್ಷೆಯನ್ನು ಮರು ಪರಿಶೀಲಿಸಬೇಕೆಂದು ನಮ್ಮ ಕೋರಿಕೆ'' ಎಂದು ಪ್ರಾರ್ಥಿಸಿದರು. ರವೂಫಾಖಾನನು ಮಗನನ್ನು ಕ್ಷಮಿಸಿದನು. ಅಬ್ದುಲ್ ಗಫಾರ್ ಖಾನನೇ ಸವಣೂರು ರಾಜ್ಯದ ಉತ್ತರಾಧಿಕಾರಿಯಾದನು.

## ಅಬ್ದುಲ್ ಗಫಾರ್ ಖಾನ ನವಾಬ(೧೭೨೦-೧೭೨೪)

ಅಬ್ದುಲ್ ರವೂಫಖಾನನ ಮರಣಾನಂತರ ಸವಣೂರು ರಾಜ್ಯವನ್ನು ಜ್ಯೇಷ್ಠ ಪುತ್ರನಾದ ಫತೇಖಾನನು ಆರು ತಿಂಗಳು ಮತ್ತು ಅವನ ತಮ್ಮನಾದ ಮಹಮ್ಮದ ಖಾನನು ಆರು ತಿಂಗಳು ಸಿಂಹಾಸನದ ಮೇಲಿದ್ದರು. ಆದರೆ ಅವರು ತಮ್ಮ

ಕಾಲಖಂಡದಲ್ಲಿ ಯಾವ ಗಮನಾರ್ಹ ಕಾರ್ಯವನ್ನೂ ಮಾಡಲಿಲ್ಲ. ಅಬ್ದುಲ್ ರವೂಫಖಾನನ ನಂತರ ಅವನ ನಾಲ್ಕು ಮಕ್ಕಳಾದ ಫತೇಖಾನ, ಮಹಮ್ಮದ ಖಾನ, ಗಫಾರ್ ಖಾನ ಮತ್ತು ಕೊನೆಯ ಮಗನಾದ ಸತ್ತಾರಖಾನರ ಮಧ್ಯ ಸಿಂಹಾಸನಕ್ಕೆ ಆಂತರಿಕ ವ್ಯಾಜ್ಯ ನಡೆಯಿತು. ಕೆಲಕಾಲ ಸವಣೂರಲ್ಲಿ ಆಡಳಿತವೇ ಕುಸಿದು ಬಿದ್ದಂತಾಗಿತ್ತು. ಫತೇಖಾನ ಮತ್ತು ಮಹಮ್ಮದ ಖಾನರು ಗಂಡು ಸಂತಾನವಿಲ್ಲದೆ ಸತ್ತಿದ್ದರಿಂದ ಮೂರನೇ ಮಗನಾದ ಅಬ್ದುಲ್ ಗಫಾರ್ ಖಾನನು ಸವಣೂರಿನ ನಾಲ್ಕನೇ ನವಾಬನೆಂದು ೧೭೨೦ ರಲ್ಲಿ ಅಧಿಕಾರವನ್ನು ವಹಿಸಿಕೊಂಡು ಐದು ವರುಷ ಸವಣೂರು ಸಿಂಹಾಸನದಲ್ಲಿದ್ದನು.

ಅಬ್ದುಲ್ ಗಫಾರ್ ಖಾನನು ಅಧಿಕಾರವನ್ನು ವಹಿಸಿಕೊಂಡೊಡನೆ, ಮರಾಠರು ಪುನಃ ತಮ್ಮ ರಾಜ್ಯ ವಿಸ್ತರಣೆಗೆ ಕೈ ಹಾಕಿದರು. ಮಹಾರಾಷ್ಟ್ರದಲ್ಲಿ ಅವರು ಸಂಪೂರ್ಣ ತಮ್ಮ ಅಧಿಕಾರವನ್ನು ಸ್ಥಾಪಿಸಿ, ಮಹಾರಾಷ್ಟ್ರದ ಹೊರಗೂ ಕೈ ಚಾಚಿದರು. ಬಾಳಾಜಿ ವಿಶ್ವನಾಥ ಪೇಶ್ವೆಯು ಮೊಗಲ್ ಚಕ್ರವರ್ತಿ ಮಹಮ್ಮದ ಶಹಾನಿಂದ ಪಡೆದ ಮೂರು ಸನದುಗಳ ಬಲದಿಂದ, ಸರದಾರ ರಾಸ್ತೇನನ್ನು ಕರ್ನಾಟಕ ಸುಬಾದತ್ತ ಕಳಿಹಿಸಿದನು. ಅಬ್ದುಲ್ ಗಫಾರ್ ಖಾನ ಅವನೊಡನೆ ಎಷ್ಟೇ ಹೋರಾಡಿದರೂ, ಮಿಶ್ರೀಕೋಟೆಯನ್ನು ಬಿಟ್ಟುಕೊಟ್ಟು ಒಪ್ಪಂದಕ್ಕೆ ಬರಬೇಕಾಯಿತು. ಈ ಸೇಡನ್ನು ತೀರಿಸಿಕೊಳ್ಳಲು ನವಾಬ ಅಬ್ದುಲ್ ಗಫಾರ್ ಖಾನನು ನಿಜಾಮನ ಬೆಂಬಲದಿಂದ ಸಣ್ಣ ದೇಶಗತಿಗಳ ಮೇಲೆ ದಾಳಿ ಮಾಡಿದನು. ಸಮೀಪದ ಲಕ್ಷ್ಮೇಶ್ವರ ದೇಸಾಯಿಯಾಗದ್ದ ಕೆಂಚನಗೌಡನನ್ನು ಸೋಲಿಸಿ ಲಕ್ಷ್ಮೇಶ್ವರ ಕೋಟೆಯನ್ನು ವಶಪಡಿಸಿಕೊಂಡನು. ಈ ಮೊದಲು ಲಕ್ಷ್ಮೇಶ್ವರವು ಕೊಲ್ಲಾಪುರದ ಶಾಹೂ ಮಹಾರಾಜನ ಅಧೀನದಲ್ಲಿತ್ತು. ಗಫಾರ್ ಖಾನನು ಲಕ್ಷ್ಮೇಶ್ವರ ನಗರವನ್ನು ಸುತ್ತುವರಿದಾಗ ಐದನೇ ಕೆಂಚನಗೌಡ ದೇಸಾಯಿಯು ಶಾಹೂವಿಗೆ ಸಹಾಯಕ್ಕಾಗಿ ಯಾಚಿಸಿದನು. ಮರಾಠ ಮುಖ್ಯಸ್ಥ ಶಾಹೂ ತಕ್ಷಣವೇ ಸೈನ್ಯದೊಂದಿಗೆ ವಿಸಾಜಿ ಭೋಸಲೆ ಮತ್ತು ಘನಶ್ಯಾಮ ನರಹರಿ ಅನ್ನುವ ಸರದಾರರನ್ನು, ದೇಸಾಯಿಯ ಸಹಾಯಕ್ಕೆ ಲಕ್ಷ್ಮೇಶ್ವರಕ್ಕೆ ಕಳಿಸಿದನು. ಈ ಯುದ್ಧ ೧೭೧೭ ಮತ್ತು ೧೭೨೫ರ ಮಧ್ಯೆ ನಡೆದಿರುವ ಸಂಭವವಿದೆ. ಪುಣೆಯ ಭಾರತೀಯ ಇತಿಹಾಸ ಸಂಶೋಧಕ ಮಂಡಳದ ೬೩ನೇ ತ್ರೈಮಾಸಿಕದಲ್ಲಿ (ಪುಟ:೧೦) ಈ ಯುದ್ಧ ೧೭೪೯ರಲ್ಲಿ ನಡೆದಿದೆ ಎಂಬ ಉಲ್ಲೇಖವಿದೆ. ಆದರೆ ಆಗ ಸವಣೂರು ಸಿಂಹಾಸನದ ಮೇಲೆ ಅಬ್ದುಲ್ ಗಫಾರ್ ಖಾನನು ಇರಲಿಲ್ಲ. ಅವನು ೧೭೨೫ರಲ್ಲಿಯೇ ಮೃತನಾಗಿದ್ದನು. ಅವನ ಮಗನಾದ ಅಬ್ದುಲ್ ಮಜೀದಖಾನನು ಅಧಿಕಾರದಲ್ಲಿದ್ದನು. ೧೭೪೯ರಲ್ಲಿ ಮಜೀದಖಾನನು ಅಧಿಕಾರದಲ್ಲಿದ್ದುದರಿಂದ, ಎಲ್ಲಿಯೋ ಈ ವರುಷವನ್ನು ಅವರು ತಪ್ಪಿರಬೇಕು!.

ಅಬ್ದುಲ್ ಗಫಾರ್ ಖಾನನ ಐದು ವರುಷಗಳ ಆಳ್ವಿಕೆಯಲ್ಲಿ ವಿಶೇಷ ಸಂಗತಿಗಳು ಘಟಿಸದಿದ್ದರೂ ಅವನು ರಾಜ್ಯ ವಿಸ್ತರಣೆಗೆ ಮುಂದಾದನು. ಅವನ ಕಾಲಕ್ಕೆ ಇದರ ಫಲವು

ಸಿಗದೇ ಹೋದರೂ, ಅವನ ಮರಣಾನಂತರ ಸವಣೂರು ರಾಜ್ಯವು, ವಾಯವ್ಯಕ್ಕೆ ಸ್ವಲ್ಪ ಪ್ರದೇಶವು ಮರಾಠರ ಕೈಯಲ್ಲಿದ್ದುದನ್ನು ಬಿಟ್ಟರೆ, ಕೃಷ್ಣಾ ಮತ್ತು ತುಂಗಾಭದ್ರಾ ನದಿಗಳ ಮಧ್ಯದ ದೋಅಬ್ ಪ್ರದೇಶವೆಲ್ಲವೂ ಸವಣೂರು ರಾಜ್ಯದಲ್ಲಿತ್ತು. ಇದೇ ಪ್ರದೇಶಕ್ಕೆ ಅಬ್ದುಲ್ ಗಫಾರ್ ಖಾನನ ಮಗ ಅಬ್ದುಲ್ ಮಜೀದಖಾನನು ೧೭೨೫ರಲ್ಲಿ ಉತ್ತರಾಧಿಕಾರಿಯಾಗಿ ಬಂದನು. ಮಜೀದ ಖಾನನು ಆಗ ಚಿಕ್ಕವಯಸ್ಸಿನವನಾಗಿದ್ದನು. ಅವನು ಅಧಿಕಾರವನ್ನು ೧೭೩೦ರಲ್ಲಿ ವಹಿಸಿಕೊಂಡೊಡನೆ ಮೊಗಲರ ಅಧಿಕಾರವನ್ನು ಕಿತ್ತಿ ಒಗೆದನು. ಆದರೆ ಮೊಗಲರ ಪ್ರತಿನಿಧಿಯಾಗಿದ್ದ ನಿಜಾಮ ಉಲ್ಕ-ಮುಲ್ಕ ಅಸಫ್ ಝಾನು ಸವಣೂರ ಮೇಲೆ ಏರಿ ಬಂದಾಗ, ಮಜೀದಖಾನನು ಒಪ್ಪಂದವನ್ನು ಮಾಡಿಕೊಳ್ಳಬೇಕಾಯಿತು. ಆದರೆ ಅವನಿಗೆ ಮರಾಠರನ್ನು ಎದುರಿಸಬೇಕಾಯಿತು.

## ಅಬ್ದುಲ್ ಮಜೀದಖಾನ (೧೭೨೫-೧೭೫೪)

ಅಬ್ದುಲ್ ಗಫಾರ್ ಖಾನ ನವಾಬನು ೧೭೨೫ರಲ್ಲಿ ನಿಧನನಾದನು. ಆಗ ಯುವರಾಜ ಅಬ್ದುಲ್ ಮಜೀದಖಾನನು ಇನ್ನೂ ಚಿಕ್ಕವನು. ಆದ್ದರಿಂದ ಸವಣೂರು ದರಬಾರದಲ್ಲಿದ್ದ ಸರದಾರರು, ರಾಜಧಾನಿಯ ಪ್ರಮುಖರು ಸಮಾಲೋಚಿಸಿ, ಅಬ್ದುಲ್ ಮಜೀದಖಾನನನ್ನೇ ಪಟ್ಟದ ಮೇಲೆ ಕೂಡಿಸಿ, ಆಡಳಿತೆಯ ಸೂತ್ರಗಳನ್ನೆಲ್ಲ ಅವನ ಕಕ್ಕ ಅಬ್ದುಲ್ ಸತ್ತಾರಖಾನನ ಕಡೆಗೆ ಕೊಟ್ಟರು. ಇವನು ಗಫಾರಖಾನ ನವಾಬನ ತಮ್ಮನು. ಅಬ್ದುಲ್ ಸತ್ತಾರಖಾನನು ಆಡಳಿತೆಯನ್ನು ನೋಡಿಕೊಳ್ಳುತ್ತಿದ್ದಾಗ, ಅಬ್ದುಲ್ ಮಜೀದಖಾನ ನವಾಬನು ಆಡಳಿತೆಯ ಅಂಗರಚನೆಗಳನ್ನೆಲ್ಲ ಅರ್ಥಮಾಡಿಕೊಂಡು, ತನಗೆ ಸಂಸ್ಥಾನವನ್ನು ನಡೆಸುವಷ್ಟು ಸಾಮರ್ಥ್ಯ ಬಂದಿದೆಯೆಂದು ಹೇಳಿ, ಕಕ್ಕ ಸತ್ತಾರಖಾನನಿಂದ ಅಧಿಕಾರವನ್ನು ಮರಳಿ ಕೊಡಿಸಬೇಕೆಂದು ದರ್ಬಾರದ ಸರದಾರರಿಗೆ ಕೇಳಿದನು. ಅವರೆಲ್ಲರೂ ಸತ್ತಾರಖಾನನಿಗೆ ಅಧಿಕಾರವನ್ನು ಬಿಟ್ಟುಕೊಡಬೇಕೆಂದು ಕೇಳಿದಾಗ ಅವನು ನಿರಾಕರಿಸಿದನು. ಸಿಂಹದ ಮರಿ ರಕ್ತದ ರುಚಿ ಕಂಡುಕೊಂಡಾಗ ಹಿಂಸ್ರ ಪಶುವಾಗುತ್ತದೆ. ಹಾಗೆ ಅಧಿಕಾರವನ್ನು ಅನುಭವಿಸಿದ ಸತ್ತಾರಖಾನನು ಸಿಂಹಾಸನವನ್ನು ಬಿಟ್ಟುಕೊಡಲು ಸಿದ್ಧನಾಗಲಿಲ್ಲ. ಅಷ್ಟೇ ಅಲ್ಲ ತಾನು ಬಂಡೆದ್ದು ಸಿಂಹಾಸನವನ್ನು ಆಕ್ರಮಿಸುವೆನೆಂದು ಬೆದರಿಕೆಯನ್ನು ಹಾಕಿದನು. ಆಗ ಸರದಾರರು, ಜಮಾದಾರರು, ಸೈನಿಕರು ಸೇರಿ, ಅಬ್ದುಲ್ ಸತ್ತಾರಖಾನನನ್ನು ಕೊಂದು ಹಾಕಿದರು. ಸತ್ತಾರಖಾನನ ಕೊಲೆಯಾದ ಮೇಲೆ ಅಬ್ದುಲ್ ಮಜೀದಖಾನನು ೧೭೩೦ರಲ್ಲಿ ಸವಣೂರು ರಾಜ್ಯದ ಅಧಿಕಾರವನ್ನು ವಿಧಿವತ್ತಾಗಿ ವಹಿಸಿಕೊಂಡನು.

ಅಬ್ದುಲ್ ಮಜೀದಖಾನನು ಪಟ್ಟಕ್ಕೆ ಬಂದೊಡನೆ, ಸಿಂಹಾಸನಕ್ಕೆ ಸೇವೆ ಸಲ್ಲಿಸಿದವರಿಗೆ ಅವರವರ ಯೋಗ್ಯತೆಯನ್ನು ಗುರುತಿಸಿ, ರಾಜ್ಯಭಾರದ ವಿವಿಧ ಹೊಣೆಗಾರಿಕೆಗಳನ್ನು

ವಹಿಸಿ ಕೊಟ್ಟನು. ಇದರಿಂದ ಅಧಿಕಾರಿಗಳು ಸಂತುಷ್ಟರಾದರು. ಸವಣೂರು ರಾಜ್ಯದ ಎಲ್ಲ ಸೂತ್ರಗಳನ್ನು ವ್ಯವಸ್ಥಿತವಾಗಿ ನಡೆಸಲು, ಅಲೀಖಾನ ಅಸ್ನುವವನನ್ನು ರಾಜ್ಯದ ದಿವಾಣನನ್ನಾಗಿ ನಿಯಮಿಸಿದನು. ಇದು ಒಂದು ರೀತಿ ಅಧಿಕಾರದ ವಿಕೇಂದ್ರೀಕರಣವಾದಂತಾಯಿತು. ಅಫ್‌ಘಾನಿ ರಕ್ತದ ಅಲೀಖಾನ ಸರಕಾರದ ಬೊಕ್ಕಸಕ್ಕೆ ಬರುತ್ತಿದ್ದ ಕಂದಾಯವನ್ನು ಹೆಚ್ಚಿಸಲು ಭೂಸುಧಾರಣೆ ಮಾಡಿದನು. ಪಡಬಿದ್ದ ಸರಕಾರೀ ಭೂಮಿಗಳನ್ನು, ಒಂದು ಸೇರು ಬೆಣ್ಣೆಗೆ ಒಂದು ಮಾರಿನಂತೆ ಸಾಗುವಳಿ ಮಾಡಲು ರೈತರಿಗೆ ಹಂಚಿಕೊಟ್ಟನು. ಕೆಲ ರೈತರಿಗೆ ಒಂದು ಸೇರುಕಾಳಿಗೆ, ಒಂದು ಮಾರು ಭೂಮಿಯನ್ನು ಲಾವಣಿಯಂತೆ ಕೊಟ್ಟನು. ಒಂದು ಮಾರು ಭೂಮಿಯೆಂದರೆ ಎಂಟು ಕೂರಿಗೆ ಅಥವಾ ಮೂವತ್ತಾರು ಬಿಘಾಗಳು. ಅಂದರೆ ಒಂದು ಕೂರಿಗೆಗೆ ನಾಲ್ಕುವರೆ ಬಿಘಾ. ಕರ್ನಾಟಕದಲ್ಲಿ ಭೂಮಿಯನ್ನು ಮಾರನ್ನಾಗಿ ಅಳೆಯುವ ಪದ್ಧತಿ ಅಂದು ರೂಢಿಯಲ್ಲಿತ್ತು. ಪ್ರಾಯಶಃ ವಿಜಯನಗರದವರೂ ಈ ಹಿಂದೆ ಇದೇ ಪದ್ಧತಿಯನ್ನು ಅನುಸರಿಸುತ್ತಿದ್ದಿರಬೇಕು. ಕಾರಣ ವೆಂಕಟರಾಯನೆಂಬ ಅಧಿಕಾರಿ ಈ ಅಡಳಿತೆಯ ಪದ್ಧತಿಯನ್ನು ವಿಜಯನಗರ ಕಾಲದಲ್ಲಿ ರೂಢಿಗೆ ತಂದನು. ಅಲೀಖಾನನು ಹೀಗೆ ಸವಣೂರು ರಾಜ್ಯದ ಪಡಭೂಮಿಗಳನ್ನು ಸಾಗು ಮಾಡಿಸಿ, ನಂತರ ಮೆಲ್ಲನೆ ಕಂದಾಯವನ್ನು ಹೆಚ್ಚಿಸಿದನು. ಇದರಿಂದ ರಾಜ್ಯದ ಆದಾಯವು ಹೆಚ್ಚಿತು.

ಅಬ್ದುಲ್ ಮಜೀದಖಾನನು, ಸವಣೂರು ರಾಜ್ಯ ಅಥವಾ ಕರ್ನಾಟಕ ಸುಬಾದಲ್ಲಿ, ಮೊಗಲರ ತೋಡರಮಲ್ಲ, ಕೆಳದಿ ಶಿವಪ್ಪನಾಯಕ ಮತ್ತು ಅಹಮ್ಮದ ನಗರದ ಮಲೀಕ ಅಂಬರ ಅವರು ಮಾಡಿದಂತೆ ಭೂಸುಧಾರಣೆ ಮಾಡಿ, ಭೂಕಂದಾಯದಲ್ಲಿ ದಿಟ್ಟ ಹೆಜ್ಜೆಯನ್ನಿಟ್ಟನು. ನವಾಬನಿಗೆ ದಿವಾಣ ಅಲೀಖಾನನು ಮೇಲಿಂದ ಮೇಲೆ ಸಲಹೆಯನ್ನೀಯುತ್ತಿದ್ದನು. ವಿಜಯನಗರ ರಾಜ್ಯದಲ್ಲಿ ರಾಯರೇಖೆ ಅಥವಾ ಹೊಲೆಮಾರು ಅನ್ನುವ ಪ್ರಮಾಣ ಪದ್ಧತಿ ಪ್ರಚಲಿತದಲ್ಲಿತ್ತು. ವಿಜಾಪುರದ ಎರಡನೇ ಆದಿಲ್ ಶಹಾ ಮಾತ್ರ ಈ ಪದ್ಧತಿಯಲ್ಲಿ ಸ್ವಲ್ಪ ಸುಧಾರಣೆ ಮಾಡಿ, ಪ್ರಮಾಣಿತ ಭೂಕಂದಾಯ ದರಕ್ಕೆ 'ರಕಮ' ಎಂದು ನಿರ್ಧರಿಸಿದನು. ಸವಣೂರು ನವಾಬ ಅಬ್ದುಲ್ ಮಜೀದಖಾನನು ಇದಕ್ಕೂ ಇನ್ನೊಂದು ಹೆಜ್ಜೆ ಮುಂದೆ ಹೋಗಿ, ಈ 'ರಕಮ' ಶಬ್ದಕ್ಕೆ 'ಐನಾತಿ' ಎಂದು ಕರೆದನು. ಈ ಭೂಸುಧಾರಣೆಯಿಂದ ರೈತರಿಗೂ ಲಾಭವಾಯಿತು. ಸರಕಾರೀ ಬೊಕ್ಕಸಕ್ಕೂ ಅಧಿಕ ಕಂದಾಯ ಬಂದಿತು.ಹೀಗಾಗಿ ರಾಜ್ಯದಲ್ಲಿ ಸಂಪತ್ತು ವೃದ್ಧಿಯಾಯಿತು.

ಯಾವ ಕಾರಣಕ್ಕೋ ಏನೋ ದಿವಾಣ ಅಲೀಖಾನನು ಅದೊಮ್ಮೆ ನವಾಬ ಅಬ್ದುಲ್ ಮಜೀದಖಾನನೊಂದಿಗೆ ಅವಿಧೇಯನಾಗಿ ವರ್ತಿಸಿದನು. ನವಾಬನು ಅವನನ್ನು ತಕ್ಷಣ ಬಂಧಿಸಿ ಕರ್ಜಗಿ ಸೆರೆಮನೆಯಲ್ಲಿಟ್ಟನು. ಅಲೀಖಾನನ ಬಂಧನದ ಸುದ್ದಿ ಹರಡುತ್ತ ಹರಡುತ್ತ ಹೈದರಾಬಾದಿನ ನಿಜಾಮ ಉಲ್ಕ-ಮುಲ್ಕ ಅಸಫ್ ಝಾನ ಕಿವಿಗೆ ತಲುಪಿತು.

ಅವನಿಗೂ ಅಲೀಖಾನನಿಗೂ ಅತ್ಯಂತ ಸಖ್ಯವಿತ್ತು. ಅದರಿಂದ ಅವನು ಸೈನ್ಯದೊಂದಿಗೆ ಅಲೀಖಾನನನ್ನು ಬಿಡಿಸಿಕೊಳ್ಳಲು ಸವಣೂರಿಗೆ ಧಾವಿಸಿದನು. ಉಲ್ಕ-ಮುಲ್ಕನು ಕರ್ಜಗಿಯನ್ನು ತಲುಪುವ ಸಮಯಕ್ಕೆ ಮಜೀದಖಾನನು ಅಲೀಖಾನನನ್ನು ಸೆರೆಮನೆಯಿಂದ ಬಿಡುಗಡೆ ಮಾಡಿ, ಅವನಿಗೆ ವಸ್ತ್ರಾಭರಣಗಳನ್ನಿತ್ತು, ಗೌರವದಿಂದ ಅವನನ್ನೇ ಸವಣೂರ ವಕೀಲನನ್ನಾಗಿ ನಿಯಮಿಸಿ ಉಲ್ಕ-ಮುಲ್ಕನೊಂದಿಗೆ ಮಾತನಾಡಲು ಕಳಿಸಿದನು. ಅಲೀಖಾನನು ಉಲ್ಕ-ಮುಲ್ಕನನ್ನು ಭೇಟಿಯಾಗಿ ಪರಸ್ಪರ ಕ್ಷೇಮಸಮಾಚಾರವನ್ನು ವಿಚಾರಿಸಿದನು. ನಂತರ ಉಲ್ಕ-ಮುಲ್ಕನು ಅಲೀಖಾನನಿಗೆ ಏತಕ್ಕಾಗಿ ನವಾಬನು ಬಂಧಿಸಿದ್ದನೆಂದು ಕೇಳಿದನು. ಆಗ ಅಲೀಖಾನನು ಸತ್ಯವನ್ನು ಮರಮಾಚಿ "ಇದರಲ್ಲಿ ಅಬ್ದುಲ್ ಮಜೀದಖಾನರ ತಪ್ಪೇನಿಲ್ಲ. ನಾನೇ ಅವರಿಗೆ ಬಿನ್ನವಿಸಿ ನನ್ನನ್ನು ಸೆರೆಯಲ್ಲಿಡಲು ಕೇಳಿಕೊಂಡಿದ್ದೆ. ಕಾರಣ ಸೈನಿಕರಿಗೆ ಸಂಬಳಕೊಡಲು ಸರಕಾರದಲ್ಲಿ ಹಣವಿರಲಿಲ್ಲ. ಸಂಬಳಕ್ಕಾಗಿ ನನ್ನನ್ನು ಸೈನಿಕರು ಪೀಡಿಸುವ ಸಂಭವವಿದ್ದುದರಿಂದ ನಾನು ಈ ಆಟವನ್ನು ಹೂಡಿದೆ" ಎಂದು ಸುಳ್ಳು ಹೇಳಿ ದೊರೆ ನವಾಬ ಅಬ್ದುಲ್ ಮಜೀದ ಖಾನನ ಗೌರವವನ್ನು ಉಳಿಸಿದನು. ಈ ಸುಳ್ಳನ್ನು ಹೇಳುವಲ್ಲಿ, ಅಲೀಖಾನನಿಗೆ ಪ್ರಾಯಶಃ ತಾನು ನವಾಬನೊಂದಿಗೆ ಅವಿಧೇಯತೆಯಿಂದ ನಡೆದುಕೊಂಡಿದ್ದನ್ನು ಮುಚ್ಚಿಡುವುದು ಬೇಕಾಗಿತ್ತೇನೋ. ಸತ್ಯವನ್ನು ಹೇಳಿದ್ದರೆ, ತಾನು ನವಾಬ ಮಜೀದಖಾನನೊಡನೆ ಅನುಚಿತವಾಗಿ ನಡೆದುಕೊಂಡದ್ದು ಬಹಿರಂಗವಾಗುತ್ತಿತ್ತು. ಆದರಿಂದ ನಿಜಾಮ ಉಲ್ಕ-ಮುಲ್ಕನ ಕೋಪವು ಹೆಚ್ಚುತ್ತಿತ್ತು.

ಅಲೀಖಾನನ ಉತ್ತರದಿಂದ ಸಂತೃಪ್ತನಾದ ನಿಜಾಮ ಉಲ್ಕ-ಮುಲ್ಕನು, ನವಾಬ ಮಜೀದಖಾನನನ್ನು ಭೇಟಿಯಾಗಿ ಮರಳಿ ಹೈದ್ರಾಬಾದಿಗೆ ಹೋಗುವ ಇಚ್ಛೆಯನ್ನು ವ್ಯಕ್ತಪಡಿಸಿದನು. ನವಾಬನು ಅವನನ್ನು ಆದರಿಂದ ಕಂಡು, ಅವನಿಗೆ ಜರೀವಸ್ತ್ರ ಹೊದಿಸಿದ ಪಲ್ಲಕ್ಕಿಯನ್ನು ಭೇಟಿಯ ಸವಿನೆನಪಿಗೆಂದು ಕಾಣಿಕೆಯಾಗಿ ಕೊಟ್ಟು ಗೌರವಿಸಿದನು. ಕಾರಣ, ಉಲ್ಕ-ಮುಲ್ಕ ನಿಜಾಮನು ಆಗ ಮೊಗಲರ ಪ್ರತಿನಿಧಿಯಾಗಿದ್ದನು. ಸವಣೂರು ಸುಭಾ ಇನ್ನೂ ಆ ಕಾಲಕ್ಕೆ ಮೊಗಲರ ಅಧೀನದಲ್ಲಿಯೇ ಇದ್ದಿತು. ಈ ಭೇಟಿ ೧೭೩೭ರ ಸುಮಾರಿಗೆ ನಡೆದಿರಬೇಕು. ನಂತರ ದಿವಾನ ಅಲೀಖಾನನು ಮೃತ್ಯುವನ್ನಪ್ಪಿದನು. ಅವನ ಸ್ಮರಣಾರ್ಥವಾಗಿ ನವಾಬ ಅಬ್ದುಲ್ ಮಜೀದಖಾನನು ಸವಣೂರಲ್ಲಿ ಒಂದು ಸುಂದರವಾದ ಮಸೀದಿಯನ್ನು ಕಟ್ಟಿಸಿದನು. ಅದನ್ನು ಅಲೀಖಾನ ಮಸೀದಿಯೆಂದೇ ಕರೆಯುತ್ತಾರೆ. ಇಂದಿಗೂ ಅದು ಸವಣೂರಿನಲ್ಲಿ ಇದೆ.

ಅಬ್ದುಲ್ ಮಜೀದಖಾನ ನವಾಬನು ದಿವಾನ ಅಲೀಖಾನ ತೀರಿಕೊಂಡ ಮೇಲೆ, ಮುಸ್ತಾಫಾಖಾನನೆಂಬ ಇನ್ನೊಬ್ಬ ಸರದಾರರನ್ನು ಸವಣೂರು ರಾಜ್ಯದ ದಿವಾಣನನ್ನಾಗಿ ನಿಯಮಿಸಿದನು. ಇವನು ಆಡಳಿತೆಯನ್ನೇನೋ ಚೆನ್ನಾಗಿ ನಡೆಸಿದರೂ, ಇವನು

ಲಂಚನವನ್ನು ಪಡೆಯುತ್ತಿದ್ದನು. ಈ ಸುದ್ದಿಯನ್ನು ಇವನ ಕೆಳಗಿನ ಅಧಿಕಾರಿ ಹಾತೀಮಖಾನನು ನವಾಬ ಮಜೀದಖಾನನ ಗಮನಕ್ಕೆ ತಂದಾಗ, ನವಾಬನು ವಿಚಾರಣೆಯನ್ನು ನಡೆಸಿದನು. ಹಾತೀಮಖಾನನ ದೂರಿನಲ್ಲಿ ಸತ್ಯವಿದೆಯೆಂದು ಅರಿತೊಡನೆ ಅಬ್ದುಲ್ ಮಜೀದಖಾನನು ಮುಸ್ತಾಫ್ ಖಾನನ ತಲೆಯನ್ನು ಕತ್ತರಿಸಿ ಹಾಕಿದನು. ನಂತರ ಹಾತೀಮಖಾನನನ್ನೇ ದಿವಾನನ್ನಾಗಿ ನಿಯಮಿಸಿದನು. ಹಾತೀಮಖಾನ ಕೂಡ ಮುಂದೆ ಕೆಲವೇ ದಿನಗಳಲ್ಲಿ ಸತ್ತನು. ಅವನ ಸ್ಥಾನಕ್ಕೆ ಗಿರಿಧರರಾವ ಅನ್ನುವ ಬ್ರಾಹ್ಮಣನೊಬ್ಬನನ್ನು ದಿವಾನನೆಂದು ನಿಯಮಿಸಲಾಯಿತು. ಇವನು ಹನ್ನೆರಡು ವರುಷಗಳ ಕಾಲ ದಿವಾನನಿದ್ದನೆಂದು ತಿಳಿದುಬಂದಿದೆ. ಇವನ ನಂತರ ಮತ್ತೊಬ್ಬ ಬ್ರಾಹ್ಮಣನಾದ ಶ್ರೀನಿವಾಸರಾಯನೆಂಬುವನು ಸವಣೂರು ದಿವಾನನಾದನು. ಇವನು ಅವಿವೇಕಿ ಇದ್ದುದರಿಂದ, ಇವನನ್ನು ಸೆರೆಹಿಡಿದು ಕತ್ತಲೆಯ ಕೋಣೆಯಲ್ಲಿ ಹಾಕಿದನು. ಇವನು ಅಲ್ಲಿಯೇ ಸತ್ತನು; ತಪ್ಪು ಮಾಡಿದವರನ್ನು ಮಜೀದಖಾನನು ನಿರ್ದಯದಿಂದ ಶಿಕ್ಷಿಸುತ್ತಿದ್ದನು.

ಅಬ್ದುಲ್ ಮಜೀದಖಾನನು ಸಿಂಹಾಸನದಲ್ಲಿರುವಾಗ ಹುಸೇನಖಾನ ಅನ್ನುವ ಅಫಘಾನಿ ಸರದಾರನೊಬ್ಬನು ಪ್ರವಾಸಿಯ ವೇಷಧರಿಸಿ ಸವಣೂರಿಗೆ ಬಂದು ಊರಲ್ಲಿಯ ಮಸೀದಿಯೊಂದರಲ್ಲಿ ವಾಸ್ತವ್ಯ ಮಾಡಿದನು. ರಾಜ್ಯದ ಗುಪ್ತಚಾರರು ಈ ಹೊಸ ವಿಷಯವನ್ನು ನವಾಬನ ಗಮನಕ್ಕೆ ತಂದಾಗ, ಅವನನ್ನು ತಕ್ಷಣ ತಂದು ದರಬಾರದಲ್ಲಿ ಹಾಜರಪಡಿಸಬೇಕೆಂದು ಆಜ್ಞಾಪಿಸಿದನು.

ಈ ಆಜ್ಞೆಯೊಂದಿಗೆ ದರ್ಬಾರದ ಚೋಬದಾರನು (ಬೆಳ್ಳಿ ಕೋಲನ್ನು ಧರಿಸಿ ನವಾಬರ ಪಾರ್ಶ್ವದಲ್ಲಿ ನಿಲ್ಲುವ ಆಪ್ತ ಸೇವಕ) ಹುಸೇನನನ್ನು ಕಂಡು, ತಕ್ಷಣ ದರಬಾರದಲ್ಲಿ ಹಾಜರಾಗಬೇಕೆಂದು ಹುಕುಮು ಆಗಿದೆಯೆಂದು ಹೇಳಿದನು. ಆ ಅಫಘಾನಿ ಸೈನಿಕ ಹುಸೇನಖಾನನು "ನಾನು ನಿಮ್ಮ ನವಾಬ ಸಾಹೇಬರನ್ನೇ ಕಾಣಲೆಂದು ಸವಣೂರಿಗೆ ಬಂದಿದ್ದೇನೆ. ಬಹುದೂರದಿಂದ ಬಂದಿರುವ ನಾನು ದುಷ್ಟನಲ್ಲ. ಬೇರೆಡೆ ಕುಕೃತ್ಯಗಳನ್ನೆಸಗಿ ಆಶ್ರಯಕ್ಕೆಂದು ಓಡಿ ಬಂದವನಲ್ಲ. ಸೈನಿಕರನ್ನು ಕಳಿಸಿ ದರ್ಬಾರಕ್ಕೆ ನನಗೆ ಬರಲು ಬುಲಾವ ಬಂದರೆ, ನಾನು ಅಲ್ಲಿಗೆ ಬಂದು ತಲೆ ಬಗ್ಗಿಸುವ ಮನುಷ್ಯನಲ್ಲ"ಎಂದು ಚೋಬದಾರನಿಗೆ ಹೇಳಿ ಅವನ ಬಾಯಿಯನ್ನು ಬಂದು ಮಾಡಿದನು.

ಚೋಬದಾರನು ಮರಳಿ ಬಂದು ಅಬ್ದುಲ್ ಮಜೀದಖಾನನಿಗೆ ಈ ವಿಷಯವನ್ನು ತಿಳಿಸಿದಾಗ ನವಾಬನಿಗೆ ಆಶ್ಚರ್ಯವೆನಿಸಿತು. ನವಾಬನು, ಈಗ ತನ್ನ ಭಕ್ಷಿಯಾಗಿದ್ದ ಖಾದರಖಾನನನ್ನು ಕಳಿಸಿ ಹುಸೇನಖಾನನನ್ನು ಗೌರವದಿಂದ ಕರೆತರಲು ಹೇಳಿದನು. ಸರಿ, ಭಕ್ಷಿ ಖಾದರಖಾನನು ಮಸೀದಿಗೆ ಹೋಗಿ ಹುಸೇನಖಾನನನ್ನು ಕಂಡಾಗ, ಅವನು

ತಾನೊಬ್ಬ ಶೂರ ಸರದಾರನಿದ್ದು ನವಾಬರಲ್ಲಿ ಸೈನಿಕ ಹುದ್ದೆಯನ್ನು ಸ್ವೀಕರಿಸಬಕೆಂಬ ಸದುದ್ದೇಶದಿಂದ ಸವಣೂರಿಗೆ ಬಂದಿರುವೆನೇ ವಿನಃ ದರಬಾರದ ಸಂಪ್ರದಾಯಕ್ಕೆ ವಿರುದ್ಧ ವರ್ತಿಸಲಿಕ್ಕಲ್ಲ ಎಂದು ವಿನಯದಿಂದ ಹೇಳಿದನು. ನಂತರ ಹುಸೇನಖಾನನು ಭಕ್ತಿಯೊಂದಿಗೆ ಸವಣೂರು ದರ್ಬಾರಕ್ಕೆ ಬಂದು, ಅಬ್ದುಲ್ ಮಜೀದಖಾನರಿಗೆ ಸಲಾಮು ಮಾಡಿ, ತನಗೊಂದು ಸೂಕ್ತವಾದ ಸೈನಿಕ ಹುದ್ದೆಯನ್ನು ದಯಪಾಲಿಸಬೇಕೆಂದು ಕೇಳಿಕೊಂಡನು. ನವಾಬ ಮಜೀದಖಾನನು ಅವನ ಯೋಗ್ಯತೆಯನ್ನು ಪರೀಕ್ಷಿಸಿ, ಪ್ರತಿದಿವಸ ಆರುನೂರು ರೂಪಾಯಿ ಸಂಬಳದ ಮೇಲೆ ತನ್ನ ಸೈನ್ಯದಲ್ಲಿ ನಿಯಮಿಸಿಕೊಂಡನು. ಅವನಿಗೆ ಒಂದು ಕುದುರೆಯನ್ನು ಕೂಡ ದಯಪಾಲಿಸಿದನು. ಅಂದು, ದಿನವೂ ಆರುನೂರು ರೂಪಾಯಿ ಸಂಬಳವೀಯುವ ದೊರೆಯೂ ಇದ್ದನು; ಅದನ್ನು ಪಡೆಯುವ ಸಾಮರ್ಥ್ಯದ ಸೈನಿಕನೂ ಇದ್ದನು.

ನವಾಬ ಅಬ್ದುಲ್ ಮಜೀದಖಾನನ ಕಾಲದಲ್ಲಿ ಸವಣೂರು ರಾಜ್ಯವು ಒಂದು ಪ್ರಬಲ ಶಕ್ತಿಯಾಗಿ ಬೆಳೆಯಹತ್ತಿತು. ಎಲ್ಲರ ಕಣ್ಣಲ್ಲಿಯೂ ಇದು ಕುಕ್ಕಹತ್ತಿದಾಗ ಪುಣೆಯ ಪೇಶ್ವೆಯವರು, ಕೊಲ್ಹಾಪುರದ ಛತ್ರಪತಿ ಪೀಠದ ಎರಡನೇ ಸಂಭಾಜಿ ಮಹಾರಾಜ ಮತ್ತು ಹೈದ್ರಾಬಾದಿನ ನಿಜಾಮ ಉಲ್ಕ-ಮುಲ್ಕನು ಸವಣೂರನ್ನು ತಮ್ಮದನ್ನಾಗಿ ಮಾಡಿಕೊಳ್ಳುವ ಹವಣಿಕೆಯಲ್ಲಿದ್ದರು. ಮೊಗಲ್ ಪ್ರತಿನಿಧಿ ನಿಜಾಮ ಉಲ್ಕ-ಮುಲ್ಕನು, ಅಬ್ದುಲ್ ಗಫಾರಖಾನನ ನಂತರ, ತನ್ನ ಅನುಮತಿ ಇಲ್ಲದೆ ಅಬ್ದುಲ್ ಮಜೀದಖಾನನು ಸವಣೂರು ಸಿಂಹಾಸನವನ್ನೇರಿದ್ದು ಆಕ್ರಮವೆಂದು ಹೇಳಿದನು. ಸವಣೂರು ಮೊಗಲರ ಜಹಗೀರ ಆಗಿದ್ದರಿಂದ, ಮೊಗಲರ ಅನುಮತಿ ಬೇಕೇ ಬೇಕು ಎಂದು ಹೇಳಿದನು. ಆದರೆ ದೂರದ ದಿಲ್ಲಿಯಲ್ಲಿ ರಾಜಕೀಯ ಶಿಥಿಲತೆ ಕಂಡೊಡನೆ, ಮಜೀದಖಾನನು ಮೊಗಲರ ಅಧಿಕಾರವನ್ನು ಧಿಕ್ಕರಿಸಿ ತಾನೊಬ್ಬ ಸ್ವತಂತ್ರ ರಾಜನೆಂದು ಪ್ರಕಟಪಡಿಸಿದನು. ಔರಂಗಜೇಬನು ಕೊಟ್ಟ ಪ್ರದೇಶದ ವ್ಯತಿರಿಕ್ತ, ನವಾಬ ಮಜೀದಖಾನನು ಧಾರವಾಡ ಜಿಲ್ಲೆ, ವಿಜಾಪುರ ಹಾಗೂ ಬೆಳಗಾವಿ ಜಿಲ್ಲೆಯ ಕೆಲ ಪ್ರದೇಶ ಹಾಗೂ ರಾಯಚೂರು ಜಿಲ್ಲೆಯ ಸ್ವಲ್ಪ ಭಾಗವನ್ನು ಗೆದ್ದು ಸವಣೂರಿಗೆ ಸೇರಿಸಿಕೊಂಡಿದ್ದನು. ಸವಣೂರು ರಾಜ್ಯಕ್ಕೆ ಧಾರವಾಡ ಕೇಂದ್ರ ಬಿಂದುವಾಗಿತ್ತು. ಬಳ್ಳಾರಿ ಜಿಲ್ಲೆ ಮಾತ್ರ ನಿಜಾಮನ ವಶದಲ್ಲಿತ್ತೇ ವಿನಃ ಸವಣೂರಿಗೆ ಸೇರಿರಲಿಲ್ಲ. ಸವಣೂರು ರಾಜ್ಯದ ಉತ್ತರ ಗಡಿ ಪಾಚ್ಛಾಪುರದಿಂದ ಬೀಳಗಿಯವರೆಗಿತ್ತು; ದಕ್ಷಿಣಕ್ಕೆ ಮಾಸೂರಿನಿಂದ ಹರಿಹರದವರೆಗಿತ್ತು. ಪೂರ್ವಕ್ಕೆ ಕೊಪ್ಪಳ, ಕನಕಗಿರಿಯವರೆಗೆ ಹಬ್ಬಿದ್ದರೆ, ಪಶ್ಚಿಮಕ್ಕೆ ಬೆಳಗಾವಿ, ಹಾನಗಲ್ಲ, ತೇಗೂರು, ಮಿಶ್ರೀಕೋಟೆಗಳಗವರೆಗಿತ್ತು.

೧೭೨೦-೧೭೩೦ರ ಮಧ್ಯೆ, ಕೊಲ್ಹಾಪುರ ಮತ್ತು ಸಾತಾರಾ ರಾಜ್ಯಗಳು, ಶಿವಾಜಿ ಮಹಾರಾಜರ ನಂತರ ತಮ್ಮದೇ ನಿಜವಾದ ಮೂಲ ಶಿವಾಜಿ ಮಹಾರಾಜರ

ರಾಜ್ಯಗಳೆಂದು ಬಡಿದಾಡಹತ್ತಿದವು. ಈ ಅಂತಃಕಲಹದಲ್ಲಿ ಅಬ್ದುಲ್ ಮಜೀದಖಾನನು ಕೊಲ್ಹಾಪುರದ ಮಹಾರಾಜನಾಗಿದ್ದ ಎರಡನೇ ಸಂಭಾಜಿ ರಾಜನ ಸಹಾಯಕ್ಕೆ ಹೋದನು. ಈ ಹೊತ್ತಿಗೆ ಮಜೀದಖಾನನು ಬೆಳಗಾವಿ ದಕ್ಷಿಣ ಹಾಗೂ ಪೂರ್ವಭಾಗವನ್ನು ತನ್ನ ರಾಜ್ಯಕ್ಕೆ ಸೇರಿಸಿಕೊಂಡಿದ್ದನು. ೧೭೩೦ರ ಹೊತ್ತಿಗೆ ಮೊಗಲ ಪ್ರತಿನಿಧಿ ನಿಜಾಮ ಉಲ್ಕ-ಮುಲ್ಕನ ವಶದಲ್ಲಿದ್ದ ಬೆಳಗಾವಿ (ಅಜಂನಗರ) ಕೋಟೆಯನ್ನು ಕೂಡ ಮಜೀದಖಾನನು ಆಕ್ರಮಿಸಿದ್ದನು. ೧೭೩೭ರ ಅಂತ್ಯದಲ್ಲಿ ಅಬ್ದುಲ್ ಮಜೀದಖಾನನು ತನಗೂ ಮತ್ತು ಜಹಗೀರನ್ನು ದಯಪಾಲಿಸಿದ ಮೊಗಲರಿಗೂ ಯಾವ ಸಂಬಂಧವಿಲ್ಲವೆಂದು ಸಾರಿ, ತಾನು ಸ್ವತಂತ್ರನಾದೆನೆಂದು ಹೇಳಿದನು. ಅವನು ಮರಾಠರಿಗೆ ಕೊಡಬೇಕಿದ್ದ ಕಪ್ಪವನ್ನು ಕೂಡ ಕೊಡಲು ನಿರಾಕರಿಸಿದನು. ಇದು ಮರಾಠರನ್ನು ಕೆರಳಿಸಿತು. ಹೀಗೆ ಅಬ್ದುಲ್ ಮಜೀದಖಾನ್ ಪ್ರಬಲನಾದನು.

ಮರಾಠರು ಕೂಡಲೇ ತಮಗೆ ಬರಬೇಕಿದ್ದ ಕಪ್ಪ ಕಾಣಿಕೆಗಳನ್ನು ವಸೂಲು ಮಾಡಿಕೊಂಡು ಬರಲು, ತಮ್ಮ ಸರದಾರನಾಗಿದ್ದ ಬಾಪೂಜಿ ನಾಯಕ ಬಾರಮತಿಕರನನ್ನು ಒಂದೂವರೆ ಲಕ್ಷ ಸೈನ್ಯದೊಂದಿಗೆ ಸವಣೂರಿಗೆ ಕಳಿಸಿದರು. ಬಾಪೂಜಿ ನಾಯಕನು ಕರ್ನಾಟಕವನ್ನು ಪ್ರವೇಶಿಸಿ ಮೊದಲು ಕಮಡೊಳ್ಳಿ ಕೋಟೆಗೆ ಮುತ್ತಿಗೆ ಹಾಕಿದನು. ಆಗ ಇಡೀ ಕರ್ನಾಟಕವೇ ನವಾಬನ ಆಡಳಿತೆಯಲ್ಲಿತ್ತು. ಅಬ್ದುಲ್ ಮಜೀದಖಾನನು ತನಗೆ ೭೫೦೦೦(ಎಪ್ಪತ್ತೈದು ಸಾವಿರ) ರೂಪಾಯಿಳನ್ನು ಕೊಟ್ಟರೆ, ಮುತ್ತಿಗೆಯನ್ನು ಹಿಂತೆಗೆದುಕೊಂಡು ಮರಳಿ ಹೋಗುವುದಾಗಿ ಬಾಪೂಜಿ ನಾಯಕನು ಹೇಳಿಕಳಿಸಿದನು. ಆದರೆ, ನವಾಬನು ತಾನು ಖಂಡಣಿಯನ್ನು ಕೊಡುವುದಿಲ್ಲವೆಂದು ಖಡಾಖಡಿಯಾಗಿ ಹೇಳಿದನು. ಬಾಪೂಜಿ ನಾಯಕನು ನವಾಬನ ಉತ್ತರವನ್ನು ಕೇಳಿ, ಕಮಡೊಳ್ಳಿ ಕೋಟೆಗೆ ಹೊರಗಿನಿಂದ ಸರಬರಾಜು ಆಗುತ್ತಿದ್ದ ನೀರನ್ನು ನಿಲ್ಲಿಸಿಬಿಟ್ಟನು. ಇದನ್ನು ಕೇಳಿ ನವಾಬನು ಚಿಂತಾಕ್ರಾಂತನಾದನು. ಈ ವಿಷಯವನ್ನು ಕೇಳಿದ ಅಫಘಾನ ಸೈನಿಕನಾಗಿದ್ದ ಹುಸೇನಖಾನನು ತನಗೆ ಸೈನ್ಯದ [illegible]ತ್ವವನ್ನು ಕೊಟ್ಟರೆ, ತಾನು ಬಾಪೂಜಿ ನಾಯಕನೊಂದಿಗೆ ಹೋರಾಡುವುದಾಗಿ [illegible]ವನ್ನು ನಂಬಿಸಿದನು. ಸರಿ, ಮಜೀದಖಾನ ನವಾಬನು ಇದಕ್ಕೆ ಒಪ್ಪಿದನು. ತಕ್ಷಣವೇ ಹುಸೇನಖಾನನು ತನ್ನೊಂದಿಗೆ ಸೇವಕನನ್ನು ಕರೆದುಕೊಂಡು ಅಶ್ವವನ್ನೇರಿ ಕಮಡೊಳ್ಳಿಗೆ ಹೋದನು. ಕಮಡೊಳ್ಳಿ ಕೋಟೆಯ ಮುಂದೆಯೇ ತಳವೂರಿದ್ದ ಬಾಪೂಜಿ ನಾಯಕನ ಡೇರೆಯನ್ನು ಶೋಧಿಸಿ, ಹುಸೇನಖಾನನು ಆ ಡೇರಿಯಲ್ಲಿ ಹೊಕ್ಕು ತನ್ನ ಕಠಾರಿಯನ್ನು ಅವನ ಮುಂದೆ ಝಳಪಿಸಿದನು. ಅಲ್ಲದೇ, ಅವನನ್ನು ಆ ಕ್ಷಣದಲ್ಲಿಯೇ ಕೊಲ್ಲುವುದಾಗಿ ಬೆದರಿಕೆ ಹಾಕಿದನು. ಬಾಪೂಜಿ ನಾಯಕನು ಹುಸೇನಖಾನನ ಬೆದರಿಕೆಗೆ ಅಂಜಿ, ತನ್ನ ಸೈನ್ಯದೊಂದಿಗೆ ಕಮಡೊಳ್ಳಿಯಿಂದ ಪಾಳಾದತ್ತ ನಡೆದನು. ಮಜೀದಖಾನನ ಸೈನ್ಯವು ಅವನನ್ನು ಬೆನ್ನಟ್ಟಿ, ಹೋಗಿ, ಯುದ್ಧ ಮಾಡಿತು.

ಈ ಯುದ್ಧದಲ್ಲಿ ಯಾರಿಗೆ ವಿಜಯವಾಯಿತೋ ತಿಳಿಯಲಿಲ್ಲ. ಎರಡೂ ಕಡೆಯವರಿಗೂ ಅಪಾರ ಹಾನಿಯಾಯಿತು. ಅದರಿಂದ ಉಭಯ ಪಕ್ಷಗಳು ಸೇರಿ ಒಂದು ಒಡಂಬಡಿಕೆಗೆ ಬಂದು ಯುದ್ಧವನ್ನು ನಿಲ್ಲಿಸಿದವು. ಈ ಯುದ್ಧವಿರಾಮದ ಒಡಂಬಡಿಕೆ ೧೭೩೭ರಲ್ಲಿ ಸವಣೂರಿನಲ್ಲಿ ನಡೆಯಿತು. ಈ ಒಪ್ಪಂದಕ್ಕೆ ಪೇಶ್ವೆಯವರ ಪರವಾಗಿ ಶ್ರೀಮಂತ ಬಾಳಾಜಿ ಬಾಜೀರಾವ್ ಪಂತ ಪ್ರಧಾನರು ಸಹಿ ಮಾಡಿದರೆ, ಸವಣೂರು ರಾಜ್ಯದಿಂದ ಅಬ್ದುಲ್ ಮಜೀದಖಾನ ನವಾಬನು ಮಾಡಿದನು. ಈ ಒಪ್ಪಂದದಿಂದ ಸವಣೂರು ರಾಜ್ಯದ ಮೂವತ್ತಾರು ಪರಗಣಾಗಳು ಪೇಶ್ವೆಯವರಿಗೆ ಹೋದವು.

## ಒಡಂಬಡಿಕೆಯ ಪತ್ರ

ಸವಣೂರಿನ ನವಾಬ ಅಬ್ದುಲ್ ಮಜೀದಖಾನ ಬಹದ್ದೂರ್ ದಿಲೇರಜಂಗ ಮತ್ತು ಪುಣೆಯ ಶ್ರೀಮಂತ ಬಾಳಾಜಿ ಬಾಜೀರಾವ್ ಪಂತಪ್ರಧಾನರ ಮಧ್ಯೆ ನಡೆಯಿತು.

ಶ್ರೀ

ರಾಜಾ ಶಾಹೂ ನರಪತಿ ಸಂತೋಷಾಶ್ರಿತ

ಬಾಳಾಜೀ ಬಾಜೀರಾವ್ ಪ್ರಧಾನರು

ಸವಣೂರು ರಾಜ್ಯವು ಮೂವತ್ತಾರು ಪರಗಣಾಗಳನ್ನು ಪೇಶ್ವೆಯವರಿಗೆ ಕೊಟ್ಟ ಮೇಲೆ ನವಾಬ ಅಬ್ದುಲ್ ಮಜೀದಖಾನನಿಗೆ ಉಳಿದ ರಾಜ್ಯದ ೨೨ ಮಹಲುಗಳು ಮತ್ತು ೩ ಸರಕಾರಗಳ ವಿವರಗಳು ಹೀಗಿವೆ:

ಸರಕಾರಗಳು:೧.ಬಂಕಾಪುರ ೨.ತೊರಗಲ್ಲು ೩.ಅಜಮನಗರ (ಬೆಳಗಾವಿ)

| | | | |
|---|---|---|---|
| ೧.ಪರಗಣಾ | ಕುಂದಗೋಳ | ೧. ಸಮತ್ | ನಿಡಸಂಗಿ |
| ೧.ಪರಗಣಾ | ಕಾರಡಗಿ-ಕಮತರಾಣ | ೧. ಸಮತ್ | ಸಿಗ್ಗಾವಿ |
| ೧.ಪರಗಣಾ | ಮಿಶ್ರೀಕೋಟೆ | ೧. ಪರಗಣಾ | ಹಾನಗಲ್ |
| ೧.ಸಮತ್ | ಕಲಘಟಗಿ | ೧. ಪರಗಣಾ | ಬಂಕಾಪುರ |
| ೧.ಸಮತ್ | ಬೊಮ್ಮೀಗಟ್ಟಿ | ೧. ಪರಗಣಾ | ತಿಳವಳ್ಳಿ |
| ೧.ಸಮತ್ | ತಡಸ | ೧. ಪರಗಣಾ | ಅಡೂರು |
| ೧.ಸಮತ್ | ಕೆರೂರು (ಬದ್ರೂಕ) | ೧. ಪರಗಣಾ ಸಹಿತ | ಕಪ್ಪೇಲೂರು |
| ೧.ಸಮತ್ | ಕೆರೂರು (ಖುರ್ದ) | ೧. ಸಮತ್ | ಮಾಸೂರು |
| ೧.ಸಮತ್ | ಕೋಡ | ೧. ಪೇಟೆ | ಹಾವೇರಿ |
| ೧.ಸಮತ್ | ಕಾಗಿನೆಲ್ಲಿ | ೧. ಪೇಟೆ | ಹಂಸಭಾವಿ |
| ೧.ಸಮತ್ | ರಾಣೇಬೆನ್ನೂರ | ೧. ಕೋಟೆ | ಐರಣಿ |

೧೧ ಮಹಲುಗಳು　　　　　　　　೧೧ ಮಹಲುಗಳು

(ಒಟ್ಟು ಇಪ್ಪತ್ತೇರಡು ಮಹಲುಗಳು)

**ನವಾಬ ಅಬ್ದುಲ್ ಮಜೀದಖಾನನು ಪೇಶ್ವೆಯವರಿಗೆ ಬಿಟ್ಟುಕೊಟ್ಟ ತಾಲೂಕುಗಳು**

| | | | |
|---|---|---|---|
| ೧.ಪರಗಣಾ | ಬಾಗಿಲುಕೋಟೆ ಬೀಳಗಿ | ೧.ಪರಗಣಾ | ಪಾಚ್ಛಾಪುರ |
| ೧.ಪರಗಣಾ | ಅಜಂನಗರ ಬೆಳಗಾವಿ ಶಹಪೂರ | ೧. ಕಸಬಾ | ಸಂಪಗಾವಿ ಕಿತ್ತೂರು |
| ೧.ಪರಗಣಾ | ತೇಗೂರು, ತಡಕೋಡ | ೧. ಕಸಬಾ | ನರೇಂದ್ರ |
| ೧.ಕಸಬಾ | ಧಾರವಾಡ ಕೋಟೆ | ೧. ಹಿಸ್ಸಾರ | ಹಳ್ಯಾಳ |
| ೧.ಪರಗಣಾ | ಲಕ್ಷ್ಮೇಶ್ವರ | ೧. ಪರಗಣಾ | ನವಿಲುಗುಂದ |
| ೧.ಪರಗಣಾ | ಜಾಲೀಹಾಳ, ಬಾದಾಮಿ | ೧. ಪರಗಣಾ | ಗುತ್ತಲ |
| ೧.ಪರಗಣಾ | ಮುಳಗುಂದ | ೧. ಪರಗಣಾ | ಅಣ್ಣಿಗೆರೆ |
| ೧.ಪರಗಣಾ | ರಾಯರ ಹುಬ್ಬಳ್ಳಿ | ೧. ಪರಗಣಾ | ದೇವರ ಹುಬ್ಬಳ್ಳಿ |
| ೧.ಹಿಸ್ಸಾರ | ಹರಿಹರ | ೧. ಪರಗಣಾ | ಸುಳ್ಳಬ್ಯಾಹಟ್ಟಿ |
| ೧.ಪರಗಣಾ | ಆನವಟ್ಟಿ | ೧. ಪರಗಣಾ | ಧನದುರ್ಗ |
| ೧.ಪರಗಣಾ | ಯಾದವಾಡ | ೧. ಪರಗಣಾ | ಬನ್ನೂರು |
| ೧.ಪರಗಣಾ | ಮುರಗೋಡ | ೧. ಪರಗಣಾ | ಸತ್ತೀಗೇರಿ |
| ೧೨ (ಒಟ್ಟು) | | ೧೨ (ಒಟ್ಟು) | |

| | |
|---|---|
| ೧.ಪರಗಣಾ | ಗೋಕಾಕ |
| ೧.ತಾಲ್ಲೂಕ | ಬೆಟಗೇರಿ |
| ೧.ಪರಗಣಾ | ಅಮ್ಮಿನಭಾವಿ |
| ೧.ಪರಗಣಾ | ಯಕ್ಕುಂಡಿ |
| ೧.ಪರಗಣಾ | ಗದಗು |
| ೧.ಪರಗಣಾ | ರಟ್ಟೀಹಳ್ಳಿ |
| ೧.ಪರಗಣಾ | ಹೆಬ್ಬಳ್ಳಿ ಜಹಗೀರ |
| ೧.ಪರಗಣಾ | ರಾವ್ ಮುಗದ |
| ೧.ಪರಗಣಾ | ಕೆರೂರು |
| ೧.ಪರಗಣಾ | ತಡಕೋಡ |
| ೧.ಪರಗಣಾ | ಕೊಣ್ಣೂರು |

೧.ಪರಗಣಾ ಲೋಕಾಪುರ

೧೨ (ಒಟ್ಟು)

(ಒಟ್ಟು ಮೂವತ್ತಾರು ವಿಭಾಗಗಳು ಪೇಶ್ವೆಯವರ ಆಡಳಿತಕ್ಕೆ ಹೋದವು)

(ಪರಗಣಾ-ಜಿಲ್ಲೆ. ಕಸಬಾ-ದೊಡ್ಡ ಊರು)

ಈ ಪ್ರದೇಶಗಳ ಹಂಚಿಕೆಯೊಡನೆ ಇಬ್ಬರ ಮಧ್ಯೆ ಕೆಲವು ಕರಾರುಗಳೂ ಆದವು.

ಅ) ಮರಾಠರ ಸರದಾರ ಬಾಪೂಜಿ ನಾಯಕನು ಕರ್ನಾಟಕ ಸುಬಾಕ್ಕೆ ಭೇಟಿಯಿತ್ತಾಗ ಸವಣೂರು ರಾಜ್ಯದಲ್ಲಿ ಹಾಯುವಂತಿಲ್ಲ. ಒಂದು ಪಕ್ಷ ಇವನು ಸವಣೂರು ರಾಜ್ಯವನ್ನು ಅತಿಕ್ರಮಿಸಿ ಪ್ರಜೆಗಳಿಗೆ ತೊಂದರೆಗಳನ್ನಿತ್ತರೆ, ಈ ಒಪ್ಪಂದವು ರದ್ದಾದಂತೆ ಎಂದು ಭಾವಿಸಲಾಗುವುದು. ಎರಡೂ ಪಕ್ಷಗಳ ಮಧ್ಯೆ ವೈರತ್ವವನ್ನು ಸೃಷ್ಟಿಸಲು ಯಾರಾದರೂ ಮಧ್ಯೆ ತಲೆ ಹಾಕಿದರೆ ಅಂತಹವರು ಎರಡೂ ಪಕ್ಷಗಳ ಶತ್ರುಗಳಾಗವರು.

ಬ) ಸವಣೂರು, ಪೇಶ್ವೆಯವರಿಗೆ ೭೫೦೦೦ ರೂಪಾಯಿಗಳನ್ನು ಕೊಟ್ಟ ವಿಷಯವನ್ನು ಗೌಪ್ಯವಾಗಿ ಇಡಬೇಕು. ಈ ರಹಸ್ಯವು ಬಯಲಾದರೆ, ಈ ಹಣಕ್ಕೆ ನಿಜಯವಾಗಿಯೂ ಬಾಧ್ಯಸ್ಥನಾದ ಸಾತಾರಾ ಸಂಭಾಜಿ ಮಹಾರಾಜನಿಗೆ ಅಧಿಕಾರಿಗಳಿಂದ ವಸೂಲು ಮಾಡಿ ಕೊಡಬೇಕು. ಅದರಿಂದ ಈ ಒಡಂಬಡಿಕೆ ಕೂಡ ರದ್ದಾಗುವುದು.

ಕ) ಸೋಂದಾ (ಸ್ವಾದಿ), ಬಿದನೂರು ಅಥವಾ ತುಂಗಭದ್ರಾ ನದಿಯ ದಕ್ಷಿಣದಿಂದ ಮರಾಠಾ ಸೈನ್ಯವು ಸವಣೂರು ರಾಜ್ಯದಲ್ಲಿ ಹಾದುಹೋಗುವಾಗ, ಸವಣೂರು ಪ್ರಜೆಗಳಿಗೆ ತೊಂದರೆಯನ್ನೀಯಬಾರದು ಮತ್ತು ಸವಣೂರು ಪ್ರಜೆಗಳು ಕೂಡ ಮರಾಠಾ ಸೈನ್ಯಕ್ಕೆ ತೊಂದರೆಯನ್ನೀಯುವಂತಿಲ್ಲ. ಒಂದು ಪಕ್ಷ, ತಪ್ಪು ತಿಳುವಳಿಕೆ ಯಿಂದ ಅಚಾತುರ್ಯದ ಘಟನೆಗಳು ನಡೆದರೆ, ಒಪ್ಪಂದವು ರದ್ದಾಗುವುದಿಲ್ಲ.

ಡ) ಸವಣೂರು ರಾಜ್ಯದ ಅಭಿವೃದ್ಧಿಗಾಗಿ ಎರಡೂ ಪಕ್ಷಗಳವರೂ ಶ್ರಮಿಸಬೇಕು. ಇದಕ್ಕಾಗಿ ಕೊಲ್ಲಾಪುರದ ಸಂಭಾಜೀ ಮಹಾರಾಜನು ಸವಣೂರಿನವರಿಗೆ ಸಹಾಯವನ್ನು ಮಾಡಬೇಕು. ಕರ್ನಾಟಕ ಸುಬಾದ ಮರಾಠಾ ಪ್ರತಿನಿಧಿಯಾದ ಬಾಪೂಜಿ ನಾಯಕನು ಸವಣೂರು ನವಾಬ ಅಬ್ದುಲ್ ಮಜೀದಖಾನನಿಂದ ಯಾವ ಅಪೇಕ್ಷೆಯನ್ನೂ ಮಾಡುವಂತಿಲ್ಲ.

ಈ ಒಡಂಬಡಿಕೆಯಿಂದ ಅಬ್ದುಲ್ ಮಜೀದಖಾನನು ತನ್ನ ಮೂವತ್ತಾರು ಪರಗಣಾಗಳನ್ನು ಕಳೆದುಕೊಂಡರೂ, ಪೇಶ್ವೆಯವರೊಡನೆ ಇದ್ದ ಮಧುರ ಬಾಂಧವ್ಯವನ್ನು ಕಳೆದುಕೊಳ್ಳಲಿಲ್ಲ. ಸವಣೂರು ನವಾಬನು ಪೇಶ್ವೆಯವರಿಗೆ ಬಿಟ್ಟುಕೊಟ್ಟ ಪ್ರದೇಶಗಳು ಕೆಲಕಾಲ ನವಾಬನ ಆಡಳಿತೆಯಲ್ಲಿಯೇ ಉಳಿದವು. ನಂತರ ಅವು ಪೇಶ್ವೆಯವರಿಗೆ

ಹೋದವು.

## ಚಿತ್ರದುರ್ಗದ ನಾಯಕನೊಡನೆ ಯುದ್ಧ

ಅಬ್ದುಲ್ ಮಜೀದಖಾನನ ಸೈನ್ಯದಲ್ಲಿ ಅಬ್ದುಲ್ಲಾಖಾನ ಹಾಗೂ ವಾಲಿಸ್‌ಖಾನ ಎಂಬ ಇಬ್ಬರು ಸಹೋದರರು, ಶ್ರೇಷ್ಠ ಅಶ್ವಸವಾರರೆಂದು ಪರಿಗಣಿಸಲ್ಪಟ್ಟಿದ್ದರು. ಅವರು ಅಶ್ವಚಾಲನೆಯಲ್ಲಿ ಅತ್ಯಂತ ಚಾಣಾಕ್ಷರಿದ್ದರು. ಅವರು ತಮ್ಮ ಕುದುರೆಗಳನ್ನು ತಾವೇ ಸಾಕುತ್ತಿದ್ದರು. ಇವರಿಬ್ಬರೂ, ಒಮ್ಮೆ ಸವಣೂರಿನ ಬೇರೆ ಸರದಾರರೊಂದಿಗೆ ಪ್ರಯಾಣಕ್ಕೆ ಹೋದಾಗ, ಮಧ್ಯದಲ್ಲಿ ವಿಶ್ರಾಂತಿಗೆಂದು ಒಂದೆಡೆ ತಂಗಿದರು. ಆಗ ಇತರ ಸರದಾರರು ತಮ್ಮ ಕುದುರೆಗಳನ್ನು ಬೆಳೆದು ನಿಂತ ಹೊಲದಲ್ಲಿ ಮೇಯಲಿಕ್ಕೆ ಬಿಟ್ಟರು. ಇವರಿಬ್ಬರು ಮಾತ್ರ ತಮ್ಮ ಕುದುರೆಗಳನ್ನು ಗಿಡಗಳಿಗೆ ಕಟ್ಟಿ ಹಾಕಿದರು. ಆಗ ಉಳಿದ ಸರದಾರರು, ಅಬ್ದುಲ್ಲಾ ಮತ್ತು ವಾರಿಸಖಾನರಿಗೆ ಅವರ ಕುದುರೆಗಳನ್ನು ಮೇಯಲಿಕ್ಕೆ ಬಿಡಬೇಕೆಂದು ಕೇಳಿದರು. ಆಗ ಅಬ್ದುಲ್ಲಾನು "ನಮ್ಮ ಕುದುರೆಗಳು ಪುಕ್ಕಟೆಯಾಗಿ ದೊರೆಯುವುದನ್ನು ತಿನ್ನುವುದಿಲ್ಲ"ಎಂದು ಹೇಳಿದನು. ಇದರಲ್ಲಿ ಉಳಿದ ಸರದಾರರಿಗೆ ವಿಶ್ವಾಸ ಮೂಡಲಿಲ್ಲ. ಯಾರೋ ಒಬ್ಬರೆದ್ದು ಆ ಕುದುರೆಗಳನ್ನು ಬಿಚ್ಚಿ ಹೊಲಕ್ಕೆ ಬಿಟ್ಟರು. ಆದರೆ ಆ ಕುದುರೆಗಳೇನು ಆ ಹೊಲಕ್ಕೆ ಬಾಯಿ ಹಚ್ಚಲಿಲ್ಲ. ಇತರ ಸರದಾರರಿಗೆ ಇದನ್ನು ನೋಡಿ ಆಶ್ಚರ್ಯವೆನಿಸಿತು. ಈ ವಿಷಯವನ್ನು ಕೇಳಿದ ನವಾಬ ಅಬ್ದುಲ್ ಮಜೀದಖಾನನಿಗೆ ಆಶ್ಚರ್ಯವಾಯಿತು. ಇವರು ಒಮ್ಮೆ ತಂದೆಯ ಭೇಟಿಗೆಂದು ಚಿತ್ರದುರ್ಗಕ್ಕೆ ಹೋದಾಗ ಯಾರೋ ಕುಹಕಿಗಳು ಹಿರಿಯ ಮದಕರಿ ನಾಯಕನಿಗೆ ಇವರ ಬಗ್ಗೆ ತಪ್ಪು ಅಭಿಪ್ರಾಯವನ್ನು ಮಾಡಿಕೊಟ್ಟರು. ಮದಕರಿ ನಾಯಕನು ಇವರಿಬ್ಬರನ್ನೂ ಕೊಲ್ಲಿಸಿದನು. ಆಗ ನವಾಬ ಅಬ್ದುಲ್ ಮಜೀದಖಾನನು ಸೈನ್ಯದೊಂದಿಗೆ ಚಿತ್ರದುರ್ಗದ ಮೇಲೆ ಏರಿ ಹೋಗಿ ನಾಯಕನನ್ನು ಸೋಲಿಸಿದನು. ಅಬ್ದುಲ್ ಮಜೀದಖಾನನು ಚಿತ್ರದುರ್ಗದ ಮೇಲೆ ಏರಿ ಹೋಗಿದ್ದು ನಿಜ. ಆದರೆ ಸಂದರ್ಭ ಬೇರೆ. ೧೭೪೧ರಲ್ಲಿ ಮಜೀದಖಾನನು ಹಿರೇ ಮದಕರಿ ನಾಯಕನು ಆಳುವಾಗ ಅವನ ಮೇಲೆ ಏರಿ ಹೋಗಿದ್ದನು. ಕೆಳದಿ ಸಂಸ್ಥಾನದವರು ಬೇರೆ ಕೆಲವು ಸಂಸ್ಥಾನಿಕರೊಂದಿಗೆ ಸೇರಿಕೊಂಡು ಚಿತ್ರದುರ್ಗವನ್ನು ಹಾಳು ಮಾಡುವ ಪ್ರಯತ್ನಗಳನ್ನು ಮಾಡಿದರು. ಕೆಳದಿ ಬಸಪ್ಪ ನಾಯಕನು ಸವಣೂರು, ಆನೇಗುಂದಿ, ರಾಯದುರ್ಗ, ಹರಪನಹಳ್ಳಿ, ಪಾಳೆಯಗಾರರನ್ನು ಸೇರಿಸಿಕೊಂಡು ಮದಕರಿ ನಾಯಕನ ಮೇಲೆ ೧೭೪೧ರಲ್ಲಿ ದಾಳಿ ಮಾಡಿ, ಅವನ ರಾಮಗಿರಿ ಕೋಟೆಯನ್ನು ವಶಪಡಿಸಿಕೊಂಡನು. ಆದರೆ ಹಿರೇ ಮದಕರಿ ನಾಯಕನು ಅವರೊಡನೆ ಶೌರ್ಯದಿಂದ ಹೋರಾಡಿ ಆ ಕೋಟೆಯನ್ನು ಪುನರಾಕ್ರಮಿಸಿಕೊಂಡನು. ೧೭೪೮ರಲ್ಲಿ ಅಬ್ದುಲ್ ಮಜೀದಖಾನನನ್ನು ಒಳಗೊಂಡು ಈ ಪಾಳೆಯಗಾರರು ಮತ್ತೆ ಚಿತ್ರದುರ್ಗ ಸಂಸ್ಥಾನದ ಮೇಲೆ ದಾಳಿ ಮಾಡಿ ಮಾಯಕೊಂಡ ಕೋಟೆಯನ್ನು ವಶಪಡಿಸಿಕೊಂಡರು. ಈ

ಕಾಳಗದಲ್ಲಿ ಹಿರೇ ಮದಕರಿ ನಾಯಕನು ಹರಪನಹಳ್ಳಿ ಪಾಳೆಯಗಾರನಾದ ಸೋಮಶೇಖರ ನಾಯಕನಿಂದ ಗಾಯಗೊಂಡು ಸತ್ತನು. ಆದರೆ, 'ದಿಲೇರಜಂಗ'ಕಾವ್ಯದಲ್ಲಿ, ಹಿರೇ ಮದಕರಿ ನಾಯಕನು, ಸವಣೂರು ನವಾಬ ಅಬ್ದುಲ್ ಮಜೀದಖಾನನು ಗಾಯಗೊಳಿಸಿದ್ದರಿಂದ ಸತ್ತನು ಎಂದು ದಾಖಲಿಸಲ್ಪಟ್ಟಿದೆ. ಪ್ರಾಯಶಃ ನವಾಬರೇ ಬರೆಸಿದ ಈ ಕಾವ್ಯವು ಅಬ್ದುಲ್ ಮಜೀದಖಾನನ ಕೀರ್ತಿಯನ್ನು ಹೆಚ್ಚಿಸಲು ಹೀಗೆ ಬರೆಸಿರುವ ಸಂಭವವಿದೆ.

ಅಬ್ದುಲ್ ಮಜೀದಖಾನನು ನಿಜಾಮ ಉಲ್ಕ-ಮುಲ್ಕ ಅಸಫ್ ಝಾನ ದಕ್ಷಿಣದ ಸುಬೇದಾರಿಕೆಯನ್ನು ವಹಿಸಿಕೊಂಡ ಮೇಲೆ ನವಾಬ ಅಬ್ದುಲ್ ಮಜೀದಖಾನನು ಅವನನ್ನು ಭೇಟಿಯಾಗಿರಲಿಲ್ಲ. ಅಷ್ಟೇ ಅಲ್ಲದೆ ಅವನು ದಕ್ಷಿಣದ ಸುಬೇದಾರನಾಗಿದ್ದ ಅಸಫ್ ಝಾನ ಅನುಮತಿಯಿಲ್ಲದೆ ಸವಣೂರು ಸಿಂಹಾಸನವನ್ನೇರಿದ್ದನು. ಅದರಿಂದ ಉಲ್ಕ-ಮುಲ್ಕನು ಕರ್ನಾಟಕ ಸುಬಾದ ಮೇಲೆ ದಾಳಿಯನ್ನು ಮಾಡಿದನು. ದಾಳಿಗೆ ಅಪಾರ ಸೈನ್ಯವನ್ನು ಸೇರಿಸಿ ಅವನು ಸವಣೂರಿನತ್ತ ನಡೆದಾಗ, ಹಾದಿಯಲ್ಲಿ ಗದಗ ಮತ್ತು ಶಿರಹಟ್ಟಿ ದೇಸಾಯಿಯರು ಅವನನ್ನು ಭೇಟಿಯಾಗಿ ನಜರಾಣೆ ಸಲ್ಲಿಸಿದರು. ಆಗ ಉಲ್ಕ-ಮುಲ್ಕನು ಅವರಿಗೆ ಸತ್ಕಾರ ಮಾಡಿ ಆಹೇರನ್ನು ಕೊಟ್ಟನು. ಆಗ ಈ ದೇಸಾಯರು ಉಲ್ಕ-ಮುಲ್ಕನಿಗೆ ದುರ್ಬೋಧನೆ ಮಾಡಿ ಮುಜೀದಖಾನನನ್ನು ಕೊಲ್ಲಬೇಕೆಂದು ಹೇಳಿದರು. ಆದರೆ ಚತುರನಾದ ಉಲ್ಕ-ಮುಲ್ಕನು ಎಲ್ಲವನ್ನೂ ಕೇಳಿಕೊಂಡು ತನ್ನ ಜೊತೆಗಿದ್ದ ಅಲೀಖಾನ್ ಕರ್ನೂಲಿಯ ಮುಖಾಂತರ ಎರಡು ಲಕ್ಷ ರೂಪಾಯಿ ದಂಡವನ್ನು ವಸೂಲು ಮಾಡಿದನು. ಅಷ್ಟೇ ಅಲ್ಲ ನವಬಾನಿಂದ ಹಲವಾರು ಕಾಣಿಕೆಗಳನ್ನು ಪಡೆದನು. ನಂತರ ಉಲ್ಕ-ಮುಲ್ಕ ಮತ್ತು ಅಬ್ದುಲ್ ಮಜೀದಖಾನನು ಒಬ್ಬರಿಗೊಬ್ಬರು ಭೇಟಿಯಾದರು. ಭೇಟಿಯ ಕಾಲಕ್ಕೆ ಇಬ್ಬರೂ ಎದ್ದು ಹತ್ತು ಹೆಜ್ಜೆ ಹಾಕಿ ಒಬ್ಬರೊಬ್ಬರ ಕೈಕುಲುಕಿ, ಒಂದೇ ಆಸನದ ಮೇಲೆ ಕುಳಿತು, ಒಂದೇ ಹುಕ್ಕಾ ಸೇದಿದರು. ಹೀಗೆ ಅಬ್ದುಲ್ ಮಜೀದಖಾನನು, ನಿಜಾಮ ಉಲ್ಕ-ಮುಲ್ಕನು ಸ್ನೇಹ ಮತ್ತು ವಿಶ್ವಾಸವನ್ನು ಗಳಿಸಿದನು.

ನಿಜಾಮ ಉಲ್ಕ-ಮುಲ್ಕನು, ನವಾಬ ಮಜೀದಖಾನನು ಜೀವಿಸಿರುವಾಗಲೇ ೧೭೪೮ರಲ್ಲಿ ಮರಣ ಹೊಂದಿದನು. ಅವನ ಸುಪರ್ದಿಯಲ್ಲಿ ಕರ್ನಾಟಕ ಸುಬಾವನ್ನು ಒಳಗೊಂಡು ಒಟ್ಟು ಆರು ಪ್ರಾಂತ್ಯಗಳನ್ನು ರಚಿಸಲಾಯಿತು. ಉಲ್ಕ-ಮುಲ್ಕನ ನಂತರ ಅವನ ಜ್ಯೇಷ್ಠ ಪುತ್ರನಾದ ಗಾಜೀಯುದ್ದೀನ ಖಾನನು ದಕ್ಷಿಣದ ಸುಬೇದಾರನಾಗಿ ಅಧಿಕಾರವನ್ನು ವಹಿಸಿಕೊಳ್ಳಬೇಕಿತ್ತು. ಆದರೆ ಅವನು ದಿಲ್ಲಿಯಲ್ಲಿಯೇ ಉಳಿದಿದ್ದರಿಂದ, ಅವನ ತಮ್ಮ ಸೈಯದ ಅಹಮ್ಮದ ನಜೀರಜಂಗನು ಈ ಸ್ಥಾನಕ್ಕೆ ನಿಯಮಿಸಲ್ಪಟ್ಟನು. ಇವನು ವಯಸ್ಸಿನಿಂದ ಸಣ್ಣವನಿದ್ದುದರಿಂದ ಲೋಕಾನುಭವವಿಲ್ಲದೆ ಮೋರೋಪಂಡಿತನನ್ನು ತನ್ನ ದಿವಾನನೆಂದು ನಿಯಮಿಸಿಕೊಂಡನು. ಇವನನ್ನು ಪೇಶಕಾರ (ಸಚಿವ) ಎಂದು

ಕರೆಯುತ್ತಿದ್ದರು. ಮೋರೋಪಂತ ದಿವಾನನು ನಜೀರಜಂಗನ ದುರ್ಬಲತೆಯನ್ನು ಬಳಸಿಕೊಂಡು, ಅನೇಕ ಸಾಮಂತ ಪಠಾಣ ಪಾಳೆಯಗಾರರಿಗೆ ತೊಂದರೆಯನ್ನಿತ್ತನು. ಪೇಶಕಾರನ ಈ ನೀಚವೃತ್ತಿಯಿಂದ ಅನೇಕ ಕೊಲೆ ಸುಲಿಗೆಗಳು ಕೂಡ ನಡೆದವು. ಈ ದೂರುಗಳೆಲ್ಲ ದಿಲ್ಲಿಯ ಸಮ್ರಾಟ ಮಹಮ್ಮದ ಶಹಾನಿಗೆ ಹೋದ ಮೇಲೆ, ಅವನು ತನ್ನ ಮಗಳ ಮಗನಾದ ಹಿದಾಯತ್ ಮೋಹಿದ್ದೀನ ಖಾನನನ್ನು, ಮುಜಫರಜಂಗನಿಗೆ ಸಹಾಯಕನೆಂದು ನಿಯಮಿಸಿ ದಕ್ಷಿಣಕ್ಕೆ ಕಳಿಸಿದನು. ಬಂದ ಕೆಲದಿವಸ ಮೆತ್ತಗಿದ್ದ ಹಿದಾಯತ್ ಮೋಹಿದ್ದೀನನು, ಕೆಲವು ಆಫಘಾನಿ ಪಾಳೆಯಗಾರರನ್ನು ಒಲಿಸಿಕೊಂಡು, ಅವರ ಸಹಾಯದಿಂದ ಸಮ್ರಾಟ ಮೊಹಮ್ಮದ ಶಹಾನ (ಅನುಮತಿ) ಫರ್ಮಾನ ಇಲ್ಲದೆ ತಾನೇ ದಕ್ಷಿಣದ ಸುಬೇದರಾನೆಂದು ಹೇಳಿಕೊಂಡು, ಮನಸ್ಸಿಗೆ ಬಂದಂತೆ ವರ್ತಿಸಹತ್ತಿದನು. ಇದನ್ನು ನೋಡಿದ ನಜೀರಜಂಗನು, ಹಿದಾಯತ್ ಮೋಹಿದ್ದೀನನಿಗೆ ಸರಿಯಾಗಿ ನಡೆದುಕೊಳ್ಳಬೇಕೆಂದು ಎಚ್ಚರಿಸಿದನು. ಅಷ್ಟೇ ಅಲ್ಲ, ತನ್ನೊಬ್ಬ ಸರದಾರನನ್ನು ಕಳಿಸಿ, ಹಿದಾಯತ್ ಮೋಹಿದ್ದೀನನು ಕುರಾಣವನ್ನು ಹಿಡಿದುಕೊಂಡು ತನ್ನ ಸಮ್ಮುಖದಲ್ಲಿ ಬರಬೇಕೆಂದು ಹೇಳಿಕಳುಹಿಸಿದನು. ಹಿದಾಯತ್ ಮೋಹಿದ್ದೀನ ಅದಕ್ಕೆ ಒಪ್ಪಲಿಲ್ಲ. ಕೊನೆಗೆ ನಜೀರಜಂಗನು ಉಪಾಯವನ್ನು ಮಾಡಿ, ಹಿದಾಯತ್ ಮೋಹಿದ್ದೀನನನ್ನು ಬಂಧಿಸಿದನು. ಇದರಿಂದ ಆಫಘಾನಿ ಸರದಾರರಾದ ಸವಣೂರು, ಕಡಪಾ ಮತ್ತು ಕರ್ನೂಲ ನವಾಬರಿಗೆ ಅವಮಾನವಾದಂತಾಯಿತು. ಅವರು ನಜೀರಜಂಗನ ಮೇಲೆ ಕೆಂಡ ಕಾರಿದರು.

ನಿಜಾಮ ನಜೀರಜಂಗನು ಅರವತ್ತು ಸಾವಿರ ಸೈನ್ಯವನ್ನು ಕಟ್ಟಿಕೊಂಡು ಕರ್ನಾಟಕ ಸುಬಾಕ್ಕೆ ಬಂದಿದ್ದನು. ದಕ್ಷಿಣ ರಾಜ್ಯಗಳಲ್ಲಿ ಮೊಗಲರ ವಿರುದ್ಧ ಎದ್ದ ದಂಗೆಯನ್ನು ಹತ್ತಿಕ್ಕುವದೇ ಇವನ ಉದ್ದೇಶವಾಗಿತ್ತು. ಅದಕ್ಕೆ ಇವನು ತನ್ನ ಸಹಾಯಕ್ಕೆಂದು ಸವಣೂರು, ಕಡಪಾ, ಕರ್ನೂಲ ನವಾಬರನ್ನು ಕರೆದುಕೊಂಡು ಬಂದನು. ಇವರು ಅವನ ಸಾಮಂತರಾಗಿದ್ದರಿಂದ ಬರಲೇ ಬೇಕಿತ್ತು. ಹಾದಿಯಲ್ಲಿ ಮಳೆ ಪ್ರಾರಂಭವಾಗಿದ್ದರಿಂದ, ಸೈನಿಕರು, ಸೇವಕರು, ಪ್ರಾಣಿಗಳು ಬೇನೆಯಿಂದ ಬಳಲಹತ್ತಿದರು.

ಜಿಂಜೀ ಸಂಸ್ಥಾನದ ಸಮೀಪ ಅಲೆಯ ಗ್ರಾಮದ ಬಳಿ ಈ ಸೈನ್ಯವು ತಳವೂರಿತ್ತು. ಆಗ ಒಂದು ರಾತ್ರಿ ನವಾಬ ಮೊಹಮ್ಮದ ಅಲೀಖಾನನು, ಫ್ರೆಂಚರು ಜಿಂಜೀ ಕೋಟೆಯಿಂದ ಹೊರಬಂದು, ಇಂದು ರಾತ್ರಿ ತಮ್ಮ ಮೇಲೆ ದಾಳಿ ಮಾಡಲಿರುವರೆನ್ನುವ ಸುದ್ದಿ ನನಗೆ ಬಂದಿದೆ ಎಂದು ನಿಜಾಮ ನಜೀರಜಂಗನಿಗೆ ಹೇಳಿದನು. ಅದರಂತೆ ಆ ರಾತ್ರಿ ತೋಪುಗಳ ಸಪ್ಪಳ ಕೂಡ ಗುಡುಗಿನಂತೆ ಕೇಳಿಬರಹತ್ತಿತು. ನಜೀರಜಂಗನು ಗಾಬರಿಯಾಗಿ ಸಚಿವರನ್ನು, ಸೈನಿಕರನ್ನು ಒಂದುಗೂಡಿಸಲು ಆನೆಯನ್ನೇರಿ ಹೊರಟನು. ಹೋಗುವಾಗ ಅವನು ಪರ್ಶಿಯನ್ ಹಾಡೊಂದನ್ನು ಹಾಡುತ್ತ "ದುರ್ದೈವ ಬೆನ್ನು ಹತ್ತಿದಾಗ ಯಾವ ಸ್ನೇಹಿತರೂ ಸುಳಿಯುವುದಿಲ್ಲ. ಅವನತಿ ಬಂದರೆ ನಮ್ಮ ನೆರಳು

ಕೂಡ ನಮ್ಮನ್ನು ಹಿಂಬಾಲಿಸುವುದಿಲ್ಲ'' ಎಂದು ನಡೆದನು. ನಜೀರಜಂಗನನ್ನು ಕೊಂದು, ಹಿದಾಯತ್ ಮೋಹಿದ್ದೀನನಿಗೆ ನಸೀರಜಂಗ ಮಾಡಿದ ಅನ್ಯಾಯದ ಸೇಡನ್ನು ತೀರಿಸಿಕೊಳ್ಳುವ ಸಮಯ ಈಗ ಪ್ರಾಪ್ತವಾಗಿದೆ ಎಂದು ಅಫ್‌ಘಾನಿ ಸರದಾರರಾದ ಸವಣೂರು, ಕಡಪಾ, ಕರ್ನೂಲ ನವಾಬರು ಒಳಸಂಚನ್ನು ಮಾಡಿ; ಒಂದು ಮೂಲೆಯಲ್ಲಿ ನಿಂತರು.

ಈ ಸಾಮಂತ ನವಾಬರು ನಿಂತದ್ದನ್ನು ನೋಡಿ ನಜೀರಜಂಗನು ತನ್ನ ಮಾವುತನಿಗೆ ತನ್ನ ಆನೆಯನ್ನು ಅತ್ತ ಒಯ್ಯಬೇಕೆಂದು ಹೇಳಿದನು. ಆಗ ಮಾವುತನು ''ಹುಜೂರ್ ಈಗ ಇವರು ನಿಮ್ಮ ಮಿತ್ರರಲ್ಲ, ಶತ್ರುಗಳು'' ಎಂದು ಎಚ್ಚರಿಸಿದನು. ಅವನಿಗೆ ಒಳಸಂಚು ತಿಳಿದಿತ್ತೇನೋ! ಈಗ ನಜೀರಜಂಗನು ಮಾವುತನಿಗೆ ತಾನು ಹೇಳಿದಷ್ಟು ಕೆಲಸವನ್ನು ಮಾಡಬೇಕೆಂದು ದರ್ಪದಿಂದ ಆಜ್ಞಾಪಿಸಿದನು. ಸರಿ, ಮಾವುತನು, ನಜೀರಜಂಗನ ಆನೆಯನ್ನು ಸರದಾರರ ಅನೆಯ ಬಳಿ ತೆಗೆದುಕೊಂಡು ಹೋದನು. ಬೆಳಗಿನ ಜಾವದಲ್ಲಿ ನಿಜಾಮ ನಸೀರಜಂಗನು ಸವಣೂರು, ಕಡಪಾ, ಕರ್ನೂಲು ನವಾಬರಿಗೆ ಸಹಾಯವನ್ನು ಮಾಡಬೇಕೆಂದು ಯಾಚಿಸಿದನು. ಈ ಮೂವರೂ ತಲೆ ಹಾಕಿದರೇ ವಿನಃ, ಯಾವ ಮಾತನ್ನೂ ಆಡಲಿಲ್ಲ. ಹಾಗೆ ನೋಡಿದರೆ ಇವರು ನಜೀರಜಂಗನ ಸಹಾಯಕ್ಕೆಂದೇ ಬಂದಿದ್ದರು. ಈಗ ಅವನ ವಿರುದ್ಧ ಹೋರಾಡುವ ಸಂಚನ್ನು ಮಾಡಿದರು. ನಸೀರಜಂಗನ ಸೈನ್ಯದ ಒಡಕನ್ನು ನೋಡಿ, ಹಿದಾಯತ್ ಬಹದ್ದೂರಖಾನ ಕರ್ನೂಲಿಯು ನಜೀರಜಂಗನನ್ನು ಕೊಲ್ಲಬೇಕೆಂದು ತನ್ನವರಿಗೆ ಹೇಳಿದನು.

ಕರ್ನೂಲು ನವಾಬನಾದ ಬಹದ್ದೂರಖಾನನು ತನ್ನ ಆನೆ ಮತ್ತು ಬಂದೂಕವನ್ನು ತೆಗೆದುಕೊಂಡು ನಜೀರಜಂಗನ ಆನೆಯ ಸಮೀಪಕ್ಕೆ ಹೋದನು. ಆಗ ಮೊಹಮ್ಮದಖಾನ ಜಫಾರ ಆಜಾದಿ, ಕಡಪಾ ನವಾಬನ ಹಿಂದೆ, ಆನೆಯ ಮೇಲೆ ಕುಳಿತಿದ್ದನು. ಅವನಿಗೆ ನಿಜಾಮ ನಸೀರಜಂಗನ ತಲೆಯನ್ನು ಕತ್ತರಿಸಿ ಭರ್ಚಿಯ ತುದಿಗೆ ಹಚ್ಚಿ ತರಬೇಕೆಂದು ಕೂಗಿ ಹೇಳಿದನು. ಸರಿ, ನಿಜಾಮ ನಜೀರಜಂಗನು ತನ್ನ ಸಹಾಯಕ್ಕೆ ಬಂದ ಅಫ್‌ಘಾನ ಸರದಾರರ ಒಳಸಂಚಿಗೆ ಬಲಿಯಾಗಿ ರಣರಂಗದಲ್ಲಿ ಡಿಸೆಂಬರ್ ೧೬, ೧೭೫೦ರಂದು ಕೊಲ್ಲಲ್ಪಟ್ಟನು. ನಸೀರಜಂಗನ ಕೊಲೆಯಾದಾಗ, ಅವನ ಹಿಂದಿನ ಆನೆಯಲ್ಲಿ ಮುಸುಕು ಹಾಕಿಕೊಂಡು ಸವಣೂರು ನವಾಬ ಅಬ್ದುಲ್ ಮಜೀದಖಾನನು ಕುಳಿತಿದ್ದನು. ನಜೀರಜಂಗನ ಹೆಣವು ನೆಲಕ್ಕೆ ಉರುಳಿದೊಡನೆ, ಆಫ್‌ಘಾನಿ ಸರದಾರರು ಅಬ್ದುಲ್ ಮಜೀದಖಾನನೇ ಈ ಕೃತ್ಯವನ್ನು ಎಸಗಿರಬೇಕೆಂದು ಭಾವಿಸಿ, ಇವನಿಗೇ ಅಭಿನಂದನೆಗಳನ್ನು ಸಲ್ಲಿಸಿದರು. ಆದರೆ ಅಬ್ದುಲ್ ಮಜೀದ ಖಾನನು ನಜರಾಣೆ ಸ್ವೀಕರಿಸಲು ಸಿದ್ಧನಿರಲಿಲ್ಲ. ಕಾರಣ ನಿಜಾಮ ನಜೀರಜಂಗನನ್ನು ಕೊಂದವನು ಕರ್ನೂಲ ನವಾಬನಾದ ಬಹದ್ದೂರ ಖಾನನು. ಅದಕ್ಕೆ ಅಬ್ದುಲ್ ಮಜೀದಖಾನನು ನಜರಾಣೆ ಸ್ವೀಕರಿಸಲು ಹಿಂದೆಮುಂದೆ

ನೋಡಿದಾಗ, ಅವನ ಮಗನಾದ ಯುವರಾಜ ಅಬ್ದುಲ್ ಕರೀಮಖಾನನು ನಜರಾಣೆಯನ್ನು ಸ್ವೀಕರಿಸಲು ಒತ್ತಾಯ ಮಾಡಿದನು. ಯುವರಾಜ ಅಬ್ದುಲ್ ಕರೀಮಖಾನನು ತನ್ನ ಸೈನ್ಯದೊಂದಿಗೆ ತನ್ನ ತಂದೆಯ ಸಹಾಯಕ್ಕೆ ಬಂದಿದ್ದನು. ಇವನು ಕೂಡ ಈ ಒಳಸಂಚಿನಲ್ಲಿ ಒಬ್ಬ ಭಾಗೀದಾರನಾಗಿದ್ದನು. ಈ ಕೊಲೆ ಜಿಂಜೀಕೋಟೆಯ ಪೂರ್ವಭಾಗದಲ್ಲಿ ನಡೆಯಿತೆಂದು ಕೆಲವು ಇತಿಹಾಸಕಾರರು ಬರೆದಿದ್ದಾರೆ. ಆಗ ಜಿಂಜೀ ಕೋಟೆಯಲ್ಲಿ ಫ್ರೆಂಚರ ಸೈನ್ಯವಿತ್ತು. ಅದನ್ನು ನಾಶಪಡಿಸುವ ಉದ್ದೇಶದಿಂದಲೇ ನಿಜಾಮ ನಜೀರಜಂಗನು ತನ್ನ ಸಾಮಂತರಾದ ಅಫ್‌ಘಾನಿ ಸರದಾರರನ್ನು ಕರೆತಂದಿದ್ದನು. ಆದರೆ, ಸಾಮಂತರು ಮತ್ತು ಸ್ನೇಹಿತರು ಎಂದು ಭಾವಿಸಿದ್ದ ಈ ಅಫ್‌ಘಾನಿಗಳೇ ಅವನನ್ನು ಕೊಲ್ಲಬಹುದು ಎಂದು ಅವನಿಗೆ ಅನಿಸಿರಲಿಲ್ಲ. ಕೊಡಲಿಯ ಕಾವೇ, ಕಟ್ಟಿಗೆಗೆ ಮೃತ್ಯುವಾಗುವಂತೆ ಅಫ್‌ಘಾನಿ ಪಠಾಣರೇ ಇನ್ನೊಬ್ಬ ಪಠಾಣೇ ಅಫ್‌ಘಾನಿಯನ್ನು ಕೊಂದರು.

### ಸವಣೂರು ಕೋಟೆಯ ದುರಸ್ತಿ

ಅಬ್ದುಲ್ ಮಜೀದಖಾನನು ಸವಣೂರು ಕೋಟೆಯನ್ನು ದುರಸ್ತಿ ಮಾಡಿಸಿ. ಉತ್ತರಕ್ಕೆ ಹೊಸದೊಂದು ಮಹಾದ್ವಾರ (ಆಗಸೆ)ವನ್ನು ಕಟ್ಟಿಸಿ ಅದಕ್ಕೆ, 'ಆಘಾಡಿ ದರವಾಜ' ಎಂದು ಕರೆದನು. ಈ ಮಹಾದ್ವಾರವು ಇರಾಣದ 'ಅಳವಂದ'-'ದಾಮವಂದ' ಮಹಾದ್ವಾರದ ಎತ್ತರಕ್ಕಿದ್ದ ಆಗಸೆಯೆಂದು ಕವಿ ವರ್ಣಿಸಿದ್ದಾನೆ. ಇದನ್ನು ಅತ್ಯಂತ ಕಡಿಮೆ ದಿವಸಗಳಲ್ಲಿ ಕಟ್ಟಲಾಯಿತಂತೆ. ಆಘಾಡಿ (ಯುದ್ಧದ ಮುಖ) ದರವಾಜವನ್ನು ಸವಣೂರಿನವರು ಅಗಡಿ ಅಗಸೆಯೆಂದು ಕರೆಯುತ್ತಾರೆ. ಈಗ ಇದು ಭಗ್ನಾವಸ್ಥೆಯಲ್ಲಿ ನಿಂತಿದೆ.

### ಮಜೀದಪುರ ನಿರ್ಮಾಣ

ಅಬ್ದುಲ್ ಮಜೀದಖಾನ ನವಾಬನಿಗೆ ತನ್ನ ರಾಜ್ಯದ ಪ್ರತಿಷ್ಠಿತರು, ಶ್ರೀಮಂತರು ವ್ಯಾಪಾರಿಗಳು ಹೊಸನಗರವೊಂದನ್ನು ಕಟ್ಟಡಿಸಿಕೊಂಡು ಅಲ್ಲಿ ಪ್ರಶಸ್ತವಾಗಿ ಇರಬೇಕೆಂದು ಅನಿಸಿತು. ಕೂಡಲೇ ಹೊಸನಗರದ ನಿರ್ಮಾಣಕ್ಕಾಗಿ, ಮಜೀದಖಾನ ನವಾಬನು ತಾನೇ ವಿನ್ಯಾಸವನ್ನು ಸಿದ್ಧಪಡಿಸಿ, ಹಳೇಹುಬ್ಬಳ್ಳಿ ಪಾರ್ಶ್ವದಲ್ಲಿಯೇ ಹೊಸಹುಬ್ಬಳ್ಳಿಯನ್ನು ಕಟ್ಟಲು ೧೭೨೭ರಲ್ಲಿ ಸಿದ್ಧತೆಗಳನ್ನು ನಡೆಸಿದನು. ಸವಣೂರಿನ ಪ್ರತಿಷ್ಠಿತರು, ಶ್ರೀಮಂತರು, ವ್ಯಾಪಾರಿಗಳು ವಾಸಿಸಲು ದೊಡ್ಡ ದೊಡ್ಡ ಸೌಧಗಳನ್ನು ಕಟ್ಟಿಸಿಕೊಂಡು, ಹೊಸನಗರದಲ್ಲಿ ಉದ್ದಿಮೆಗಳನ್ನು ಸ್ಥಾಪಿಸಿ, ಅಭಿವೃದ್ಧಿಗೊಳಿಸಲು, ವಿಶಾಲ ನಿವೇಶನದಲ್ಲಿ ನಿಶಾನೆಯನ್ನು ಏರಿಸಿ, ನವನಗರಕ್ಕೆ ನಾಂದಿಯಾಗಿ ನಗಾರಿಯನ್ನು ಬಾರಿಸಿದನು. ಆರೇಳು ತಿಂಗಳಲ್ಲಿ ಕಟ್ಟಡಗಳ ರಚನೆ ಪ್ರಾರಂಭವಾಯಿತು. ನಗರವು ಸಿದ್ಧವಾದ ಮೇಲೆ ಅದಕ್ಕೆ 'ಮಜೀದಪುರ' ಎಂದು ನಾಮಕರಣ ಮಾಡಿದನು. ನಂತರ

ಈ ಮಜೀದಪುರವು ಹೊಸಹುಬ್ಬಳ್ಳಿಯೆಂದು ಪುನರ್ನಾಮಗೊಂಡಿತು. ಹುಬ್ಬಳ್ಳಿಯ ಒಂದು ಭಾಗವನ್ನು ಈಗಲೂ ಮಜೀದಪುರ ಗಲ್ಲಿ ಎಂದೇ ಕರೆಯುತ್ತಾರೆ. ಈ ಹೊಸನಗರವನ್ನು ಕಟ್ಟುವಾಗ ಅಬ್ದುಲ್ ಮಜೀದಖಾನನು ಸಿಂಹಾಸನದ ಮೇಲೆ ಇದ್ದರೂ, ಅಧಿಕಾರವನ್ನು ವಹಿಸಿಕೊಂಡಿರಲಿಲ್ಲ. ಆಗ ಅವನ ಕಕ್ಕ ಸತ್ತಾರಖಾನ ಆಡಳಿತೆಯನ್ನು ನೋಡಿ ಕೊಳ್ಳುತ್ತಿದ್ದನು.

ಇದೇ ಸುಮಾರಿಗೆ ನವಾಬನು ಸವಣೂರಲ್ಲಿ ಮೋತೀತಲಾವ ಎನ್ನುವ ಜಲಾಶಯವನ್ನು (ವಿಶಾಲ ಕೆರೆ) ನಿರ್ಮಿಸಿದನು. ಇದರ ರಚನೆಗೆ ೬೪೦೦೦ ರೂಪಾಯಿ ವ್ಯಯವಾದವು. ಇದರ ನೀರು ಅತ್ಯಂತ ಸ್ವಾದಿಷ್ಟವಾಗಿದ್ದು, ನೀರಿನ ಒಂದೊಂದು ಹನಿಯೂ ಮುತ್ತಿನಂತೆ ಕಾಣುತ್ತಿದ್ದುದರಿಂದ ಇದಕ್ಕೆ ಮೋತೀಲತಲಾವ (ಮುತ್ತಿನಕೆರೆ) ಎಂದು ನಾಮಕರಣ ಮಾಡಿದನು. ಸವಣೂರಿನ ದಕ್ಷಿಣಕ್ಕಿರುವ ಈ ಕೆರೆಯ ಕೋಡಿಯ ಕೆಳ ಪ್ರದೇಶದಲ್ಲಿ ನವಾಬಾಗ ಎಂಬ ತೋಟವನ್ನು ಸಿದ್ಧಪಡಿಸಿ ಮಾವಿನ ಗಿಡಗಳನ್ನು ನೆಡಿಸಿದನು. ಮಸ್ಕತ್ ದಿಂದ ತಂದ ಮಾವಿನ ಸಸಿಗಳನ್ನು ಹಚ್ಚಿದ್ದರಿಂದ, ಈ ವೃಕ್ಷಗಳ ಮಾವಿನ ಹಣ್ಣುಗಳು ಹಲ್ವಾದಷ್ಟು ರುಚಿಯಿದ್ದು, ತಿಂದರೆ ಗುಂಗು ಹಿಡಿಯುತ್ತಿತ್ತು. ಈ ಜಾತಿಯ ಹಣ್ಣಿನ ಗೊರಟಗಳು ರೂಪಾಯಿಯಷ್ಟು ತೆಳುವಾಗಿದ್ದವು. ಈ ಗಿಡಗಳ ತೊಗಟೆ ಸುವಾಸನೆಯನ್ನು ಬೀರುತ್ತಿದ್ದವು. ಈ ವಾಸನೆ ಮಸ್ಕತ್‌ದ ಅತ್ತರ ಹಾಗೂ ಕೇಸರ ವಾಸನೆಯಷ್ಟು ಸುಗಂಧವಾಗಿತ್ತು!.

ಅಬ್ದುಲ್ ಮಜೀದಖಾನನ ಆಳ್ವಿಕೆಯಲ್ಲಿ ಅದೆಷ್ಟು ಶಾಂತಿ ನೆಲೆಸಿತ್ತೆಂದರೆ, ಹುಲಿ ಮತ್ತು ಕುರಿಗಳು ಒಂದೆಡೆ ಕೂಡಿ ಜಲಾಶಯದಲ್ಲಿ ನೀರನ್ನು ಕುಡಿಯುತ್ತಿದ್ದವಂತೆ. ಅಬ್ದುಲ್ ಮಜೀದಖಾನ ನವಾಬನು ಅಂತ್ಯದಲ್ಲಿ ಆರು ಮಕ್ಕಳನ್ನು ಬಿಟ್ಟು ಹಿಜರಿ ಶಕೆ ೧೧೬೮ರಲ್ಲಿ ಅಂದರೆ ಇಸ್ವಿ ಸನ್ ೧೭೫೪ರಲ್ಲಿ ಸವಣೂರಲ್ಲಿ ಮರಣ ಹೊಂದಿದನು.

ಮಜೀದಖಾನನು ಪಟ್ಟವೇರುವಾಗ ಅವನ ಇಬ್ಬರು ತಮ್ಮಂದಿರಲ್ಲಿ ಒಬ್ಬನಾದ ಅಬ್ದುಲ್ ಕರೀಮಖಾನನು ಮಜೀದಖಾನನನ್ನು ಸರಿಸಿ ತಾನೇ ಸಿಂಹಾಸನವನ್ನೇರಿದನು. ನಂತರ ಉಳಿದೆಲ್ಲ ಸಹೋದರರು ಅಬ್ದುಲ್ ಕರೀಮಖಾನನನ್ನು ಸಿಂಹಾಸನದಿಂದ ಕೆಳಗಿಳಿಸಿ ಅಬ್ದುಲ್ ಮಜೀದಖಾನನನ್ನು ಗಾದೆಗೆ ತಂದರು. ಅಬ್ದುಲ್ ಮಜೀದಖಾನನು ತನ್ನ ಅನುಮತಿಯಿಲ್ಲದೇ ಸಿಂಹಾಸನವನ್ನೇರಿದನೆಂದು ಮೊಗಲರ ಪ್ರತಿನಿಧಿ ನಿಜಾಮನು ಮಜೀದಖಾನನ ಮೇಲೆ ಕೊಪಗೊಂಡು ತನ್ನ ಸೈನ್ಯವನ್ನು ಕಳಿಸಿದನು. ಆಗ ಮೊಗಲರ ಪ್ರತಿನಿಧಿ ಬೆಳಗಾವ ಕೋಟೆಯನ್ನು ನವಾಬನಿಂದ ಕಿತ್ತುಕೊಂಡನು. ಈ ಹೊತ್ತಿಗೆ ನಿಜಾಮನು ಮೊಗಲ ಸಾಮ್ರಾಟನ ಅಧಿಕಾರವನ್ನು ಧಿಕ್ಕರಿಸಿದ್ದನು. ಇವನು ಉತ್ತರ ಕರ್ನಾಟಕದ ಸೋಂದಾ(ಸ್ವಾದಿ) ಮೇಲೆ ಪ್ರಭುತ್ವವನ್ನು ಸ್ಥಾಪಿಸಿದ್ದನಲ್ಲದೇ, ತುಂಗಭದ್ರಾ ನದಿ ಆಚೆಯ ಬಿದನೂರಿನ ಮೇಲೂ ಅಧಿಕಾರವನ್ನು ಹೊಂದಿದ್ದನು. ಕೃಷ್ಣಾ ಮತ್ತು

ತುಂಗಭದ್ರಾ ನದಿಗಳ ಮಧ್ಯದ ಪ್ರದೇಶದಲ್ಲಿದ್ದ ರೈತರು ಮರಾಠರಿಗೆ ಕೊಡಬೇಕಾಗಿದ್ದ ಕಂದಾಯದ ಬಾಕಿಯನ್ನು ಕೂಡ ಅಬ್ದುಲ್ ಮಜೀದಖಾನನು ವಿರೋಧಿಸಿದನು.

## ಅಬ್ದುಲ್ ಹಕೀಮಖಾನ (೧೭೫೪-೧೭೯೫)

ಸವಣೂರು ರಾಜ್ಯವನ್ನು ಸುದೀರ್ಘಕಾಲ ಆಳಿದ ಕೀರ್ತಿಗೆ ಪಾತ್ರನಾದವನೆಂದರೆ ಅಬ್ದುಲ್ ಹಕೀಮಖಾನ ನವಾಬನು. ಇವನ ಆಳ್ವಿಕೆಯಲ್ಲಿ ನಡೆದಷ್ಟು ಸ್ಥಿತ್ಯಂತರಗಳು ಬೇರಾವ ನವಾಬನ ಕಾಲದಲ್ಲಿಯೂ ನಡೆಯಲಿಲ್ಲ. ಇಪ್ಪತ್ತೆರಡು ಮಹಲುಗಳಷ್ಟು ವಿಶಾಲವಾಗಿದ್ದ ಸವಣೂರು ರಾಜ್ಯವು ಇವನ ಕಾಲಕ್ಕೆ ಇಪ್ಪತ್ತೈದು ಹಳ್ಳಿಗಳಷ್ಟು ಕುಬ್ಜವಾಯಿತು. ಆದರೆ, ಇವನ ಕಾಲದಲ್ಲಿ ರಾಜ್ಯದ ಕೀರ್ತಿ ದಿಗ್‌ದಿಗಂತಕ್ಕೆ ಪಸರಿಸಿತು. ಇವನ ಜೀವನದ ಕೊನೆಯ ಕಾಲದಲ್ಲಿ ಇವನು ಪೇಶ್ವೆಯವರೀಯುತ್ತಿದ್ದ ಪಿಂಚಣಿಯ ಮೇಲೆ ಬದುಕಬೇಕಾಯಿತು. ಟಿಪು ಸುಲ್ತಾನನ ತಂಗಿ ಇವನ ಸೊಸೆಯಾಗಿದ್ದು, ಇವನ ಮಗನು ಹೈದರ ಅಲಿಯ ಅಳಿಯನಾಗಿದ್ದು, ಇವನಿಗೆ ಯಾವ ಪ್ರಯೋಜನವಾಗಲಿಲ್ಲ. ಟಿಪುವೇ ಸವಣೂರು ರಾಜ್ಯವನ್ನು ವಿನಾಶದ ಅಂಚಿಗೆ ದೂಡಿದನು.

ಒಂದೆಡೆ ಮರಾಠರು, ಇನ್ನೊಂದೆಡೆ ಮೊಗಲರ ಪ್ರತಿನಿಧಿ ಹೈದರಾಬಾದ ನಿಜಾಮನು, ಮತ್ತೊಂಡೆಡೆ ಹೈದರ-ಟಿಪು ಸೇರಿ ಸವಣೂರನ್ನು ಪಗಡೆಕಾಯಿಯಂತೆ ತಿರುಗಿಸಿ ಹಣ್ಣುಹಣ್ಣು ಮಾಡಿದರು. ಅದರಿಂದ ಹಕೀಮಖಾನ ಹೈರಾಣ ಆದನು. ಕೊನೆ ಕೊನೆಗೆ ಹಕೀಮಖಾನನಿಗೆ ಸಿಂಹಾಸನವು ಮುಳ್ಳಿನ ತಲ್ಪವಾಗಿ ಪರಿಣಮಿಸಿತು.

ಅಬ್ದುಲ್ ಹಕೀಮಖಾನನು ಸಿಂಹಾಸನವನ್ನೇರಿದೊಡನೆ ಪೇಶ್ವೆಯವರ ಶತ್ರುವಾಗಿದ್ದ ಮುಜಾಫರಖಾನನೆನ್ನುವ ಬಂಡಾಯ ಸರದಾರನಿಗೆ ಆಶ್ರಯವನ್ನಿತ್ತನು. ಇವನು ಮೊದಲು ನಿಜಾಮನ ಸೈನ್ಯದಲ್ಲಿದ್ದು,ನತರ ಬಾಳಾಜಿ ಪೇಶ್ವೆ(೧೭೪೦-೧೭೬೧) ಯವರ ಸೈನ್ಯವನ್ನು ಸೇರಿದ್ದನು. ಇವನು ಓಡಿಬಂದು ನವಾಬ ಹಕೀಮಖಾನನ ಆಶ್ರಯವನ್ನು ಪಡೆದನು.ಇದನ್ನು ನೋಡಿ ಪೇಶ್ವೆ ಅವರು ಮುಜಾಫರಖಾನನನ್ನು ತಮಗೆ ಒಪ್ಪಿಸಬೇಕೆಂದು ಹಕೀಮಖಾನ ನವಾಬನಿಗೆ ಕೇಳಿದರು. ಫ್ರೆಂಚ್ ಸೇನಾಪತಿ ಬುಸ್ಸೀಯ ಸಹಾಯದಿಂದ ನಿಜಾಮ ಉಲ್ಕ-ಮುಲ್ಕನ ಮೂರನೇ ಮಗನಾದ ಸಲಾಬತ ಜಂಗನು ಹೈದ್ರಾಬಾದ ಸಿಂಹಾಸನವನ್ನೇರಿದ್ದನು. ಇವನು ಪ್ರತಿಭಟಿಸಿದನು. ಅದರಿಂದ, ಅಂತಹ ತಮ್ಮ ಶತ್ರುವಿಗೆ ಹಕೀಮಖಾನ ನವಾಬನು ಆಶ್ರಯವನ್ನಿತ್ತದ್ದನ್ನು ಕೇಳಿ ಸಲಾಬತ್ ಜಂಗನೂ ಕೋಪಾವಿಷ್ಟನಾದನು. ಪೇಶ್ವೆ ಬಾಳಾಜಿ ಬಾಜೀರಾವ್ ಊರ್ಫ್ ನಾನಾ ಸಾಹೇಬನು ಮಜಾಫರ್ ಖಾನನ್ನು ತಮಗೆ ಒಪ್ಪಿಸಬೇಕೆಂದು ಕೇಳಿದಾಗ ನವಾಬ ಹಕೀಮಖಾನನು ನಿರಾಕರಿಸಿದನು. ಇದರ ಜೊತೆ ಅಬ್ದುಲ್ ಹಕೀಮಖಾನನು ಮೊಗಲರ ಪ್ರತಿನಿಧಿ ನಿಜಾಮ ಉಲ್ಕ-ಮುಲ್ಕನ ಅಧಿಕಾರವು ತನ್ನ ರಾಜ್ಯದ ಮೇಲೆ ಇಲ್ಲವೆಂದು

ಸಾರಿದನು. ನಿಜಾಮ ಉಲ್ಕ ಮುಲ್ಕನನ್ನು ಹೈದರಾಬಾದ ಸಿಂಹಾಸನದ ಮೇಲೆ ಫ್ರೆಂಚ್ ಸೇನಾಪತಿ ಮಿ॥ ಬುಸ್ಸೀ ಕೂಡಿಸಿದ್ದನು. ಈಗ ಈ ಎರಡೂ ಶಕ್ತಿಗಳು ಕೂಡಿಕೊಂಡು ಅಬ್ದುಲ್ ಹಕೀಮಖಾನನ ಮೇಲೆ ಯುದ್ಧವನ್ನು ಸಾರಿದವು. ನಿಜಾಮ, ಬುಸ್ಸೀ ಮತ್ತು ಬಾಳಜೀ ಬಾಜೀರಾವ್ ಕೂಡಿ ಅಪಾರ ಸೈನ್ಯದೊಂದಿಗೆ ಸವಣೂರಿನ ಮೇಲೆ ದಂಡೆತ್ತಿ ಬಂದರು. ಸಲಾಬತ್ ಮತ್ತು ಬುಸ್ಸಿಯ ಬಳಿ ತರಬೇತಿ ಪಡೆದ ಸೈನಿಕರಿದ್ದರು. ಸವಣೂರು ನವಾಬನ ಸಹಾಯಕ್ಕೆ ಗುತ್ತಿಯ ಮುರಾರಿರಾವ್ ಬಂದನು. ಮುರಾರಿರಾವ್ ಆಗಲೇ ಪೇಶ್ವೆಯವರ ಅಧಿಕಾರವನ್ನು ಧಿಕ್ಕರಿಸಿದ್ದನು. ಸವಣೂರು ಬಳಿ ಮೂರು ತಿಂಗಳು ಕಾಲ ಯುದ್ಧ ನಡೆಯಿತು. ಬುಸ್ಸಿಯ ಸೈನ್ಯ ಕಲಿತನದಿಂದ ಕಾದಡಿತು. ವಿರೋಧಿಗಳ ಹೊಡೆತನವನ್ನು ತಾಳಲಾರದೆ ಮುರಾರಿರಾವ್ ಮತ್ತು ಹಕೀಮಖಾನನು ತತ್ತರಿಸಿದರು. ಕೊನೆಗೆ ನವಾಬ ಹಕೀಮಖಾನನು ಫ್ರೆಂಚ್ ಸೇನಾಪತಿ ಬುಸ್ಸೀಯೊಡನೆ, ಒಡಬಂಡಿಕೆಗೆ ಸಿದ್ದನಾದನು. ಮಿ॥ ಬುಸ್ಸೀ, ಅಬ್ದುಲ್ ಹಕೀಮಖಾನ ಮತ್ತು ಗುತ್ತಿಯ ಮರಾರಿರಾವನೊಡನೆ ಕೆಲ ಕರಾರುಗಳನ್ನು ಮಾಡಿಕೊಂಡನು. ಈ ಸುದ್ದಿ ಸಲಾಬತ್ ಜಂಗನಿಗೆ ತಿಳಿದೊಡನೆ, ಬಾಳಾಜೀ ಬಾಜೀರಾವನ ಸಲಹೆಯಂತೆ ಅವನು ಬುಸ್ಸಿಯನ್ನು ತನ್ನ ಸೇವೆಯಿಂದ ತೆಗೆದು ಹಾಕಿದನು.

ಈ ಯುದ್ಧದಲ್ಲಿ ನವಾಬ ಹಕೀಮಖಾನನಿಗೆ ಅಪಾರ ಹಾನಿಯಾಗಿದ್ದರೂ, ಅವನ ಕಡೆಯವರು ''ನಮ್ಮ ಪಕ್ಷಕ್ಕೆ ಕೇವಲ ಒಂದು ಮುದುಕಿ ಮತ್ತು ಒಂದು ಅಗಸನ ಕತ್ತೆ ಸತ್ತಷ್ಟು ಹಾನಿಯಾಗಿದೆ''ಎಂದು ಜಂಬನವನ್ನು ಕೊಚ್ಚಿಕೊಂಡರು. ಆದರೂ ಪೇಶ್ವೆಯವರ ವಕೀಲ ಮತ್ತು ಸವಣೂರಿನ ವಕೀಲನು ಸೇರಿ ಒಪ್ಪಂದದ ಕವಲು ಕರಾರುಗಳನ್ನು ಸಿದ್ಧಪಡಿಸಿದರು.

ಈ ಒಪ್ಪಂದದ ಫಲಿತಾಂಶವೆಂದರೆ, ಅಬ್ದುಲ್ ಹಕೀಮಖಾನನು ಪೇಶ್ವೆಯವರಿಗೆ ರೂ.೮,೨೩,೯೩೦ ಉತ್ಪನ್ನ ಬರುವ ಮಿಶ್ರೀಕೋಟೆ ಜಿಲ್ಲೆ, ಹೊಸದಾಗಿ ಕಟ್ಟಿಸಿದ ಹುಬ್ಬಳ್ಳಿ ನಗರ ಮತ್ತು ಕುಂದಗೋಳ ಜಿಲ್ಲೆಯನ್ನು ಬಿಟ್ಟುಕೊಟ್ಟನು. ನವಾಬ ಹಕೀಮಖಾನನಿಗೆ ಪರಿಹಾರವೆಂದು ರೂ.೭.೨೮,೬೪೦ ಉತ್ಪನ್ನವನ್ನು ಹೆಚ್ಚಿಸುವ ಗುತ್ತಿ ವಿಭಾಗದ ರಾಣೇಬೆನ್ನೂರು ಮತ್ತು ಪರಸಗಡ ಜಿಲ್ಲೆ ಹಾಗೂ ಅಣ್ಣೀಗೆರೆ ಜಿಲ್ಲೆಯನ್ನು ಕೊಡಲಾಯಿತು. ಈ ಪ್ರದೇಶಗಳಲ್ಲಿ ಸೊಂದಾ ಮತ್ತು ಉತ್ತರ ಕನ್ನಡ ಜಿಲ್ಲೆಗಳನ್ನು ಸೇರಿಸಲಾಗಿತ್ತು. ನವಾಬ ಹಕೀಮಖಾನನು ಪೇಶ್ವೆಯವರಿಗೆ ಹನ್ನೊಂದು ಲಕ್ಷ ರೂಪಾಯಿ ರೋಖ ಹಣವನ್ನು ದಂಡವೆಂದು ಕೊಡಬೇಕಾಯಿತು. ಇದರಿಂದ ಪೇಶ್ವೆಯವರು ಸವಣೂರು ನವಾಬನನ್ನು ನಿಜಾಮನ ಅಂಜಿಕೆಯಿಂದ ಸಂರಕ್ಷಿಸುವ ಹೊಣೆಯನ್ನು ಹೊತ್ತರು. ಈ ಕರಾರು ಪತ್ರಕ್ಕೆ ಬಾಳಾಜೀ ಬಾಜೀರಾವನು, ತನ್ನ ಸ್ವಾಮಿಯಾದ ಶಾಹೂ ಮಹಾರಾಜರ ಪ್ರತಿನಿಧಿಯೆಂದೇ ಹಸ್ತಾಕ್ಷರಗಳನ್ನು ಹಾಕಿದನು. ಈ ಒಪ್ಪಂದ ಪ್ರಾಯಶಃ

೧೭೫೬ರಲ್ಲಿ ಆಗಿರಬೇಕು. ಇದು ಸವಣೂರಿನ ಇತಿಹಾಸದಲ್ಲಿ ಅತ್ಯಂತ ಮಹತ್ವದ ಒಪ್ಪಂದವಾಯಿತು.

## ಕರಾರು ಪತ್ರ

### ಭಾಗ-೧

ರಾಜಾ ಶಾಹೂ ಮಹಾರಾಜ ನರಪತಿ ಹರ್ಷಾಶ್ರಿತ ಪಂತಪ್ರತಿನಿಧಿ ಬಾಳಾಜೀ ಬಾಜೀರಾವ ಮತ್ತು ಅಬ್ದುಲ್ ಹಕೀಮಖಾನರ ಮಧ್ಯೆ ಒಪ್ಪಂದವಾದ ವಿವರಗಳು(೧೭೫೬)

ಸವಣೂರು ನವಾಬರು ಪೇಶ್ವೆಯವರಿಗೆ ಬಿಟ್ಟುಕೊಟ್ಟ ಪರಗಣಾ, ಕಸಬಾ, ಹಳ್ಳಿಗಳು ಮತ್ತು ಅವುಗಳ ವಾರ್ಷಿಕ ಉತ್ಪನ್ನಗಳ ವಿವರಗಳು

ಅ)

| ಸ್ಥಳಗಳು | ವಾರ್ಷಿಕ ಉತ್ಪನ್ನ | ಸ್ಥಳಗಳು | ವಾರ್ಷಿಕ ಉತ್ಪನ್ನ |
|---|---|---|---|
| ಕುಂದಗೋಳ | ೭೭,೦೦೦ | ಅಮ್ಮನ ಭಾವಿ | ೧೫,೦೦೦ |
| ರಾಯರ ಹುಬ್ಬಳ್ಳಿ | ೨೨,೭೫೦ | ತಲವಾಯಿ ಜಾಡರಹುಬ್ಬಳ್ಳಿ | ೧೦,೦೦೦ |
| ಮಿಶ್ರೀಕೋಟೆ | ೫೬,೦೦೦ | ತಾಲೂಕ ತಡಕೋಡ | ೧೫,೦೦೦ |
| ಮಜೀದಪುರ | ೪,೧೪೦ | ನರೇಂದ್ರ | ೩,೦೦೦ |
| ಸಮತ್ ತಡಸ | ೨೧,೦೦೦ | | |
| ಅಡವೀ ಸೋಮಾಪುರ | ೧,೧೨೦ | ಶಿರೋಳ | ೧,೨೫೦ |
| ಸೊರವಾಡ ಸರದೇಶಮಾಡ(ಹುಬ್ಬಳ್ಳಿ) | ೩,೩೬೬ | ನವಲಗುಂದ | ೨೫,೫೫೪ |
| ಸಮತ್ ಕಲಘಟಗಿ | ೨೧,೦೦೦ | ಸತ್ತಿಗೇರಿ ಮುರಗೋಡ | ೪,೦೦೦ |
| ಬೊಮ್ಮಿಗಟ್ಟ ಹರವಿ | ೫,೨೫೦ | ಕೊಣ್ಣೂರು | ೩,೦೦೦ |
| ಗದಗ | ೫೨,೦೦೦ | ಯಕ್ಕುಂಡಿ | ೩,೦೦೦ |
| ಧಾರವಾಡ-ಸರದೇಶಗತ | ೧,೦೫೦ | ಅಸುಂಡಿ | ೪,೦೦೦ |
| ಲಕ್ಷ್ಮೇಶ್ವರ | ೭೦,೦೦೦ | ಹೂಲೀ (ಕೋಟೆ) | ೩,೦೦೦ |
| | | ತೇಗೂರು | ೧,೨೦೦೦ |
| **ತೋರಗಲ್ ಸರಕಾರ** | | **(ಅಜಮನಗರ ಸರಕಾರ)** | |
| ಮುಗಳಗುಂದ | ೩೪,೮೦೦ | ಅಜಮನಗರ (ಬೆಳಗಾವಿ) | ೩೩,೦೦೦ |

| | | | |
|---|---|---|---|
| ಕಸಬಾ ಬ್ಯಾಹಟ್ಟಿ | ೨೮,೦೦೦ | ಪಾದಶಹಾಪುರ(ಪಾಚ್ಛಾಪುರ) | ೨೫,೦೦೦ |
| ಕಸಬಾ ದೇವರ ಹುಬ್ಬಳ್ಳಿ | ೨೮,೦೦೦ | ಗೋಕಾಕ | ೪೦,೦೦೦ |
| ಬಾಗಿಲಕೋಟೆ-ಬೀಳಗಿ | ೧,೫೪,೦೦೦ | ಸಂಪಗಾವಿ | ೪೩,೦೦೦ |
| ಉಪ್ಪಿನ ಬೆಟಗೇರಿ | ೨೨,೫೦೦೦ | ಕೋಳಿವಾಡ | ೮,೭೫೦ |
| ಮತ್ತೀಘಟ್ಟ ಕಟಗೇರಿ | ೯,೪೦೦ | | |
| | | ಒಟ್ಟು ರೂ. | ೮,೨೩,೯೩೦ |

(ನವಾಬನು ಪೇಶ್ವೆಯವರಿಗೆ ಎಂಟು ಲಕ್ಷ ಇಪ್ಪತ್ಮೂರು ಸಾವಿರದ ಒಂಭೈನೂರಾ ಮೂವತ್ತು ರೂಪಾಯಿ ಉತ್ಪನ್ನದ ಪ್ರದೇಶಗಳನ್ನು ಬಿಟ್ಟುಕೊಟ್ಟನು)

ಬ) ನವಾಬ ಅಬ್ದುಲ್ ಹಕೀಮಖಾನನು ಪೇಶ್ವೆಯವರಿಗೆ ಹನ್ನೊಂದು ಲಕ್ಷ ರೂಪಾಯಿ ಖಂಡಣಿಯನ್ನು ಒಪ್ಪಿಸಬೇಕು. ಈ ಹಣದಲ್ಲಿಯ ಮೂರು ಲಕ್ಷ ಹತ್ತು ಸಾವಿರ ರೂಪಾಯಿಗಳನ್ನು ತಕ್ಷಣದಲ್ಲಿಯೇ ನಗದು ಅಥವಾ ಬೆಲೆಬಾಳುವ ವಸ್ತ್ರಾಭರಣ ರೂಪದಲ್ಲಿ ನೀಡಬೇಕು. ಉಳಿದ ಏಳು ಲಕ್ಷ ತೊಂಬತ್ತು ಸಾವಿರ ರೂಪಾಯಿಗಳಲ್ಲಿ ನಾಲ್ಕು ಲಕ್ಷ ತೊಂಬತ್ತು ಸಾವಿರ ರೂಪಾಯಿಗಳನ್ನು ಇಂದಿನಿಂದ ಹದಿನೈದು ದಿವಸಗಳ ಅವಧಿಯಲ್ಲಿ ಕೊಡಬೇಕು. ಶೇಷಭಾಗವಾದ ಮೂರು ಲಕ್ಷ ರೂಪಾಯಿಗಳನ್ನು ಆರು ತಿಂಗಳ ಅವಧಿಯಲ್ಲಿ ಮುಟ್ಟಿಸಬೇಕು. ಅಲ್ಲಿಯವರೆಗೆ ನವಾಬನು ಪೇಶ್ವೆಯವರಿಗೆ ಬಂಕಾಪುರ ಕೋಟೆಯನ್ನು ಒತ್ತೆ ಹಾಕಬೇಕು. ಒಂದು ಪಕ್ಷ ಹಕೀಮಖಾನ ನವಾಬನಿಗೆ ಈ ಒತ್ತೆಯ ಹಣವನ್ನು ಈ ಅವಧಿಯಲ್ಲಿ ಕೊಡುವುದಾಗದಿದ್ದರೆ, ಕೋಟೆಯು ಮರಾಠರಿಗೆ ದಕ್ಕಬೇಕು. ತಕ್ಷಣ, ಬಂಕಾಪುರ ಕೋಟೆಯನ್ನು ಮರಾಠ ಸರದಾರ ಮಲ್ಹಾರರಾವ್ ಹೋಳಕರನ ಸ್ವಾಧೀನಕ್ಕೆ ಬಿಟ್ಟುಕೊಡಬೇಕು.

ಕ) ರಾಯರ ಹುಬ್ಬಳ್ಳಿ ಕೋಟೆ, ಕೇರೂರು ಪರಗಣಾ ಮತ್ತು ಕೋಟೆ ಮತ್ತು ಕಸಬಾ ಬೆಳಗಾವಗಳ ಉತ್ಪನ್ನವು ರೂ.೪೫,೨೧೨-೪-೨ಪೈ ಇದ್ದು ಅವುಗಳನ್ನು ಪೇಶ್ವೆಯವರಿಗೆ ಬಿಟ್ಟು ಕೊಡಬೇಕು.

ಭಾಗ-೨

ಅ) ಮೇಲಿನ ಪ್ರದೇಶಗಳನ್ನು ಪೇಶ್ವೆಯವರಿಗೆ ಬಿಟ್ಟುಕೊಟ್ಟ ಮೇಲೆ ಸವಣೂರ ನವಾಬ ಅಬ್ದುಲ್ ಹಕೀಮಖಾನನ ಬಳಿ ಉಳಿದ ಕಸಬಾ, ಪರಗಣಾ, ಮಹಲುಗಳು, ಊರುಗಳು ಮತ್ತು ಅವುಗಳ ವಾರ್ಷಿಕ ಉತ್ಪನ್ನಗಳು ಹೀಗಿವೆ:

| ಪ್ರದೇಶಗಳ ವಿವರ | ವಾರ್ಷಿಕ ಉತ್ಪನ್ನ |
|---|---|
| ೦೧. ಸಮತ್ ಕಾರಡಗಿ | ೨,೪೫,೦೦೦ |
| ೦೨. ಸಮತ್ ನಿಡಸಂಗಿ | ೧೫,೭೫೦ |
| ೦೩. ಪರಗಣಾ ಹಾನಗಲ್ಲ | ೫೯,೫೦೦ |
| ೦೪. ಹಿಸ್ಸಾರ ಮಾಸೂರು (ಕೋಟೆ) | ೨೧,೦೦೦ |
| ೦೫. ಸಮತ್ ಚಿಕ್ಕೇರೂರು | ೧೫,೭೫೦ |
| ೦೬. ಸಮತ್ ಕಿತ್ತೂರ | ೧೪,೦೦೦ |
| ೦೭. ಸಮತ್ ತಿಳವಳ್ಳಿ | ೨೧,೦೦೦ |
| ೦೮. ಪರಗಣಾ ರಾಣೆಬೆನ್ನೂರು | ೫೬,೦೦೦ |
| ೦೯. ಪರಗಣಾ ಕಾಗಿನೆಲ್ಲಿ | ೬೩,೦೦೦ |
| ೧೦.ನರೇಗಲ್ಲ ಠಾಣಾ ಅಡೂರು | ೬೨,೦೦೦ |
| | ಒಟ್ಟು ೫,೭೩,೪೪೫ |
| ೧೧. ಗುತ್ತಲ | ೪೨,೯೦೪ |
| ೧೨. ಶಿಗ್ಗಾಂವಿ | ೨೧,೦೦೦ |
| ೧೩. ಪೇಠಾ ಹಾವೇರಿ | ೨೧,೦೦೦ |
| ೧೪. ಕಸಬಾ ಬಂಕಾಪುರ | ೧೧,೯೦೦ |
| ೧೫. ಕುಪ್ಪೇಲೂರು | ೧೨,೫೦೦ |
| ೧೬. ತಡಕೋಡ | ೨೧,೦೦೦ |
| ೧೭. ಹಂಸಭಾವಿ | ೩,೩೯೮ |
| ೧೮. ಐರಣಿ | ೧೧,೨೦೦ |
| ೧೯. ಹಲಗೇರಿ | ೭,೭೫೮ |
| ೨೦. ನೇಸ್ವಿ | ೧,೪೧೦ |
| ೨೧. ಕುಂಕೂರು | ೧,೩೩೭ |

| | |
|---|---|
| ೨೨. ಹಿರೇಗುಂಡೂರು | ೪,೪೪೦ |
| ೨೩. ಗೋಪನಕೊಪ್ಪ (ರಾಯರ ಹುಬ್ಬಳ್ಳಿ) | ೮೭೫ |
| ೨೪. ಪರಗಣಾ ಅಣ್ಣೀಗೇರಿ | ೪೫,೦೦೦ |
| ೨೫. ಪರಸಗಡ ಕೋಟೆ ಹಾಗೂ ಹಳ್ಳಿಗಳು | ೬,೬೫೦ |
| ೨೬. ಪರಗಣಾ ಮೊರಬ | ೨,೧೦೦ |
| ೨೭. ಸುಳ್ಳ | ೪,೨೦೦ |
| ೨೮. ಕಸಬಾ ಅಂಕಲಿ | ೭,೦೦೦ |
| ೨೯. ಹಂಚಿನಾಳ (ಹಳ್ಳಿ) | ೫,೨೫೦ |
| ೩೦. ಕಲ್ಲೂರು | ೮೭೫ |
| ೩೧. ನಾಗನೂರು | ೮೭೫ |
| ೩೨. ಪರಗಣಾ ದೊಡ್ಡವಾಡ | ೧,೨೦೦ |
| ೩೩. ಸೊಂದಾ | ೨೩,೦೦೦ |
| | **ಒಟ್ಟು ರೂ.೮,೩೦,೦೬೮** |

ಹೀಗೆ ಎಂಟು ಲಕ್ಷ ಮೂವತ್ತು ಸಾವಿರ ಅರವತ್ತೆಂಟು ರೂಪಾಯಿ ಉತ್ಪನ್ನದ ಪ್ರದೇಶಗಳು ಹಕೀಮಖಾನನಿಗೆ ಉಳಿದವು.

ಬ) ರಟ್ಟೀಹಳ್ಳಿ ಜಹಗೀರದಾರನ ೧೯೦೦೦ ರೂಪಾಯಿ ಸಂಬಳವು ಅವನಿಗೆ ತಲುಪಬೇಕು.

ಕ) ಬಂಕಾಪುರ ಜಹಗೀರದಾರನಿಗೆ ಗೊತ್ತುಪಡಿಸಿದ ೧೧೦೦೦ ರೂಪಾಯಿಗಳನ್ನು ಲೆಕ್ಕದಲ್ಲಿ ಹಿಡಿಯುವಂತಿಲ್ಲ.

ಡ) ೨೫೦೦೦ ರೂಪಾಯಿ ಉತ್ಪನ್ನ ಬರುವ ಐದು ಹಳ್ಳಿಗಳನ್ನು ಅಜೀಜಮೀಯಾ ಮತ್ತು ಅಹಮ್ಮದಖಾನ ವಲ್ಲದ ಅಲೀಮಿಯಾ ಅವರಿಗೆ ಬಿಟ್ಟುಕೊಡಬೇಕು.

ಇ) ನಿಜಾಮ ಸಲಾಬತ ಜಂಗನು ಹಕೀಮಖಾನನ ರಾಜ್ಯವನ್ನು ರಕ್ಷಿಸುವನೆಂದು ಪೇಶ್ವೆಯವರು ಅಶ್ವಾಸನೆಯನ್ನಿತ್ತಿದ್ದಾರೆ.

ಫ) ನವಾಬ ಹಕೀಮಖಾನನ ರಾಜ್ಯವನ್ನು ಪೇಶ್ವೆಯವರು ತೊಂದರೆಗೀಡು ಮಾಡುವುದಿಲ್ಲ

ಮತ್ತು ಪ್ರತಿ ವರುಷವೂ ಖಂಡಣಿ ಕೊಡಬೇಕೆಂದು ಪೇಶ್ವೆಯವರು ಹಕೀಮಖಾನನನ್ನು ಪೀಡಿಸುವಂತಿಲ್ಲ.

ಪರಸ್ಪರರಿಗೆ ಬಂದ ಪ್ರದೇಶಗಳಲ್ಲಿ ಆಕಸ್ಮಿಕವಾಗಿ ಅನುಚಿತ ಘಟನೆಗಳು ನಡದರೆ, ಅದಕ್ಕಾಗಿ ವಿರಸವು ತಲೆ ಎತ್ತದಂತೆ ಶಾಂತರಾಗಿರಬೇಕು.

ಅಜೀಜಮಿಯಾನ ಜಹಗೀರು(ಉತ್ಪನ್ನ:ರೂ.೨೦,೮೦೦), ಅಹಮ್ಮದಖಾನನ ಜಹಗೀರು (ಉತ್ಪನ್ನ: ರೂ.೫೦೦೦) ಮತ್ತು ಅಲೀಖಾನನ ಜಹಗೀರು (ಉತ್ಪನ್ನ ರೂ.೨೫,೮೦೦) ಇದ್ದ ಸ್ಥಿತಿಯಲ್ಲಿಯೇ ಇರಬೇಕು.

ಬಂಕಾಪುರ ಕಿಲ್ಲೇದಾರನು ಪಡೆಯುತ್ತಿದ್ದ ರೂ.೧೧,೦೦೦ ಸಂಬಳವನ್ನು ಈಗ ಇದ್ದ ಹಾಗೆಯೇ ಮುಂದುವರೆಸಬೇಕು.

ಉಭಯ ಪಕ್ಷಗಳು ಸ್ನೇಹದಿಂದ ಇದ್ದು, ಪರಸ್ಪರರಲ್ಲಿ ಭಿನ್ನಾಭಿಪ್ರಾಯಗಳು ತಲೆ ಎತ್ತಿದರೆ ಮಾತುಕತೆಗಳನ್ನು ನಡೆಸಿ ಪರಿಹಾರವನ್ನು ಕಂಡುಕೊಳ್ಳಬೇಕು.

ಈ ಒಪ್ಪಂದಕ್ಕೆ ಬಾಳಾಜೀ ಬಾಜೀರಾವ್ ಉರ್ಫ್ ನಾನಾಸಾಹೇಬ ಪೇಶ್ವೆ ಮತ್ತು ಅಬ್ದುಲ್ ಹಕೀಮಖಾನ ನವಾಬನು ಹಸ್ತಾಕ್ಷರಗಳನ್ನು ಹಾಕಿದ ಮೇಲೆ, ನಾನಾಸಾಹೇಬನು ತನ್ನ ಆಪ್ತರು, ಹಿತೈಷಿಗಳು ಹಾಗೂ ಸರದಾರರೊಂದಿಗೆ ಅಬ್ದುಲ್ ಹಕೀಮ್‌ಖಾನ್ ನವಾಬನ ಅರಮನೆಗೆ ಭೇಟಿ ಕೊಡುವ ಅತುರತೆಯನ್ನು ಪ್ರದರ್ಶಿಸಿದನು.

ನಾನಾಸಾಹೇಬನ ಭೇಟಿಗಾಗಿ ಎಲ್ಲ ಸಿದ್ಧತೆಗಳು ನಡೆದವು. ನಾನಾಸಾಹೇಬನು ರಾತ್ರಿ ಹಕೀಮಖಾನನ ಅರಮನೆಗೆ ಬಂದಾಗ ರಾತ್ರಿಯಾಗಿತ್ತು. ನವಾಬನು ಎರಡು ಕೋಶಗಳಷ್ಟು ಉದ್ದ (ನಾಲ್ಕು ಮೈಲುಗಳು) ದಿವಟಿಗೆಗಳನ್ನು ಹಚ್ಚಿಸಿ, ರಾತ್ರಿ ಹಗಲು ಕಾಣುವಂತೆ ಮಾಡಿದನು. ನಾನಾಸಾಹೇಬ ಪೇಶ್ವೆ ಅರಮನೆಯ ಮುಂದೆ ಬಂದೊಡನೆ ನವಾಬ ಸಾಹೇಬನು ಮುಂದೆ ಬಂದು ಸ್ವಾಗತಿಸಿದನು. ನಂತರ ನವಾಬ ಸಾಹೇಬನು ಪೇಶ್ವೆ ನಾನಾಸಾಹೇಬನನ್ನು ಕರೆದು ಗಾದೆಯ ಮೇಲೆ ಕೂಡಿಸಿದನು. ಉಭಯತ್ರರೂ ಸಮಾನ ಎತ್ತರದ ಮೇಲೆ ಒಂದೇ ಗಾದೆಯಲ್ಲಿ ಕುಳಿತು ಕುಶಲ ಪ್ರಶ್ನೆಗಳನ್ನು ಮಾಡಿದರು. ಇದರಿಂದ ಇಬ್ಬರ ಮಧ್ಯದ ದ್ವೇಷದ ಗೋಡೆ ತಾನೇತಾನಾಗಿ ಕಳಚಿ ಬಿದ್ದಿತು.

ಬಾಳಾಜಿ ಬಾಜೀರಾವ ಉರ್ಫ್ ನಾನಾಸಾಹೇಬ ಪೇಶ್ವೆ ನಂತರ ನವಾಬನ ಅರಮನೆಗೆ ಬಂದಾಗ ನವಾಬ ಹಕೀಮಖಾನನು ತಾನೇ ಎದ್ದು ಹೋಗಿ ಕೈಹಿಡಿದು ಒಳಗೆ ಕರೆದುಕೊಂಡು ಬಂದನು. ಇಬ್ಬರ ಮಧ್ಯೆ ಅರ್ಥಪೂರ್ಣ ಚರ್ಚೆ ನಡೆಯಿತು. ಇವರಿಬ್ಬರೂ ಪರಮ ಸ್ನೇಹಿತರಾದರು.

ನಾನಾಸಾಹೇಬನು ಹಕೀಮಖಾನ ನವಾಬನ ನಿರೂಪವನ್ನು ಪಡೆದು ಹೋಗುವಾಗ ನವಾಬನಿಗೆ ಹದಿನೈದು ಅಲಂಕೃತ ಆನೆಗಳನ್ನು ಕೊಟ್ಟನು. ಅವುಗಳ ಮೇಲೆ ಬೆಳ್ಳಿ ಜರದ ಕಲಾಬತ್ತಿನ ಮಖಮಲ ಝೂಲಗಳನ್ನು ಹಾಕಿಸಿದ್ದನು. ಅವುಗಳ ಕೊರಳಿಗೆ ಬೆಳ್ಳಿ ರೂಪಾಯಿಗಳ ಕಂಠಹಾರವನ್ನು ಮಾಡಿಸಿ ಹಾಕಲಾಗಿತ್ತು. ಆನೆಗಳೊಂದಿಗೆ ಅಂಕುಶಗಳೂ ಇದ್ದವು. ನವಾಬ ಹಕೀಮಖಾನನು ಪ್ರತಿಯಾಗಿ ಏಳು ಆನೆ ಮತ್ತು ಅವುಗಳಿಗೆ ವಸ್ತ್ರಾಭರಣಗಳನ್ನೂ ಕೊಟ್ಟನು. ಉಭಯ ಪಕ್ಷದವರೂ ಪ್ರತಿ ಪಕ್ಷದ ಸೇವಕರಿಗೆ ಪಾತ್ರೆ, ವಸ್ತ್ರಾಭರಣಗಳನ್ನು ದಯಪಾಲಿಸಿದರು.

ಬಾಳಾಜಿ ಬಾಜೀರಾಯನು ಸವಣೂರಿಗೆ ಯುದ್ಧಕ್ಕೆ ಬರುವಾಗ ಮಹಾರಾಣಿ ಗೋಪಿಕಾಬಾಯಿಯನ್ನು ಕರೆತಂದಿದ್ದನು. ಯುದ್ಧವು ದೀರ್ಘಕಾಲ ನಡೆದಿದ್ದರಿಂದ ಎಳೆ ಬಸಿರಿದ್ದ ಗೋಪಿಕಾಬಾಯಿ ತುಂಬು ಬಸುರಿಯಾದಳು. ಅವಳನ್ನು ಬಾಜೀರಾಯನು ಪ್ರವಾಸಕ್ಕೆ ಕರೆದುಕೊಂಡು ಹೋಗುವಂತಿರಲಿಲ್ಲ. ಅವಳ ಪ್ರಸವ ಎಲ್ಲಿ ಆಗಬೇಕು ಅಂದಾಗ, ಅಬ್ದುಲ್ ಹಕೀಮಖಾನನು, ಗೋಪಿಕಾಬಾಯಿ ತನ್ನ ತಂಗಿಯಾಗಿದ್ದರಿಂದ ಅಣ್ಣನ ತವರಿನಲ್ಲಿಯೇ ಆಗಬೇಕು ಎಂದನು.

ಸರಿ, ಗೋಪಿಕಾಬಾಯಿ ಫೆಬ್ರವರಿ ೧೬, ೧೭೪೫ರಂದು ಗಂಡು ಮಗುವಿಗೆ ಜನ್ಮ ನೀಡಿದ್ದಳು. ಇವನೇ ಮಾಧವರಾವ್. (ಟೀಪು: ಮಾಧವರಾವ ಪೇಶ್ವೆನ ಕಾಲ ೧೭೬೧-೧೭೭೨. ಅವನು ೧೭ ವರುಷದವನಿರುವಾಗ ಪೇಶ್ವೆ ಗಾದೆಯನ್ನು ಏರಿದನು. ಮರಾಠಾ ಇತಿಹಾಸದಲ್ಲಿ ಅವನು ಹುಟ್ಟಿದ್ದನು ೧೬-೦೨-೧೯೪೫ ಎಂದಿದೆ. ಹಾಗಿದ್ದರೆ ಅಬ್ದುಲ್ ಹಕೀಮಖಾನನು ಆಗಿನ್ನೂ ಪಟ್ಟಕ್ಕೆ ಬಂದಿರುವುದಿಲ್ಲ. ಹತ್ತು ವರುಷಗಳು ಆಚೀಚೆ ಆಗುತ್ತದೆ. ಪ್ರಾಯಶಃ ಅಬ್ದುಲ್ ಹಕೀಮಖಾನನೇ ೧೭೪೪ರಲ್ಲಿ ಪಟ್ಟಕ್ಕೆ ಬಂದಿರಬಹುದು.) ಸವಣೂರಿನಲ್ಲಿ ಗಂಡು ಮಗುವಿಗೆ ಜನ್ಮ ನೀಡಿದಳು. ಅವನೇ ಪೇಶ್ವೆಯವರಲ್ಲಿ ಅತ್ಯಂತ ಶ್ರೇಷ್ಠ ಪೇಶ್ವೆ ಅನಿಸಿದನು. ಹನ್ನೊಂದು ವರುಷ ಆಳಿ, ಇಪ್ಪತ್ತೇಳರ ಅಲ್ಪಾಯುಷ್ಯದಲ್ಲಿ 'ನ ಭೂತೋ ನ ಭವಿಷ್ಯತಿ' ಅನ್ನುವಂತೆ ಆಳಿ ಕೀರ್ತಿ ಪಡೆದನು. ಮರಾಠರಲ್ಲಿ ಮಾಧವರಾವ ಪೇಶ್ವೆ ಶ್ರೇಷ್ಠ ಆಡಳಿತಗಾರನೆಂದೆನಿಸಿಕೊಂಡನು.

ಬಾಣಂತಿತನ ಮುಗಿದೊಡನೆ ಬಾಣಂತಿ ಮತ್ತು ಕೂಸನ್ನು ಪಲ್ಲಕ್ಕಿಯಲ್ಲಿ ಕೂಡಿಸಿ, ಸೈನ್ಯವನ್ನು ತೆಗೆದುಕೊಂಡು ಸ್ವತಃ ನವಾಬ ಹಕೀಮಖಾನನೇ ಪುಣೆಯವರೆಗೆ ಹೋಗಿ ಹೆದ್ದಿಬ್ಬಣದ ವೈಭವದಿಂದ ಗೋಪಿಕಾಬಾಯಿಯನ್ನು ಕಳಿಸಿಬಂದನು. ಇದರಿಂದ ಬಾಳಾಜಿ ಬಾಜೀರಾವನು ಸಂಪ್ರೀತನಾದನಲ್ಲದೆ, ಮಾಧವರಾವನು ಅಬ್ದುಲ್ ಹಕೀಮಖಾನ ನವಾಬನನ್ನು ಸೋದರಮಾವನೆಂದೇ ಸಂಬೋಧಿಸುತ್ತಿದ್ದನು. ಪರಸ್ಪರರಲ್ಲಿ ಕೊನೆಯವರೆಗೂ ಪ್ರೀತಿ ಉಳಿಯಿತು. ಆದರೆ, ಮಾಧವರಾವ ಸವಣೂರಲ್ಲಿ ಹುಟ್ಟಿಲ್ಲವೆಂದು ಹೇಳುವವರು ಇರುವರು.

## ಹಕೀಮಖಾನನು ದರ್ಗಾಕ್ಕೆ ನೀಡಿದ ಭೇಟಿ

ಈ ಒಪ್ಪಂದವಾದ ಕೆಲವೇ ದಿವಸಗಳಲ್ಲಿ ಮುಸಲ್ಮಾನರಿಗೆ ಅತ್ಯಂತ ಪವಿತ್ರ ಸ್ಥಳವಾದ ಕಲಬುರ್ಗಿಯ ಹಜರತ್ ಖ್ವಾಜಾ ಮಹಮ್ಮದ ಹುಸೇನ ಬಂದೇನವಾಜ ದರ್ಗಾಕ್ಕೆ ಪರಿವಾರ ಸಮೇತ ಹೋದನು. ಧರ್ಮನಿಷ್ಠನಾಗಿದ್ದ ಅಬ್ದುಲ್ ಹಕೀಮಖಾನನು ಪರಿವಾರ ಸಮೇತ ಹೋದನು. ಹೋಗುವಾಗ ಹಾದಿಯಲ್ಲಿ ಹತ್ತುವ ಸಂತರ, ಮಹಾತ್ಮರ ಗೋರಿಗಳನ್ನು ಸಂದರ್ಶಿಸುತ್ತ ಕಲಬುರ್ಗಿಯನ್ನು ತಲುಪಿದನು. ಸೈನ್ಯದ ಒಂದು ತುಕಡಿ ಹಕೀಮಖಾನನ ಜೊತೆ ಇದ್ದರೆ, ಇನ್ನೊಂದು ಪರಿವಾರದವರನ್ನು ರಕ್ಷಿಸುತ್ತ ನಡೆದಿತ್ತು. ಹಕೀಮಖಾನ ನವಾಬನು ದರ್ಗಾಕ್ಕೆ ಭೇಟಿಯಿತ್ತಾಗ ಶುದ್ಧ ಬೆಳ್ಳಿ ಜರದಲ್ಲಿ ನೇಯ್ದ, ಸೂಕ್ಷ್ಮ ನಕ್ಷೆಯ ಶಾಮೀಯಾನವನ್ನು ಅರ್ಪಿಸಿದನು. ದರ್ಗಾದ ಮಹಾದ್ವಾರಕ್ಕೆ ಅಪಾರ ಹಣವನ್ನು ವ್ಯಯಿಸಿ, ಬೆಳ್ಳಿಯ ಮಹಾದ್ವಾರವನ್ನು ಮಾಡಿಸಿಕೊಟ್ಟನು. ಕಲಬುರ್ಗಿಯಲ್ಲಿ ಇದ್ದಷ್ಟು ದಿವಸ ಬಡವರಿಗೆ ಊಟ ಹಾಕಿಸಿ ಕೈತುಂಬಾ ದಾನವನ್ನಿತ್ತನು.

## ಹೈದರ ಅಲಿ ಸುಲ್ತಾನನೊಡನೆ ವೈರತ್ವ

೧೭೬೧ರ ಪಾಣೀಪತ್ ಕದನದಲ್ಲಿ ಮರಾಠರು ಸೋತಿದ್ದರಿಂದ ದುರ್ಬಲರಾದರು. ಇದರಿಂದ ಪೇಶ್ವೆಯವರು ದಕ್ಷಿಣ ಮಹಾರಾಷ್ಟ್ರದತ್ತ ಅಷ್ಟು ಲಕ್ಷ್ಯವನ್ನೀಯಲಿಲ್ಲ. ೧೭೬೩ರಲ್ಲಿ ಹೈದರ ಅಲಿ ಮೈಸೂರು ಅರಸರನ್ನು ಸರಿಸಿ, ತಾನೇ ಸುಲ್ತಾನನಾದ ಮೇಲೆ ಅವನಿಗೆ ತನ್ನ ರಾಜ್ಯವನ್ನು ವಿಸ್ತರಿಸಬೇಕೆನಿಸಿತು. ಅವನ ಕಣ್ಣು ಸವಣೂರು, ಕಡಪಾ, ಕರ್ನೂಲ ನವಾಬರ ಮೇಲಿತ್ತು. ಕಾರಣ, ಸವಣೂರನ್ನು ಗೆದ್ದರೆ, ತನಗೆ ಈ ಮೂವರು ಅಫಘಾನೀ ಪಠಾಣರ ಸಹಾಯವು ದೊರೆಯುವುದೆಂದು ಅವನ ಲೆಕ್ಕವಿತ್ತು.

ಹೈದರನು ಸೈನ್ಯದೊಂದಿಗೆ ಮೊದಲು ಬಿದನೂರಿನತ್ತ ಹೊರಟನು. ಅಲ್ಲಿಯ ರಾಣಿ ಚೆನ್ನಮ್ಮನಿಗೆ ಹೈದರನನ್ನು ತಾನೊಬ್ಬಳೇ ಎದುರಿಸುವುದು ಸಾಧ್ಯವಿಲ್ಲವೆಂದು, ಸವಣೂರು ನವಾಬ ಹಕೀಮಖಾನನ ಸಹಾಯವನ್ನು ಯಾಚಿಸಿದಳು. ತಕ್ಷಣವೇ ನವಾಬನು ತನ್ನ ಸೈನ್ಯವನ್ನು ತೆಗೆದುಕೊಂಡು ಹೋಗಿ, ಚಿಕ್ಕಮುಳಗುಂದದ ಬಳಿ ನಿಲ್ಲಿಸಿದನು. ಹೈದರ ಅಲಿ ಬಿದನೂರಿಗೆ ಬಂದಾಗ, ಸವಣೂರು ನವಾಬನು ಅಲ್ಲಿಗೆ ಬರಬಹುದೆಂದು ಅವನು ಎಣಿಸಿರಲಿಲ್ಲ. ಹಕೀಮಖಾನ ಬಂದುದನ್ನು ಕೇಳಿ, ಹೈದರ ಅಲಿಯ ಹುಬ್ಬುಗಳು ಮೇಲೆ ಏರಿದವು. ಅವನು ಹಕೀಮಖಾನಿಗೆ 'ನೀನು ಇಲ್ಲಿಗೇಕೆ ಬಂದಿರುವಿ? ನಮ್ಮ ಹಳೆಯ ಕರಾರಿನಂತೆ ನಮ್ಮ ನಮ್ಮ ಶತ್ರುಗಳನ್ನು ನಾವೇ ಎದುರಿಸಬೇಕೆಂದು ಒಪ್ಪಿದ್ದು ನಿನಗೆ ನೆನಪಿಲ್ಲವೇ? ಎಂದು ಕೇಳಿದನು. ಹೈದರನ ಮಾತು ಕೇಳಿ ತಾನು ರಾಣಿ ಚೆನ್ನಮ್ಮನ ಸಹಾಯಕ್ಕೆ ಬಂದದ್ದು, ಹಕೀಮಖಾನನಿಗೆ ಅನುಚಿತವೆನಿಸಿತು. ಕೂಡಲೇ ಅವನು ತನ್ನ ಸರದಾರ ಅಬ್ದುಲ್ ಖಾದರಖಾನನನ್ನು ಕಳಿಸಿ, ಹೈದರನ ಜೊತೆ ಒಪ್ಪಂದ ಮಾಡಿಕೊಂಡು

ಅವನಿಗೆ ಒಂದು ಸರಪಳಿ ಸಹಿತ ಆನೆ ಮತ್ತು ಐವತ್ತು ಸಾವಿರ ರೂಪಾಯಿ ಹಣವನ್ನು ಕೊಡುವುದಾಗಿ ಒಪ್ಪಿದನು. ಅಬ್ದುಲ್ ಹಕೀಮಖಾನನು ಹೈದರನ ಜೊತೆ ಯದ್ಧ ಮಾಡದೆ, ಒಪ್ಪಂದಕ್ಕೆ ಬಂದದ್ದು ಸವಣೂರಿನವರಿಗೆ ಒಂದು ರೀತಿ ಅವಮಾನವೆನಿಸಿತು. ಈ ಅವಮಾನಕರ ಒಪ್ಪಂದವನ್ನು ಕೇಳಿದ, ನವಾಬನ ಸಂಬಂಧಿಕನಾದ ಮೊರಬದ ಜಹಗೀರದಾರ ಅಬ್ದುಲ್ ಅಜೀಜಖಾನನು "ಹೈದರ ಅಲಿಯ ನಸೀಬವು ಬಲವತ್ತರವಾಗಿದೆಯೆಂದು ಅವನು ಅಧಿಕಾರಕ್ಕೇರಿದ್ದಾನೆ. ಅವನೊಬ್ಬ ಜಗಳಗಂಟ. ಇಂತಹವನ ಜೊತೆ ಒಪ್ಪಂದ ಮಾಡಿಕೊಂಡರೆ ನಮ್ಮ ಸಮಾನಸ್ಕಂದರದಲ್ಲಿ ನಾಚಿಕೆಯಾಗುವುದು. ಇದು ಸವಣೂರು ರಾಜ್ಯದ ಧವಳ ಕೀರ್ತಿಗೆ ಕಪ್ಪನ್ನು ಬಳಿದಂತಾಗುವುದು. ಅದಕ್ಕೆ ಈ ಒಪ್ಪಂದಕ್ಕೆ ಅನುಮತಿಯನ್ನೀಯಬಾರದು. ಒಂದು ಪಕ್ಷ ಒಪ್ಪಂದವಾಗಿದ್ದರೆ ಇದು ಅತ್ಯಂತ ಅವಮಾನಕರ ವಿಷಯ" ಎಂದು ಹಕೀಮಖಾನನನ್ನು ಹೀಗಳೆದನು.

ಮೊರಬ ಜಹಗೀರದಾರನ ಮಾತುಗಳು ಹಕೀಮಖಾನನ ಮರ್ಮಕ್ಕೆ ತಾಕಿದ್ದರಿಂದ ಅವನು ಯುದ್ಧ ಮಾಡಲು ಪುನಃ ಸಿದ್ಧನಾದನು. ಅಬ್ದುಲ್ ಹಕೀಮಖಾನನು ಅಬ್ದುಲ್ ಅಜೀಜಖಾನನ ಸಹಾಯದಿಂದ ಹೈದರ ಅಲಿಯ ವಿರುದ್ಧ ಕತ್ತಿಯನ್ನೆತ್ತಿದ್ದನು. ಯುದ್ಧವು ಭರದಿಂದ ಸಾಗಿದಾಗ, ಅಬ್ದುಲ್ ಹಕೀಮಖಾನನು ಸೈನಿಕರ ಮಧ್ಯದಲ್ಲಿದ್ದ ಆನೆಯ ಮೇಲಿನ ಅಂಬಾರಿಯಲ್ಲಿ ಕುಳಿತು ತನ್ನ ಸೈನಿಕರಿಗೆ ಪ್ರೋತ್ಸಾಹವನ್ನೀಯುತ್ತಿದ್ದನು. ಹಕೀಮಖಾನನ ಬಳಿ ನಾಲ್ಕು ಸಾವಿರ ಕಾಲ್ದಳವಿದ್ದರೂ ಯಾರಿಗೂ ಸರಿಯಾದ ತರಬೇತಿ ಇರದ್ದರಿಂದ ಅವರಿಗೆ ಹೈದರನ ಸೈನ್ಯದೊಂದಿಗೆ ಹೋರಾಡುವುದು ದುಸ್ಸಹವೆನಿಸಿತು. ಸವಣೂರ ಸೈನ್ಯವು ತತ್ತರಿಸಿ, ಸುರಕ್ಷಿತ ಸ್ಥಳಕ್ಕೆ ಓಡಿಹೋಗುತ್ತಿತು. ಆಗ ಚಿಕ್ಕದಾದ ಮೂರು ನೂರು ಆಶ್ವ ಪಡೆಯವರು ನವಾಬ ಹಕೀಮಖಾನನನ್ನು ರಕ್ಷಿಸಿಕೊಂಡು ಸವಣೂರಿಗೆ ಕರೆತಂದರು.

ಸವಣೂರು ಸೈನ್ಯವು ಪಲಾಯನವಾದಾಗ, ಹೈದರ ಅಲಿಯು ತನ್ನ ಸೈನ್ಯದೊಂದಿಗೆ ಸವಣೂರಿನತ್ತ ದಾಳಿ ಮಾಡಲು ನಡೆದನು. ಹೈದರನ ಸೈನ್ಯವು ಸವಣೂರಿಂದ ಐದು ಮೈಲುಗಳಂತರದ ಮೇಲಿರುವ ಬಂಕಾಪುರಕ್ಕೆ ಬಂದಿತು. ಹೈದರನು ಅಬ್ದುಲ್ ಹಕೀಮಖಾನ ನವಾಬನಿಗೆ ತಾನು ಸವಣೂರ ಮೇಲೆ ದಾಳಿ ಮಾಡಲು ಬಂದಿರದೇ ಹಕೀಮಖಾನನನ್ನು ಭೇಟಿಯಾಗಿ ಹೋಗಬೇಕೆಂದು ಬಂದಿರುವುದಾಗಿ ಹೇಳಿಕಳಿಸಿದನು. ಇದು ಹಕೀಮಖಾನನಿಗೆ ಹೈದರನ ನಾಟಕ ಇದ್ದಿರಬೇಕೆಂದೆನಿಸಿತು. ಆದರೆ, ಅವನಾಗಿಯೇ ಭೇಟಿಗೆ ಬಂದಿರುವುದಾಗಿ ಹೇಳಿಕಳಿಸಿದ್ದರಿಂದ, ಹಕೀಮಖಾನನು ಸೈನ್ಯದೊಂದಿಗೆ ಬಂಕಾಪುರಕ್ಕೆ ಹೋಗಿ ಹೈದರನ ಡೇರೆಯ ಸಮೀಪಕ್ಕೆ ತನ್ನ ಡೇರೆಯನ್ನು ಏರಿಸಿ ಭೇಟಿಗೆ ಹೋದನು.

ಹೈದರ ಅಲಿಯು, ನವಾಬನು ಸವಣೂರಲ್ಲಿ ಇಲ್ಲದ ದುರ್ಲಾಭ ಪಡೆಯಲು ಹಾಗೂ ಅವನನ್ನು ಮೋಸ ಮಾಡಿ ಬಂಕಾಪುರದಲ್ಲಿ ಬಂಧಿಸಬೇಕೆಂದು ತನ್ನ ನಂಬುಗೆಯ ಚಿತ್ರದುರ್ಗದ ರಾಜನಾದ ಭರಮನಾಯಕನಿಗೆ ಹೇಳಿದ್ದನು. ನಂತರ ಹೈದರನು ತನ್ನ ಸೈನ್ಯಕ್ಕೆ ಅತ್ತ ಸವಣೂರ ಮೇಲೆ ರಾತ್ರಿ ದಾಳಿ ಮಾಡಲು ರಹಸ್ಯವಾಗಿ ಆಜ್ಞಾಪಿಸಿದನು. ಭರಮನಾಯಕನು ರಾತ್ರಿ ಸವಣೂರಿಗೆ ಹೋಗಿ ಸೇರಿದನು. ರಾತ್ರಿ ಬಂಕಾಪುರದಲ್ಲಿದ್ದ ಹಕೀಮಖಾನನಿಗೆ ಇದರ ಸುಳಿವು ಹತ್ತಲಿಲ್ಲ. ಅವನ ಪಾಡಿಗೆ ಅವನಿದ್ದನು. ಅವನು ಹೈದರ ಅಲಿ ಜೊತೆ ಮಾತನಾಡುವ ನಿರೀಕ್ಷೆಯಲ್ಲಿದ್ದನು.

ಹೈದರನ ಸೈನ್ಯವು ಇತ್ತ ರಾತ್ರಿ ಸವಣೂರಿನ ನಾಗರಿಕರ ಮೇಲೆ ದಾಳಿಯನ್ನು ಮಾಡಿ, ಜನಜೀವನವನ್ನು ಅಸ್ತವ್ಯಸ್ತ ಮಾಡಿತು. ಸೈನ್ಯವು ಅಮಾಯಕ ಜನರನ್ನು ಸುಲಿದು, ಕೊಂದು, ಅಮಾನುಷ ಕೃತ್ಯವನ್ನೆಸಗಿತು. ಅಂದು ಸವಣೂರಿನಲ್ಲಿದ್ದ ಹೆಚ್ಚಿನ ಸರದಾರರು ನವಾಬನೊಂದಿಗೆ ಬಂಕಾಪುರಕ್ಕೆ ಬಂದಿದ್ದರು. ಉಳಿದ ಕೆಲವರು ಕೋಲು ಗುದಿಗೆಗಳಿಂದ ಪ್ರತಿಭಟಿಸಿದರೂ ಹೈದರನ ಸೈನಿಕರ ಮುಂದೆ ಅವರಿಗೆ ಹೋರಾಡುವದಾಗಲಿಲ್ಲ. ಇತ್ತ ಹಕೀಮಖಾನ ನವಾಬನು ಬಂಕಾಪುರದಲ್ಲಿ ಹಾಯಾಗಿ ನಿದ್ರೆ ಮಾಡುತ್ತಿದ್ದನು. ಅವನಿಗೆ ತನ್ನ ರಾಜಧಾನಿಯಲ್ಲಿ ನಡೆದ ರಾಕ್ಷಸೀ ಕೃತ್ಯದ ಕಲ್ಪನೆಯ ಗಂಧವೇ ಬಡಿದಿರಲಿಲ್ಲ.

ಭರಮನಾಯಕನು ಸವಣೂರಿನ ಸುಲಿಗೆಯನ್ನು ಮುಗಿಸಿ ಮರಳಿ ಬಂಕಾಪುರಕ್ಕೆ ಬಂದನು. ಹೈದರನ ಆಜ್ಞೆಯಂತೆ ಅವನು ಹಕೀಮಖಾನನನ್ನು ಬಂಧಿಸಲು ಅವನ ಡೇರೆಯ ಮೇಲೆ ದಾಳಿ ಮಾಡಲು ಸಿದ್ಧತೆಗಳನ್ನು ಮಾಡಿಕೊಂಡನು. ಈ ಸಿದ್ಧತೆಗಳನ್ನು ನೋಡಿದ ಹೈದರನ ಬಾಲ್ಯ ಸ್ನೇಹಿತ ಮತ್ತು ಅವನ ಸೈನ್ಯದಲ್ಲಿದ್ದ ಲಾಲ್ ಖಾನನು ಹೈದರನತ್ತ ಧಾವಿಸಿ ಹೋಗಿ "ಹೈದರ್ , ದುಡುಕಬೇಡ, ಸವಣೂರಿನ ವಿದ್ಯಮಾನಗಳನ್ನರಿತು ನೀನು ಮುಂದಿನ ನಿರ್ಣಯವನ್ನು ಕೈಗೊಳ್ಳು. ನಮ್ಮ ಸೈನ್ಯದಲ್ಲಿ ಸವಣೂರಿನ ಅನೇಕ ಅಫಘಾನಿ ಸೈನಿಕರಿದ್ದಾರೆ. ಅವರ ಕುಟುಂಬದವರು ಸವಣೂರಲ್ಲಿ ಇರುವರು. ಅವರೆಲ್ಲರೂ ಹಕೀಮಖಾನನಿಗೆ ವಿಧೇಯರಾಗಿರುವರು. ಅವರು ಒಂದೇ ಕುಲಕ್ಕೆ ಸೇರಿದವರು. ಅವರೆಲ್ಲರೂ ನಿನ್ನ ಮೇಲೆ ತಿರುಗಿ ಬೀಳಬಹುದು. ಜೋಕೆಯಿಂದ ಹೆಜ್ಜೆಯಿಡು" ಎಂದು ಎಚ್ಚರಿಸಿದನು. ಲಾಲ್ ಸಾಹೇಬನ ಮಾತುಗಳು ಹೈದರನಿಗೆ ತೂಕದ ಮಾತುಗಳೆನಿಸಿದವು. ಅವನು ತಕ್ಷಣ ಭರಮನಾಯಕನನ್ನು ಕರೆಸಿ ಸವಣೂರಲ್ಲಿ ಬಂಧಿಸಿದವರನ್ನು ಬಿಡುಗಡೆ ಮಾಡಲು ಹೇಳಿದನಲ್ಲದೆ, ನವಾಬ ಹಕೀಮಖಾನನಿಗೆ ಮರಳಿ ತನ್ನ ರಾಜಧಾನಿಗೆ ಹೋಗಲು ಅನುಮತಿಯನ್ನಿತ್ತನು. ಇಷ್ಟರಲ್ಲಿ ಸವಣೂರಲ್ಲಿ ಹಿಂದಿನ ರಾತ್ರಿ ನಡೆದ ಕಗ್ಗೊಲೆಯ ಸುದ್ದಿ ಹಕೀಮಖಾನನ ಕಿವಿಗೆ ಬಿದ್ದಿತು. ಹಕೀಮಖಾನನು ಸವಣೂರಿಗೆ ಹೋದೊಡನೆ, ಹೈದರನು ತನಗೆ ಮೂವತ್ತಾರು ಸಾವಿರ ರೂಪಾಯಿ ಕಪ್ಪವನ್ನು ಕೊಡಬೇಕೆನ್ನುವ ಕರಾರನ್ನು ಹಾಕಿದನು. ಹಕೀಮಖಾನನು ಹಣವನ್ನಿತ್ತ ಮೇಲೆ, ಹೈದರನು

ಅಲ್ಲಿಂದ ಯುದ್ಧಮಾಡದೆ ಕಾಲು ಕಿತ್ತಿದನು.

'ದಿಲೇರಜಂಗ'ದಲ್ಲಿ ಮೇಲಿನ ಈ ಘಟನೆ ಬಂದಿದೆ. ಆದರೆ ಇತಿಹಾಸದ ಬೇರೆ ಮೂಲಗಳಲ್ಲಿ ಇದೇ ಘಟನೆ ಬೇರೆ ರೀತಿಯಲ್ಲಿ ವರ್ಣಿತವಾಗಿದೆ. ಹೈದರನಿಗೆ ಸವಣೂರು, ಕಡಪಾ ಮತ್ತು ಕರ್ನೂಲು ನವಾಬರೊಡನೆ ಸಂಧಾನ ಮಾಡಿಕೊಂಡರೆ ತನಗೆ ಮೂವರು ಬಲಿಷ್ಠ ಅಫಘಾನಿ ಪಠಾಣರ ಸಹಾಯವು ಒದಗುವುದೆಂದು ಸಂಧಾನವನ್ನು ನಡೆಸಿದನು. ಆದರೆ ಸವಣೂರು ನವಾಬನು ಈ ಸಂಧಾನಕ್ಕೆ ಒಪ್ಪದ್ದರಿಂದ, ಹೈದರನು ಕೆರಳಿ, ಫಜಲ್ ಉಲ್ ಖಾನನ ಸೇನಾಧಿಪತ್ಯದ ಕೆಳಗೆ ಅಪಾರ ಸೈನ್ಯವನ್ನು ತೆಗೆದುಕೊಂಡು ಬಂದು ಸವಣೂರನ್ನು ಮುತ್ತಿದನು. ಹಕೀಮಖಾನನು ಕೂಡ ಕತ್ತಿಯನ್ನು ಹಿರಿದು ತನ್ನ ಮೂರು ಸಾವಿರಕ್ಕೂ ಅಧಿಕ ಆಶ್ವದಳ ಮತ್ತು ಕಾಲ್ಬಳಗಳನ್ನು ಯುದ್ಧಕ್ಕೆ ನಿಲ್ಲಿಸಿದನು. ಹಕೀಮಖಾನನ ಸೈನಿಕರು ತರಬೇತಿಯಿಲ್ಲದೆ ಯುದ್ಧಕ್ಕೆ ಬಂದಿದ್ದರಿಂದ ಹೈದರನಿಗೆ ಸೋತರು. ಹೈದರನು, ಹಕೀಮಖಾನನು ಶರಣಾಗತನಾದ ಸಂಧಿಯನ್ನು ಬಳಸಿಕೊಂಡು, ತಾನು ಹಿಂದೆ ಹೇಳಿದಂತೆ ಎರಡು ಲಕ್ಷ ರೂಪಾಯಿ ಕಪ್ಪವನ್ನು ಸೈನ್ಯದ ವೆಚ್ಚಕ್ಕೆ ಕೊಡಬೇಕೆಂದು ಹೇಳಿದನು. ಆದರೆ, ನವಾಬನು ಮೂವತ್ತಾರು ಸಾವಿರ ರೂಪಾಯಿ ಕೊಡಲು ಒಪ್ಪಿದನು. ಆಗ ನವಾಬನ ಬಳಿ ಹಣವಿರಲಿಲ್ಲ. ಅವನಿಗೆ ಯಾವ ಸಾಹುಕಾರರೂ ಹಣ ಕೊಡಲು ಮುಂದೆ ಬರಲಿಲ್ಲ. ಹಣವನ್ನು ಸಂಗ್ರಹಿಸಿ ಇಡುವ ಪ್ರವೃತ್ತಿ ಆಫಘಾನಿ ಪಠಾಣರಲ್ಲಿ ಇದ್ದಿರಲಿಲ್ಲ. ಹೀಗಾಗಿ ಹಕೀಮಖಾನನು ತನ್ನ ಅರಮನೆಯಲ್ಲಿದ್ದ ಶಾಲು, ಶಿಲ್ಕು ಬಟ್ಟೆ, ಮಲಮಲ್, ಜಮಖಾನೆಗಳನ್ನಿತ್ತು ಹೈದರನಿಗೆ ಹಣವಿತ್ತನು. (ಈ ಬಟ್ಟೆಗಳ ಬೆಲೆ ನವಾಬ ಹಕೀಮಖಾನನು ಹೈದರನಿಗೆ ಕೊಡಬೇಕಾದ ಹಣಕ್ಕಿಂತ ಹೆಚ್ಚಿತ್ತು).

ಹೈದರ ಆಲಿ ಮೂವತ್ತಾರು ಸಾವಿರ ರೂಪಾಯಿ ಕಪ್ಪವನ್ನು ಪಡೆದು ಹಕೀಮಖಾನನೊಂದಿಗೆ ಸ್ನೇಹವನ್ನು ಬಯಸುವುದಾಗಿ ಹೇಳಿ ಹೋದನು. ನವಾಬನ ಈ ಸೋಲಿನಿಂದ ಹೈದರ ಅಲಿ ಕೃಷ್ಣಾ ನದಿಯವರೆಗೂ ಹಬ್ಬಿದ ಮರಾಠಾ ರಾಜ್ಯವನ್ನು ಆಕ್ರಮಿಸಿದಂತಾಯಿತು. ಸವಣೂರು ನವಾಬನ ಸೋಲನ್ನು ಕೇಳಿದ ಪೇಶ್ವೆ ಮಾಧವರಾಯನು (೧೭೬೧-೧೭೭೨) ತನ್ನ ಸೈನ್ಯವನ್ನು ತಂದು ಹೈದರ ಅಲಿಯನ್ನು ಪುನಃ ತುಂಗಭದ್ರಾ ದಾಚೆ ದೂಡಿದನು. ೧೭೬೫ರಲ್ಲಿ ಪೇಶ್ವೆ ಮತ್ತು ಹೈದರ ಆಲಿ ಮಧ್ಯೆ ಒಂದು ಒಪ್ಪಂದವಾಗಿ, ಹೈದರನು ಸವಣೂರಿನ ಮೇಲಿನ ತನ್ನ ಹಕ್ಕನ್ನು ಪೂರ್ಣ ಬಿಟ್ಟುಕೊಟ್ಟನು.

ಪುಣೆಯಲ್ಲಿ ೧೭೭೨ರಲ್ಲಿ ನಡೆದ ರಾಜಕೀಯ ಗೊಂದಲದಲ್ಲಿ ಮಾಧವರಾಯನು ಸತ್ತು, ಅವನ ನಂತರ ಪೇಶ್ವೆಯಾದ ತರುಣ ನಾರಾಯಣರಾಯನ ಕೊಲೆಯಾಗಿ, ರಘುನಾಥರಾವನೊಂದಿಗೆ ರಹಸ್ಯಮಯ ಒಪ್ಪಂದವು ನಡೆಯಿತು. ಹೈದರ ಆಲಿ

೧೭೭೬ರಲ್ಲಿ ತುಂಗಭದ್ರಾ ನದಿಯನ್ನು ದಾಟಿ ಬಂದು, ಸವಣೂರು ರಾಜ್ಯದ ಅರ್ಧ ಭಾಗವನ್ನು ಪುನಃ ಮರಾಠರಿಂದ ಕಿತ್ತುಕೊಂಡನು. ಇದನ್ನು ನೋಡಿ, ರಘುನಾಥರಾಯನನ್ನು ದ್ವೇಷಿಸುತ್ತಿದ್ದ ಸರದಾರರು ಸೈನ್ಯವನ್ನು ಕಳಿಸಿ ೧೭೭೮ರಲ್ಲಿ ಹೈದರನನ್ನು ಪುನಃ ತುಂಗಭದ್ರಾ ಆಚೆಗೆ ಸರಿಸಿದರು.

ಇದರ ಫಲವಾಗಿ ಹೈದರ ಆಲಿಯು ಸವಣೂರ ನವಾಬನೊಂದಿಗೆ ಸ್ನೇಹವನ್ನು ಬಯಸಿ ಸವಣೂರಿನ ಒಬ್ಬ ಪ್ರತಿನಿಧಿಯನ್ನು ಶ್ರೀರಂಗಪಟ್ಟಣಕ್ಕೆ ಕಳಿಸಿದರೆ ಎರಡೂ ರಾಜ್ಯಗಳಲ್ಲಿ ಸೌಹಾರ್ದತೆಯು ನೆಲೆಸುವುದೆಂದು ಸೂಚಿಸಿದನು. ಇದರಿಂದ ಸವಣೂರು ಮತ್ತು ಶ್ರೀ ರಂಗಪಟ್ಟಣದ ಮಧ್ಯೆ ಇದ್ದ ಕಹಿ ವಾತಾವರಣವನ್ನು ಹೋಗಲಾಡಿಸುವುದು ಹೈದರನಿಗೆ ಬೇಕಿತ್ತು.

ಅಬ್ದುಲ್ ಹಕೀಮಖಾನನು, ದರ್ಬಾರದಲ್ಲಿಯ ತನ್ನ ಮಂತ್ರಿಗಳೊಂದಿಗೆ ಶ್ರೀರಂಗಪಟ್ಟಣಕ್ಕೆ ಯಾರನ್ನು ಕಳಿಸಬೇಕೆಂದು ಚರ್ಚಿಸಿ ಕೊನೆಗೆ ಸವಣೂರಿನ ಗೌರವವನ್ನು ಎತ್ತಿ ಹಿಡಿದು, ಸಮರ್ಥ ರೀತಿಯಲ್ಲಿ ರಾಜ್ಯದ ಹಿತಾಸಕ್ತಿಗಳನ್ನು ಕಾಪಾಡುವಂತಹ ಯೋಗ್ಯ ರಾಯಭಾರಿಯನ್ನು ಸೂಚಿಸಬೇಕೆಂದು ಕೇಳಿಕೊಂಡನು. ಆಗ ಎಲ್ಲರೂ ರಾಜ್ಯದ ದಿವಾಣರಾಗಿದ್ದ ಖಂಡೇರಾವ ಸಂಗೋನು ಈ ಹುದ್ದೆಗೆ ಯೋಗ್ಯ ವ್ಯಕ್ತಿಯೆಂದು ಅಭಿಪ್ರಾಯಪಟ್ಟರು. ನವಾಬ ಅಬ್ದುಲ್ ಹಕೀಮಖಾನನು ಕೂಡಲೇ ಖಂಡೇರಾಯನಿಗೆ, ತುಂಬಿದ ದರ್ಬಾರದಲ್ಲಿ ರಾಜಪೋಷಕನ್ನಿತ್ತು ಶಾಲನ್ನು ಹೊದಿಸಿದನು. ಈ ಶಾಲನ್ನು ಹೊದಿಸುವುದೆಂದರೆ, ಸವಣೂರು ರಾಜ್ಯದ ಎಲ್ಲ ರೀತಿಯ ಮಾತುಕತೆಗಳನ್ನು ನಡೆಸಲು ಆತನಿಗೆ ಅಧಿಕಾರವನ್ನಿತ್ತಂತೆ. ಹಕೀಮಖಾನನ ಅಧಿಕಾರ ಪತ್ರದೊಂದಿಗೆ ಖಂಡೇರಾವನು ಹೈದರನ ದರ್ಬಾರಕ್ಕೆ ಹೋಗಿ ತನ್ನ ಅಧಿಕಾರ ಪತ್ರವನ್ನು ಕೊಟ್ಟನು. ಇದರಿಂದ ಹೈದರ ಅಲಿಗೆ ಅತ್ಯಂತ ಹರ್ಷವಾಯಿತು. ಖಂಡೇರಾವ ಹೈದರ ಅಲಿ ರಾಜ್ಯಕ್ಕೆ ವಕೀಲನೆಂದು ಹೋದ ಮೇಲೆ ಹೈದರ ಅಲಿ ಮತ್ತು ಹಕೀಮಖಾನನ ಮಧ್ಯೆ ಇದ್ದ ಭಿನ್ನಾಭಿಪ್ರಾಯಗಳು ಇಲ್ಲದಂತಾದವು. ಖಂಡೇರಾಯನು ಮೇಲಿಂದ ಮೇಲೆ ಸವಣೂರಿನ ವಿದ್ಯಮಾನಗಳನ್ನು ಹೈದರ ಅಲಿಗೆ ತಿಳಿಸುತ್ತಲಿದ್ದನು. ಖಂಡೇರಾಯ ಕೇವಲ ಮುತ್ಸದ್ದಿ ಇರಲಿಲ್ಲ. ಶ್ರೇಷ್ಠ ಯೋಧನೂ ಆಗಿದ್ದನು. ಹೈದರ ಅಲಿಗೆ ಇದರಿಂದ ಪ್ರಸಂಗ ಬಂದಾಗ, ಒಬ್ಬ ಶ್ರೇಷ್ಠ ಸೇನಾಪತಿಯ ಸಹಾಯವು ದೊರೆಯುವುದೆಂದು ಆನಂದವಾಯಿತು. ಖಂಡೇರಾವನಿಗೆ ಹೈದರ ಆಲಿ ಮತ್ತು ಹಕೀಮಖಾನರ ಮಧ್ಯೆ ಶಾಶ್ವತ ಸಂಬಂಧವನ್ನು ಕಲ್ಪಿಸಬೇಕೆಂದು ಅನಿಸಿತು.

ಖಂಡೇರಾಯನು ಹೈದರ ಅಲಿ ಸುಲ್ತಾನನಿಗೆ, ಸವಣೂರು ರಾಜಮನೆತನ ಮತ್ತು ಹೈದರ ಅಲಿ ಮನೆತನಗಳ ಮಧ್ಯೆ ಶರೀರ ಸಂಬಂಧ ಬೆಳೆದರೆ, ಎರಡೂ ರಾಜ್ಯಗಳು

ಸಂಬಂಧಿತ ರಾಜ್ಯಗಳಾಗಿ ಪರಸ್ಪರರಲ್ಲಿ ಸಹಾಯ ಸಹಕಾರಗಳು ದೊರೆಯಬಹುದೆಂದು ಸೂಚಿಸಿದನು. ಹೈದರನಿಗೆ ಈ ವಿಚಾರವು ತುಂಬಾ ಹಿಡಿಸಿತು.

ಮುಂದೆ ಎರಡೂ ಮನೆತನಗಳ ಹಿರಿಯರು ಕುಳಿತು ಅಬ್ದುಲ್ ಹಕೀಂಖಾನ ನವಾಬನ ಮಗಳಾದ ನವಾಜ ಬೇಗಂಳನ್ನು ಹೈದರ ಆಲಿಯ ಎರಡನೇ ಮಗ ಕರೀಮ ಸಾಹೇಬನಿಗೆ (ಟೀಪುವಿನ ಮಲ ತಮ್ಮ) ಕೂಡಬೇಕೆಂದು ಮತ್ತು ಹೈದರ ಆಲಿಯ ಮಗಳು ಸುಲ್ತಾನಾ ಬೇಗಂಗಳನ್ನು ಅಬ್ದುಲ್ ಅಹಕೀಮಖಾನನ ಜ್ಯೇಷ್ಠ ಪುತ್ರ ಅಬ್ದುಲ್ ಖೈರಖಾನನಿಗೆ ಕೊಟ್ಟು ವಿವಾಹ ಮಾಡಬೇಕೆಂದೂ ನಿಶ್ಚಯಿಸಿದರು. ಲಗ್ನಗಳು ಶ್ರೀರಂಗಪಟ್ಟಣದಲ್ಲಿ ನಡೆಯುವುದೆಂದು ಗೊತ್ತಾಯಿತು.

ಅಬ್ದುಲ್ ಹಕೀಮಖಾನ ದಿಲೇರಜಂಗ ದಿಲೇರ ಬಹದ್ದೂರನು ರಾಜಕುಮಾರ ಮತ್ತು ರಾಜಕುಮಾರಿಯರ ವಿವಾಹವನ್ನು ಅದ್ದೂರಿಯಿಂದ ಮಾಡುವ ಸಿದ್ಧತೆಗಳನ್ನು ಮಾಡಿ, ಬರಸಾತಕ್ಕೆ ಸವಣೂರಿನ ಸರದಾರರು, ಪ್ರತಿಷ್ಠಿತರು, ಸೈನ್ಯದ ಅಧಿಕಾರಿಗಳನ್ನು ಜೋಬದಾರರನ್ನು ಕರೆದುಕೊಂಡು ಹೋಗಬೇಕೆಂದು ಹೇಳಿದನು. ಸವಣೂರಿಂದ ವಿವಾಹಕ್ಕೆ ಶ್ರೀರಂಗಪಟ್ಟಣಕ್ಕೆ ಹೋಗುವ ಪ್ರತಿಷ್ಠಿತರ ಪಟ್ಟಿ ಸಿದ್ಧವಾಯಿತು:

೧. ಹಜರತ್ ಶಹಾ ಖಾದ್ರಿ ಸಾಹೇಬ, ಹುಲಗೂರು

೨. ಅಬ್ದುಲ್ ರಹೀಮ ಪಾಶಾ ಇಮಾಮ

೩. ಅಬ್ದುಲ್ ಖಾದರಖಾನ್ ತರೀನ

೪. ನೂರ್ ಮಹಮ್ಮದಖಾನ ತರೀನ

೫. ಜಮಾದಾರರು, ಅವರ ಸಹೋದರರು ಮತ್ತು ಅವರ ಸೈನಿಕರು

೬. ಸಯಿದಖಾನ ಸೂರ್

೭. ಶೇಖ ಅಬ್ದುಲ್ ರಹೀಮಾನ ಖಾನ

೮. ಅತ್ತಲ್ ಖಾನ. ಮಹಮ್ಮದ್

೯. ಹನುಮಂತ ಗೌಡ

೧೦. ರಾಯ ಖಂಡೇರಾಯ ದಿವಾಣ

೧೧. ಬಾಬೂರಾವ್ ಭಕ್ಷಿ

೧೨. ಮಹಮ್ಮದ್ ಹುಸೇನಖಾನ ಸರಗಿರೋಲಿ (ಕುದುರೆ ಪಾಗಾ ಮತ್ತು ಮೂವತ್ತಾರು ಕಾರ್ಖಾನೆಗಳ ಮುಖ್ಯಸ್ಥ)

೧೩. ನಾಲ್ವತ್ತು ಮಂದಿ ಬಂಗಾರ ಮತ್ತು ಬೆಳ್ಳಿ ಕೋಲುಗಳನ್ನು ಧರಿಸುವ ಜೋಪದಾರರು

೧೪. ನಾಲ್ವರು ದರ್ಬಾರದವರು

೧. ಭೋಜರಾಜ — ೨. ಖುಪಚಂದ

೩. ಮಖೂಲಾಲಾ — ೪. ಮಾಧವ ಜೋಶಿ

ಮೇಲಿನವರಲ್ಲದೆ, ಹಕೀಮಖಾನನು ತನ್ನ ಪರಿವಾರದವರ ಜೊತೆಗೆ ನಾಲ್ಕು ಸಾವಿರ ಆಶ್ವದಳದವನ್ನು, ಆರು ಸಾವಿರ ಕಾಲ್ದಳದವರನ್ನು, ಸವಣೂರಿಗೆ ವಿಧೇಯರಾಗಿದ್ದ ಪಾಳೇಯಗಾರರನ್ನು, ಮೂವತ್ತಾರು ಆನೆಗಳನ್ನು ಹಲವಾರು ಒಂಟೆಗಳನ್ನು ಕರೆದುಕೊಂಡು ವೈಭವದಿಂದ ಸವಣೂರನ್ನು ಬಿಟ್ಟನು. ನವಾಬನು ಪ್ರಯಾಣದ ಮಧ್ಯದಲ್ಲಿ ಅಲ್ಲಲ್ಲಿ ತಂಗಿದ ಸುದ್ದಿಯನ್ನು ಹೈದರ ಅಲಿಗೆ ಅಶ್ವರೋಹಿಯೊಡನೆ ತಿಳಿಸುತ್ತಿದ್ದನು.

ಹೈದರ ಅಲಿ ತನ್ನ ಉನ್ನತ ಅಧಿಕಾರಿಗಳನ್ನು ತನ್ನ ರಾಜ್ಯದ ಗಡಿಯಾದ ತುಂಗಭದ್ರಾ ನದಿಯ ತಟಾಕದ ಹರಿಹರಕ್ಕೆ ಕಳಿಸ, ಅವರ ಆತಿಥ್ಯದಲ್ಲಿ ನವಾಬನ ಪರಿವಾರನ್ನು ಶ್ರೀರಂಗಪಟಟಣಕ್ಕೆ ಬರಮಾಡಿಕೊಂಡನು. ಬೀಗರು ಶ್ರೀರಂಗಪಟ್ಟಣಕ್ಕೆ ಬಂದಿರುವ ವಾರ್ತೆಯನ್ನು ಕೇಳಿ ಹೈದರಾಲಿ ಅವರನ್ನು ಮೆರವಣಿಗೆಯಲ್ಲಿ ಕರೆತಂದು ಸ್ವಾಗತಿಸಿದನು. ರಾಜಧಾನಿಯಲ್ಲಿಯ ಬೀದಿಗಳು, ಅಂಗಡಿಗಳು, ಮನೆಗಳು ಆಲಂಕೃತಗೊಂಡಿದ್ದವು. ಹಾದಿಯಲ್ಲಿ ಸ್ವಾಗತಕ್ಕೆ ಕಮಾನುಗಳನ್ನು ಕಟ್ಟಲಾಗಿತ್ತು. ಆಗ ರಾತ್ರಿಯಾಗಿದ್ದರೂ, ದೀಪಗಳನ್ನು ಹೊತ್ತಿಸಿ ಹಗಲಿನಂತೆ ಕಾಣುವ ವ್ಯವಸ್ಥೆ ಮಾಡಲಾಗಿತ್ತು. ಬೀಗರು ಅಡ್ಡಾಡುವಲ್ಲಿ ವರ್ಣವರ್ಣದ ಜಮಖಾನೆಗಳನ್ನು ಹಾಸಲಾಗಿತ್ತು. ಹಲ್ವಾದಂತಹ ವಿವಿಧ ಸಿಹಿ ತಿಂಡಿಗಳನ್ನು ಮಾಡಲಾಗಿತ್ತು. ಬೀಗರಿಗೆ ತೃಪ್ತಿಯಾಗುವಷ್ಟು ವಿಧವಿಧದ ಭಕ್ಷ್ಯಭೋಜ್ಯಗಳನ್ನು ಸಿದ್ದಪಡಿಸಲಾಗಿತ್ತು. ಸ್ವತಃ ಹೈದರ ಆಲಿ ಸುಲ್ತಾನನು ವಿವಾಹದ ವ್ಯವಸ್ಥೆಯನ್ನು ನೋಡುತ್ತಿದ್ದನು. ನವಾಬನು ನಿತ್ಯವು ಪಾತ್ರೆಗಳಿಗೆ ಕಲಾಯಿ ಮಾಡಿಸಿ ಅಡಿಗೆ ಮಾಡಿಸುತ್ತಿದ್ದನು. ಆದರೆ ಹೈದರನ ಅಡಿಗೆಯವರು ನಿನ್ನೆ ಮಾಡಿದ ಪಾತ್ರೆಗಳನ್ನು ಹಾಗೆಯೇ ತೊಳೆದು ಅಡಿಗೆ ಮಾಡುತ್ತಿದ್ದರು. ಇದನ್ನು ಕೇಳೀಧ ನವಾಬನು ಸವಣೂರಿಂದ ತಾನು ಕರೆತಂದಿದ್ದ ಇಪ್ಪತ್ತು ಕಲೆಗಾರರನ್ನು ಹೈದರ ಅಲಿ ಪಾತ್ರೆಗಳನ್ನು ಕಲೆ ಮಾಡಲು ಕಳಿಸಿದನು.

ಹಕೀಮಖಾನನಿಗೆ ಹುಕ್ಕಾ ಹೊತ್ತಿಸಿಕೊಡುವ ಬೀಗರ ಸೇವಕನು ಪೂರ್ಣ ಬಗ್ಗಿ ಹುಕ್ಕಾದ ಕೊಳವೆಗೆ ಹತ್ತಿದ ಧೂಳನ್ನು ಒರೆಸಿದನು. ಅದನ್ನು ನೋಡಿ ಹಕೀಮಖಾನನ ಹುಬ್ಬುಗಳು ಗಂಟಿಕ್ಕಿದವು. ಇದನ್ನು ಕೇಳಿದ ಹೈದರ ಅಲಿ ಸ್ವತಃ ಹಕೀಮಖಾನನನ್ನು ಕಂಡು ಮನ್ನಿಸಬೇಕೆಂದು ಕೇಳಿದನು.

ಹಕೀಮಖಾನನು ಶ್ರೀರಂಗಪಟ್ಟಣಕ್ಕೆ ಹೋದ ಕೆಲ ತಿಂಗಳ ಮೇಲೆ, ಮೂಹೂರ್ತವನ್ನು ಗೊತ್ತುಪಡಿಸಿ ಲಗ್ನಗಳನ್ನು ಭರ್ಜರಿಯಾಗಿ ನಡೆಸಲಾಯಿತು. ಲಗ್ನಗಳು ಮೂರು ತಿಂಗಳವರೆಗೆ ನಡೆದವು. ಮೈಸೂರು ಮತ್ತು ಶ್ರೀರಂಗಪಟಟಣಗಳ ಜನರು ಮೂರು ತಿಂಗಳುಗಳ ಕಾಲ ಮನೆಯಲ್ಲಿ ಅಡಿಗೆಯನ್ನು ಮಾಡಲಿಲ್ಲ. ಅತ್ತರು ಗುಲಾಬಗಳ ಸುವಾಸನೆ ಶ್ರೀರಂಗಪಟ್ಟಣದ ತುಂಬಾ ಪಸರಿಸುವಷ್ಟು ವಿವಾಹದಲ್ಲಿ ಬಳಸಲಾಯಿತು.

ಈ ವಿವಾಹದಲ್ಲಿ ಹೈದರ ಅಲಿ ಸುಲ್ತಾನನು ತಾನು ತನ್ನ ಮುಂಗೈ ಜೋರಿನಿಂದ ೧೭೬೭ರಲ್ಲಿ ಪೇಶ್ವೆಯವರಿಂದ ಗೆದ್ದಿದ್ದ ಎಂಟು ಮಹಲುಗಳನ್ನು, ಅಳಿಯ ಅಬ್ದುಲ್ ಖೈರಖಾನನಿಗೆ ಉಡುಗೊರೆಯಾಗಿ ಕೊಟ್ಟನು. ಇವು ಮೊದಲಿಗೆ ಸವಣೂರು ರಾಜ್ಯಕ್ಕೆ ಸೇರಿದ್ದವು. ಹೈದರನು ಆಗ ಮರಾಠರು ಆಕ್ರಮಿಸಿದ್ದ ಸವಣೂರಿನ ಅರ್ಧ ರಾಜ್ಯವನ್ನು ಹಕೀಮಖಾನನಿಗೆ ಬಿಟ್ಟುಕೊಟ್ಟನು. ಅದರ ಪ್ರತಿಫಲವೆಂದು ನವಾಬನ ಇಬ್ಬರು ಮಕ್ಕಳು ಎರಡು ಸಾವಿರ ಶ್ರೇಷ್ಠ ಜಾತಿಯ ಅಫಘಾನಿ ಅಶ್ವಗಳನ್ನು ಸಾಕಿ, ತಾವು ಕೇಳಿದಾಗ ಅವುಗಳನ್ನು ತನ್ನ ಸೇವೆಗೆ ಒದಗಿಸಬೇಕೆನ್ನುವ ಕರಾರನ್ನು ವಿಧಿಸಿದನು. ಈ ರೀತಿ ಹೈದರ ಅಲಿ ಮತ್ತು ಅಬ್ದುಲ್ ಹಕೀಮಖಾನ ನವಾಬನ ಮಧ್ಯದ ಸುಮಧುರ ಬಾಂಧವ್ಯವು ಹೈದರ ಅಲಿ ೧೭೮೨ರಲ್ಲಿ ಸಾಯುವವರೆಗೂ ಉಳಿಯಿತು.

ಅಬ್ದುಲ್ ಹಕೀಮಖಾನನು ಮಗನ ಮತ್ತು ಮಗಳ ವಿವಾಹಗಳನ್ನು ಪೂರೈಸಿ, ಬಂಕಾಪುರ ಮೇಲಿಂದ ತನ್ನ ರಾಜಧಾನಿ ಸವಣೂರಿಗೆ ಬಂದನು. ಹಾದಿಯಲ್ಲಿ ಬಾಣಾವರ ಬೆಟ್ಟದ ಮೇಲಿರುವ ಸಂತ ಮೀರ್ ಹಯಾತ್ ಖಲಂದರನ ಆರ್ಶೀವಾದ ಪಡೆದನು. ಎರಡು ದಿವಸ ಅಲ್ಲಿ ವಾಸ್ತವ್ಯ ಮಾಡಿ ಬಡಬಗ್ಗರಿಗೆ ಊಟ ಹಾಕಿಸಿ ದಾನ ಧರ್ಮಗಳನ್ನು ಮಾಡಿ ಮುಂದೆ ಪ್ರಯಾಣವನ್ನು ಬೆಳೆಸಿದನು.

೧೭೮೦ರಲ್ಲಿ ಹೈದರ ಅಲಿ ಅರ್ಕಾಟ್ ನವಾಬನ ಮೇಲೆ ದಾಳಿ ಮಾಡಲು ದೊಡ್ಡ ಸೈನ್ಯವನ್ನು ತೆಗೆದುಕೊಂಡು ಹೊರಟನು. ಈ ಯುದ್ಧಕ್ಕೆ ತನಗೆ ಸಹಾಯ ಮಾಡಬೇಕೆಂದು ಹೈದರ ಅಲಿ ಹಕೀಮಖಾನ ನವಾಬನನನ್ನು ಕೇಳಿದಾಗ, ನವಬನು ತನ್ನ ಪ್ರೀತಿಯ ಮಕ್ಕಳಾದ ಜಬ್ಬರಖಾನ ಮತ್ತು ಅಬ್ದುಲ್ ಹುಸೇನಖಾನರೊಂದಿಗೆ ಅಶ್ವದಳ ಹಾಗೂ ಕಾಲ್ದಳವನ್ನು ಕಳಿಸಿದನು. ಇದೇ ಸಮಯಕ್ಕೆ ಹೈದರ ಅಲಿಯು ಸವಣೂರಿನ ದಿವಾಣ ರಾವ ಖಂಡೇರಾವ ಸಂಗೋನಿಗೆ ಸರ್ ಲಷ್ಕರ ಎನ್ನುವ ಬಡತಿಯನ್ನು ಕೊಟ್ಟು ಸವಣೂರು ಸೈನ್ಯದೊಂದಿಗೆ ಶ್ರೀರಂಗಪಟ್ಟಣಕ್ಕೆ ಕಳಿಸಬೇಕೆಂದು ಕೇಳಿಕೊಂಡನು. ಹಕೀಮಖಾನನು ಖಂಡೇರಾಯನಿಗೆ ಸರ್ ಲಷ್ಕರ ಪದವಿಯನ್ನಿತ್ತು ಗೌರವ ನೀಡಿ ತರಬೇತಿ ಪಡೆದ ಹಲವಾರು ನಿಷ್ಠಾವಂತ ಅಫಘಾನಿ ಜಮಾದಾರರನ್ನು ಕಳಿಸಿದನು. ಹೈದರನ ಸೈನ್ಯವು ಹಾದು ಹೋಗುವಲ್ಲಿ ಪುಂಡರು ಅನೇಕ ಹಳ್ಳಿಗಳನ್ನು ಸುಲಿದು, ಜಹಗೀರದಾರ ಮತ್ತು ಜಮಾದಾರರಿಗೆ ವಿಪರೀತ ತೊಂದರೆಯನ್ನಿತ್ತಿದ್ದರು. ಹೈದರನು ಈ ಪ್ರದೇಶಗಳನ್ನು

ಗೆದೆಯುತ್ತ ಪೂರ್ವದ ದಂಡೆಯಲ್ಲಿರುವ ನಾಗೂರು, ನಾಗಿಪಟ್ಟಣಂ ಕಡೆ ಬಂದನು. ಅರ್ಕಾಟ್ ನವಾಬನ ಸಹಾಯಕ್ಕೆ ಇಂಗ್ಲೀಷರು ತಮ್ಮ ಸೈನ್ಯವನ್ನು ಕಳಿಸಿ ದ್ದರು. ಹೈದರನ ಮತ್ತು ಇಂಗ್ಲೀಷರ ಮಧ್ಯೆ ಯುದ್ಧವಾಗಿ ಹೈದರನು ವಾಲಾಜಾಪೇಟ ಮತ್ತು ವೆಂಕಟಗಿರಿಗಳನ್ನು ಉದ್ಧ್ವಸ್ತಗೊಳಿಸಿದನು.

ನಾಗಿಪಟ್ಟಣಂದ ಬಳಿ ಇರುವ ಸಮುದ್ರದಲ್ಲಿ ಇಂಗ್ಲೀಷರು ನಿಂತು, ಹಡಗದಿಂದ ಹೈದರನ ಸೈನ್ಯದ ಮೇಲೆ ಗುಂಡು ಹಾರಿಸಿದರು. ಈ ಗುಂಡಿನ ಚಕಮಕಿಯಲ್ಲಿ, ಟಿಪುವಿನ ಹೆಂಡತಿಯ ಸೋದರ ನವಾಬ ಬದರುದ್ದೀನನಿಗೆ ಗುಂಡು ತಾಕಿ ಅವನು ಸ್ಥಳದಲ್ಲಿಯೇ ಮೃತಪಟ್ಟನು. ಈ ಯುದ್ಧದಲ್ಲಿ ಹೈದರ ಅಲಿ ಸೈನ್ಯಕ್ಕೂ ಮತ್ತು ಇಂಗ್ಲೀಷ ಸೈನ್ಯಕ್ಕೂ ಹಣಾಹಣಿ ಯುದ್ಧವಾಯಿತು. ಈ ಯುದ್ಧದಲ್ಲಿ ಹೈದರ ಅಲಿಯ ಕಡೆಯ ಸರದಾರ ನರೇಗಲ್ಲನು, ಕಡಲೂರನು ಕರ್ನಲ್ ಬೇಲಿಯನ್ನು ಕೆಡವಿ ಕೈದು ಮಾಡಿದನು. ಈ ಯುದ್ಧದುದ್ದಕ್ಕೂ ಸವಣೂರಿನ ದಿವಾಣ ಖಂಡೇರಾವನು ಹೈದರನ ಸೈನ್ಯದೊಂದಿಗಿದ್ದನು.

ಹೈದರನು ವೆಂಕಟಗಿರಿಯನ್ನು ಗೆದ್ದು, ಕಾಳಹಸ್ತಿಯ ಮೇಲೆ ಹಾಯ್ದು, ಚಿತ್ತೂರ ಸಮೀಪದ ಹನ್ನೆರಡು ಪಾಳೇಯಗಾರರ ತಾಲೂಕುಗಳನ್ನು ಗೆದ್ದು, ಅಲ್ಲಿ ಎರಡು ದಿವಸ ವಾಸ್ತವ್ಯ ಮಾಡಿ, ಲಾಲಗಡ್ಡಿ ಮತ್ತು ಪೀಠ ಜಾದಾಪೇಟ ಮೇಲಿಂದ ಹಾಯ್ದು ಹುನಗುಂದಕ್ಕೆ ಬಂದನು. ಇಲ್ಲಿ ಅವನಿಗೆ ಬೆನ್ನಲ್ಲಿ ಅರ್ಬುದ ರೋಗವು ಕಾಣಿಸಿಕೊಂಡಿತು. ವೈದ್ಯರು, ಹಕೀಮರು ಎಷ್ಟೇ ಪ್ರಯತ್ನಿಸಿದರೂ ರೋಗವು ಉಲ್ಬಣಗೊಳ್ಳಹತ್ತಿತು. ಕೊನೆಗೆ ಹೈದರ ಆಲಿ ೧೭೮೨ರ ಡಿಸೆಂಬರ್ ೭ರಂದು ನಿಧನನಾದನು.

ಹೈದರನು ತೀರಿಕೊಂಡ ಸುದ್ದಿಯು ಶ್ರೀರಂಗಪಟ್ಟಣದ ಅಂತಃಪುರದಿಂದ ಯಾರಿಗೂ ತಿಳಿಯದಂತೆ ಅವನ ನಂಬಿಕೆಯ ಮನುಷ್ಯನಾಗಿದ್ದ ಅಬು ಮೊಹಮ್ಮದ ಚೋಬದಾರನು ರಹಸ್ಯವಾಗಿಟ್ಟನು. ಈ ಸುದ್ದಿಯನ್ನು ಮೊದಲು ಅವನು ಯುವರಾಜ ಟಿಪುವಿಗೆ ತಿಳಿಸಬೇಕಿತ್ತು. ಕಾರಣ, ಮುಂದಿನ ಕಾರ್ಯಗಳು ಅವನ ಆಜ್ಞೆಯಂತೆ ನಡೆಯಲಿದ್ದವು. ಟಿಪು ಆಗ ಮಲಬಾರದ ಸಮೀಪದ ಕೊಡಿಯಾಬೈಲ ಬಂದರದಲ್ಲಿದ್ದನು. ಅವನು ತಾನು ಗೆದ್ದ ಮಲಬಾರ ಪ್ರದೇಶಗಳ ವ್ಯವಸ್ಥೆಯನ್ನು ಮಾಡುವುದರಲ್ಲಿ ನಿರತನಾಗಿದ್ದನು. ಶ್ರೀರಂಗಪಟ್ಟಣದಿಂದ ಅಶ್ವಾರೋಹಿ ಬಂದು ಈ ದುಃಖದ ಸಂಗತಿಯನ್ನು ಹೇಳಿದಾಗ ಟಿಪು ತಕ್ಷಣವೇ ಶ್ರೀರಂಗಪಟ್ಟಣದ ಕಡೆ ಧಾವಿಸಿದನು.

ಟಿಪು ಶ್ರೀರಂಗಪಟ್ಟಣಕ್ಕೆ ಹೋದೊಡನೆ ಅಲಿಖಾನ ಮತ್ತು ಅಲಿರುಖಮಾನಖಾನ ಪೂರ್ವಭಾವಿಯಾಗಿ ನಿರ್ಧರಿಸಿದಂತೆ, ಹೈದರ ಅಲಿಯ ಶವವನ್ನು ಮೆರವಣಿಗೆಯಲ್ಲಿ ಒಯ್ದು ಸಕಲ ಸೈನಿಕ ಮರ್ಯಾದೆಗಳೊಂದಿಗೆ, ಗಂಜಾಮದಲ್ಲಿ ದಫನ ಮಾಡಲಾಯಿತು. ನಂತರ ಟಿಪುವು ಸಿಂಹಾಸನಾರೋಹಣದ ವ್ಯವಸ್ಥೆಗೆ ಆಜ್ಞೆ ಮಾಡಿದನು. ಟಿಪುವು ತಂದೆಯ

ಸಾವಿನ ಸುದ್ದಿಯನ್ನು ಮತ್ತು ತನ್ನ ಸಿಂಹಾಸನಾರೋಹಣದ ಸುದ್ದಿಯನ್ನು ಬೀಗರಾದ ಅಬ್ದುಲ್ ಹಕೀಮಖಾನನಿಗೆ ತಿಳಿಸಿ, ಅವನು ಶ್ರೀರಂಗಪಟ್ಟಣಕ್ಕೆ ಬರಬೇಕೆಂಬ ಅಪೇಕ್ಷೆಯಿಂದ ಪತ್ರ ಬರೆದು ಕಳಿಸಿದನು. ಪತ್ರದಲ್ಲಿ:

"ನಮ್ಮ ತಂದೆ ಈ ಭೂ ಪ್ರದೇಶವನ್ನು ತ್ಯಜಿಸಿ ಸ್ವರ್ಗಕ್ಕೆ ತೆರಳಿದರು. ನೀವು ನಮ್ಮ ಮನೆತನಕ್ಕೆ ಹಿರಿಯರಿದ್ದುದರಿಂದ ಈ ಸಂದರ್ಭದಲ್ಲಿ ಶ್ರೀರಂಗಪಟ್ಟಣಕ್ಕೆ ಆಗಮಿಸಿ ವ್ಯಥಿತರಾದ ನಮ್ಮ ಕುಟುಂಬಕ್ಕೆ ಸಾಂತ್ವನ ಹೇಳಬೇಕು. ನಾವೆಲ್ಲರೂ ನಿಮ್ಮನ್ನು ತಂದೆಯ ಸ್ಥಾನದಲ್ಲಿ ಇರುವಿರೆಂದು ಗೌರವಿಸುತ್ತೇವೆ - ಇತಿ ಟಿಪ್ಪು".

ಈ ಪತ್ರವು ಸವಣೂರನ್ನು ತಲುಪಿದೊಡನೆ ನವಾಬ ಹಕೀಮಖಾನನು ಶ್ರೀರಂಗಪಟ್ಟಣದ ವಿದ್ಯಮಾನಗಳನ್ನು ತನ್ನ ಸಚಿವ, ಸರದಾರ ಮತ್ತು ಆಪ್ತೇಷ್ಟರೊಡನೆ ಚರ್ಚಿಸಿ, ತಾನು ಅಲ್ಲಿಗೆ ಹೋಗುವುದು ಉಚಿತವೋ ಎಂದು ಕೇಳಿದನು. ಕೊನೆಗೆ ಈ ಸಂದರ್ಭದಲ್ಲಿ ತಾನು ಶ್ರೀರಂಗಪಟ್ಟಣಕ್ಕೆ ಹೋಗಬಾರದೆಂದು ನಿರ್ಧರಿಸಿದನು. ಕಾರಣ ಅಬ್ದುಲ್ ಹಕೀಮಖಾನನು, ಟಿಪ್ಪು ತನ್ನನ್ನು ಎಂದೂ ಗೌರವದಿಂದ ಕಂಡಿಲ್ಲವೆಂದು, ಅವನ ಬಗ್ಗೆ ದ್ವೇಷವನ್ನು ಇರಿಸಿಕೊಂಡಿದ್ದನು. ಶ್ರೀರಂಗಪಟ್ಟಣಕ್ಕೆ ಹಕೀಮಖಾನನು ಹಿಂದೆ ಹೋದಾಗ ಟಿಪ್ಪು ತನ್ನ ಅಸನದಿಂದ ಎದ್ದು ಸಮಯೋಚಿತ ಮರ್ಯಾದೆಯನ್ನು ತೋರಿಸುತ್ತಿರಲಿಲ್ಲವೆಂದು ಹಕೀಮಖಾನನು ಆಕ್ಷೇಪಿಸುತ್ತಿದ್ದನು.

ಹಕೀಮಖಾನನು ಈ ಸಂದೇಶವನ್ನು ತಂದ ಅಶ್ವಾರೋಹಿಯೊಡನೆ ಉತ್ತರನ್ನು ಕಳಿಸಿ ತಾನು ಸವಣೂರಿನಲ್ಲಿಯೇ ಉಳಿದನು.

"ನಿನ್ನ ಪತ್ರ ತಲುಪಿತು. ನನ್ನ ರಾಜ್ಯದಲ್ಲಿ ಉದ್ಭವಿಸಿರುವ ಸಮಸ್ಯೆಗಳು ನನ್ನನ್ನು ಶ್ರೀರಂಗಪಟ್ಟಣಕ್ಕೆ ಹೋಗದಂತೆ ಬಂಧಿಸಿವೆ. ನಿನ್ನ ಸಿಂಹಾಸನಾರೋಹಣವು ನಡೆಯಲಿ ಮುಬಾರಕ - ಅಬ್ದುಲ್ ಹಕೀಮಖಾನ ಬಹದ್ದೂರ"

ಈ ಪತ್ರವು ಟಿಪ್ಪುವಿನ ಕೈಸೇರಿದೊಡನೆ ಅವನು ತಪ್ತನಾದನು. ನನ್ನ ತಂದೆ ತೀರಿಕೊಂಡ ಸುದ್ದಿಯನ್ನು ಕೇಳಿದ ಇವನಿಗೆ ಎರಡು ಸಾಂತ್ವನಪರ ಮಾತುಗಳನ್ನು ಹೇಳುವ ಸೌಜನ್ಯವು ಇಲ್ಲದಾಗಿದೆಯಲ್ಲ. ನಮ್ಮ ಮನೆತನದ ಹಿರಿಯನೆಂದು ನಾನು ಗೌರದಿಂದ ಕಂಡರೆ, ಇವನಿಗೆ ಇಷ್ಟು ಸೊಕ್ಕು ಬಂದಿತಲ್ಲ. ಎಂದು ಅಸಮಾಧಾನ ತಾಳಿದನು. ಆಗ ಅಲ್ಲಿಯೇ ಇದ್ದ ಖಂಡೇರಾಯನು ಈ ಮಾತುಗಳನ್ನು ಕೇಳಿದನು. ಹೈದರನ ಜೊತೆ ಯುದ್ಧಕ್ಕೆ ಹೋದ ನವಾಬನ ಇಬ್ಬರು ಮಕ್ಕಳು ಮತ್ತು ಟಿಪ್ಪುವಿನೊಡನೆ ಯುದ್ಧಕ್ಕೆ ಹೋಗಿದ್ದ ದಿವಾಣ ಖಂಡೇರಾವ ಇನ್ನೂ ಶ್ರೀರಂಗಪಟ್ಟಣದಲ್ಲಿಯೇ ಇದ್ದರು.

ಖಂಡೇರಾವನು ಟಿಪ್ಪುವಿನ ಕಡೆ ಹೋಗಿ "ಯಾರದೋ ದುರ್ಬೋಧನೆಯಿಂದ ಹಕೀಮಖಾನರು ಇಲ್ಲಿಗೆ ಬರುವುದನ್ನು ಬಿಟ್ಟಿರಬೇಕು. ನನಗೆ ಸವಣೂರಿಗೆ ಹೋಗಲು

ಅಪ್ಪಣೆಯನ್ನಿತ್ತರೆ ಅವರನ್ನು ಇಲ್ಲಿಗೆ ಕರೆತರುವೆ''ಎಂದು ಹೇಳಿದನು. ಖಂಡೇರಾವನ ಮೇಲೆ ವಿಶ್ವಾಸವಿದ್ದ ಟಿಪು ಸವಣೂರಿಗೆ ಹೋಗಲು ಅನುಮತಿಯನ್ನಿತ್ತನು. ಖಂಡೇರಾಯನು ಸವಣೂರಿಗೆ ಬಂದು ಹಕೀಮಖಾನನಿಗೆ "ಈ ಕ್ಷಣದಲ್ಲಿ ನೀವು ಶ್ರೀರಂಗಪಟ್ಟಣಕ್ಕೆ ಬರಬೇಕು. ಇದು ನಿಮ್ಮ ಕರ್ತವ್ಯ" ಎಂದು ಎಷ್ಟೇ ತಿಳಿಸಿ ಹೇಳಿದರೂ ಹಕೀಮಖಾನನದು ಒಂದೇ ಹಠ. ಅವನು ಅಲ್ಲಿಗೆ ಹೋಗಲಿಲ್ಲ. ಕರೆತರಲು ಬಂದ ದಿವಾಣ ಖಂಡೇರಾಯನನ್ನು ಮರಳಿ ಶ್ರೀರಂಗಪಟ್ಟಣಕ್ಕೆ ಕಳಿಸಿದನು. ಖಂಡೇರಾಯನು ನಿರಾಶನಾಗಿ ಶ್ರೀರಂಗಪಟ್ಟಕ್ಕೆ ಬಂದು ಅಬ್ದುಲ್ ಹಕೀಮಖಾನ ಬಹದ್ದೂರರು ಬರುವುದಿಲ್ಲವೆಂದು ತಿಳಿಸಿದನು.

ಟಿಪು ಹಕೀಂಖಾನನ ಮೇಲೆ ಕೋಪಾವಿಷ್ಟನಾಗಿ ತುಂಬಿದ ದರಬಾರದಲ್ಲಿ "ಸವಣೂರಿನ ನವಾಬನು ನಮ್ಮ ಮೇಲೆ ಮನಸ್ಸನ್ನು ತೆಗೆದಿದ್ದಾನೆ. ನಾನು ಸವಣೂರಿಗೆ ಹೋಗಿ ಉದ್ವಸ್ತಗೊಳಿಸಿ ಅವನ ಅರಮನೆಯನ್ನು ನೆಲಸಮ ಮಾಡುವೆ''ಎಂದು ಪ್ರತಿಜ್ಞೆ ಮಾಡಿದನು. ಈ ಮಾತುಗಳನ್ನು ಮನಸ್ಸಿಗೆ ಹಚ್ಚಿಕೊಂಡು, ತನ್ನ ಕಣ್ಣೆದುರಿಗೆ ಸವಣೂರು ವಿನಾಶವಗುವುದನ್ನು ತಾನು ನೋಡಲಾರೆನೆಂದು ದಿವಾಣ ಖಂಡೇರಾಯನು ಚಿಂತೆಯಲ್ಲಿಯೇ ಸತ್ತನು. ಖಂಡೇರಾವ್ ೧೭೮೩ ಮಾರ್ಚ-ಏಪ್ರಿಲ್ ದಲ್ಲಿ ಮೃತ್ಯುವನ್ನಪ್ಪಿರಬೇಕು.

ಖಂಡೇರಾಯನಿಗೆ ನವಾಬ ಹಕೀಮಖಾನನ ಮೇಲೆ ತುಂಬ ವಿಶ್ವಾಸವಿದ್ದಿರಬೇಕು. ಖಂಡೇರಾಯನು ಸಾಮಾನ್ಯ ವ್ಯಕ್ತಿಯಾಗಿಯೇ ಸವಣೂರಿಗೆ ಬಂದನು. ಹಕೀಮಖಾನನು ಕಟ್ಟಿಸುತ್ತಿದ್ದ ಕಟ್ಟಡ ಮತ್ತು ಕಾರಖಾನೆಗಳ ಮೇಲ್ವಿಚಾರಣೆ ಮಾಡಿಕೊಂಡು ಲೆಕ್ಕಪತ್ರಗಳೆನ್ನಿಡಲು ಖಂಡೇರಾಯನು ನಿಯಮಿಸಲ್ಪಟ್ಟಿದ್ದನು. ೧೭೬೪ರಲ್ಲಿ ಹೈದರ ಅಲಿ ಸವಣೂರು ಮೇಲೆ ಏರಿಬಂದು ಬಂಕಾಪುರದಲ್ಲಿ ತಳವೂರಿ, ಹಕೀಮಖಾನನ್ನು ನೋಡಬೇಕೆಂಬ ನೆಪ ಮಾಡಿ ಅವನನನ್ನು ಬಂಕಾಪುರಕ್ಕೆ ಕರೆಸಿಕೊಂಡನು. ಅವನಿಲ್ಲಿರುವಾಗ ಹೈದರ ಅಲಿ ತನ್ನ ಸೈನಿಕರನ್ನು ಸವಣೂರಿಗೆ ಕಳಿಸಿ ಕೊಲೆ, ಸುಲಿಗೆಗಳನ್ನು ಮಾಡಿಸಿದನು. ಈ ಗೊಂದಲವನ್ನು ನೋಡಿದ ಬೀಬೀಸಾಹೀಬಾ ಖದಿಸಾ ಬೇಗಂಳು ಆಗ ಸರದಾರನಾಗಿದ್ದ ಖಂಡೇರಾಯನನ್ನು ಕರೆಸಿ, ಈ ಪುಂಡಾಟಿಕೆಯನ್ನು ಹತ್ತಿಕ್ಕಬೇಕೆಂದು ಹೇಳಿದಳು. ತಮ್ಮ ಆಜ್ಞೆಯಾದರೆ ನಾನು ಅದನ್ನು ಖಂಡಿತ ನೆರವೇರಿಸುತ್ತೇನೆ ಎಂದು ಖಂಡೇರಾಯನು ಹೇಳಿದನು. ಬೇಗಂ ಆ ರೀತಿ ಹುಕುಮು ಕೊಟ್ಟಳು. ಖಂಡೇರಾಯನು ಈ ಸೈನಿಕರ ಬೆನ್ನಟ್ಟಿ ಅರೆರಾತ್ರಿಯಲ್ಲಿಯೇ ಸವಣೂರಿಂದ ಮೂರು ಮೈಲುಗಳವರೆಗೆ ಅಟ್ಟಿಸಿಕೊಂಡು ಹೋದನು. ಇದರಿಂದ ಬೀಬೀಸಾಹೀಬಾ ಸಂಪ್ರೀತಳಾಗಿ ಹಕೀಮಖಾನನು ಬಂಕಾಪುರದಿಂದ ಬಂದ ನೇಲೆ ಖಂಡೇರಾಯನಿಗೆ ದಿವಾಣಗಿರಿ ಬಡತಿಯನ್ನು ಕೊಡಬೇಕೆಂದು ಹೇಳೀದಳು.

ಖಂಡೇರಾಯನು ೧೭೬೫ರ ಹೊತ್ತಿಗೆ ಸವಣೂರಿನ ದಿವಾಣನಾಗಿ

ನಿಯಮಿಸಲ್ಪಟ್ಟಿರಬೇಕು. ಖಂಡೇರಾವ ಅತ್ಯಂತ ಚಾಣಾಕ್ಷನಿರಬೇಕು. ಅವನು ಯುದ್ಧಕಲೆಯಲ್ಲಿ ಕೂಡ ಅತ್ಯಂತ ಪರಿಣಿತನಿದ್ದನು. ಖಂಡೇರಾವ್ ಹೇಳಿದಂತೆ ಅಬ್ದುಲ್ ಹಕೀಮಖಾನನು ಹೈದರ ಅಲಿ ಸುಲ್ತಾನ ಶ್ರೀರಂಗಪಟ್ಟಣಕ್ಕೆ ಹೋಗಿ, ದುಃಖಿತಪ್ತರಿಗೆ ಸಾಂತ್ವನವನ್ನು ಹೇಳಿ ಟಿಪ್ಪುವಿನ ಪಟ್ಟಾಭಿಷೇಕದಲ್ಲಿ ಪಾಲ್ಗೊಂಡು ಬಂದಿದ್ದರೆ, ಸವಣೂರು ರಾಜ್ಯವು ಹಾಳಾಗುವುದು ತಪ್ಪುತ್ತಿತ್ತೇನೋ!.

**ಹಕೀಮಖಾನನ ಜಲವಿಹಾರ**

. ನವಾಬನು ಶ್ರೀರಂಗಪಟ್ಟಣದಿಂದ ಮಕ್ಕಳ ಲಗ್ನಗಳನ್ನು ಮುಗಿಸಿ, ಬೇಸಿಗೆಯ ತಾಪವನ್ನು ಶಮನ ಮಾಡಿಕೊಳ್ಳಲು, ಪರಿವಾರ ಸಮೇತ ವರದಾ ನದಿಯ ದಂಡೆಗೆ ಹೋದನು. ಆ ದಂಡೆಯ ಮೇಲಿರುವ ಮಂಟಗಣಿ ಹಳ್ಳಿಗೂ ಸವಣೂರಿಗೂ ಕೇವಲ ಮೂರು ಮೈಲುಗಳಂತರ.

ಮೇಲಿಂದ ಮೇಲೆ ಅಬ್ದುಲ್ ಹಕೀಮಖಾನನು ಜಲವಿಹಾರಕ್ಕೆ ಹೋಗುತ್ತಿದ್ದನು. ಅವನು ಮಂಟಗಣಿ ತಲುಪುವ ಮುನ್ನಾದಿನವೇ ನದೀ ದಂಡೆಯ ಮೇಲೆ ಗುಡಾರಗಳನ್ನು ನಿಲ್ಲಿಸಿ ರಾಜಪರಿವಾರಕ್ಕೆ ವ್ಯವಸ್ಥೆಯನ್ನು ಮಾಡಿದ್ದರು. ನವಾಬನ ಪರಿವಾರದ ಸ್ತ್ರೀಯರು ನದಿಯಲ್ಲಿ ಸ್ನಾನ ಮಾಡುವಾಗ ಯಾರೂ ಅವರನ್ನು ನೋಡಬಾರದೆಂದು ನದಿಯ ದಂಡೆಗೆ ಶಾಮಿಯಾನಾ ಹಾಕಿಸಿ ಮರೆಮಾಡುತ್ತಿದ್ದರು. ನವಾಬನ ಕುಟುಂಬದವರು ನದಿ ದಂಡೆಯ ಮೇಲೆ ಇರುವವರೆಗೂ ಆ ಹಳ್ಳಿಯವರು ಅತ್ತ ಹೋಗುವಂತಿರಲಿಲ್ಲ.

ನವಾಬರು ಮಂಟಗಣಿಗೆ ಬಂದು ಇಳಿದೊಡನೆ, ನವಾಬರ ಹೆಂಡತಿ ಅರೂಸ ಬೇಗಂ ತನ್ನೊಂದಿಗೆ ತನ್ನ ಮನೆತನದ ನಲವತ್ತು ಸ್ತ್ರೀಯರನ್ನು ಮೇಣೆಗಳಲ್ಲಿ ಕುಳ್ಳಿರಿಸಿಕೊಂಡು ನದಿ ದಂಡೆಗೆ ಬಂದಳು. ನೀರನ್ನು ನೋಡಿ ಸ್ತ್ರೀ ಪರಿವಾರಕ್ಕೆ ರೋಮಹರ್ಷವಾಯಿತು. ಮುಂಜಾನೆ ಉಪಾಹಾರ ಮುಗಿಸಿ, ಈ ಸ್ತ್ರೀಯರೆಲ್ಲರೂ ಬಿಸಿಲಿನ ಬೇಗೆಯನ್ನು ಶಮನಗೊಳಿಸಲು ನದಿಗೆ ಇಳಿದರು. ಎಲ್ಲರೂ ಕೈಗಳಲ್ಲಿ ಕೈಹಾಕಿ ನೀರಿನಲ್ಲಿ ನೃತ್ಯ ಮಾಡುತ್ತಿದ್ದರು. ದಾಸಿಯರು ಆ ನೀರಿನಲ್ಲಿಯೇ ಈ ರಾಜಪರಿವಾರದವರಿಗೆ ತಾಟಿನಲ್ಲಿ ಮಿಠಾಯಿ ಹಣ್ಣುಗಳನ್ನು ತಂದು ತಿನ್ನಲು ಕೊಡುತ್ತಿದ್ದರು. ಈ ಎಲ್ಲ ಸ್ತ್ರೀಯರ ಮಧ್ಯದಲ್ಲಿದ್ದ ಅರೂಸ ಬೇಗಂಳಿಗೆ ತಾನು ಎಲ್ಲರಿಗಿಂತ ಶ್ರೇಷ್ಠಳೆಂದು ತೋರಿಸಿಕೊಳ್ಳಬೇಕೆನ್ನುವ ಚಪಲವಾಯಿತು. ಕೂಡಲೇ ಅವಳು ಎಲ್ಲರನ್ನೂ ಬಿಟ್ಟು, ತಾನೊಬ್ಬಳೇ ನೀರಿನಲ್ಲಿ ಸಾಗಿ ಬಿದ್ದು ಈಸುತ್ತ ಮುಂದೆ ಹೋದಳು. ಅಲ್ಲಿ ಆಳವಾದ ನೀರಿದ್ದ ಕಲ್ಪನೆ ಅವಳಿಗಿರಲಿಲ್ಲ. ಕೈಸೋತು ಚೀರುತ್ತ ಮುಳುಗಹತ್ತಿದಳೂ. ಅದನ್ನು ಕೇಳಿದ ಪುರಷರಾರೂ ಅತ್ತ ಹೋಗುವಂತಿಲ್ಲ. ಕಾರಣ ಪುರುಷರಿಗೆ ಅತ್ತಕಡೆ ಹೋಗಲು ನಿರ್ಬಂಧವಿತ್ತು. ಈ ಹೆಣ್ಣುಮಕ್ಕಳಲ್ಲಿ ಒಬ್ಬೊಬ್ಬರೇ ಮುಂದೆ ಹೋಗಿ ಬೇಗಂಳನ್ನು ಉಳಿಸಲು

ಪ್ರಯತ್ನಿಸಿದರು. ಆದರೆ ನದಿಯ ನೀರಿನ ಸೆಳವಿಗೆ ಈ ನಾಲವತ್ತು ರಾಜಪರಿವಾರದ ಸ್ತ್ರೀಯರು ಹೆಣವಾದರು. ನವಾಬನು ದುಃಖತಪ್ತನಾಗಿ ಈ ನಾಲವತ್ತು ಶವಗಳನ್ನು ಸವಣೂರಿಗೆ ತಂದು ಶವಸಂಸ್ಕಾರ ಮಾಡಿ ನವಲತ್ತು ಗೋರಿಗಳನ್ನು ಖಾದರಬಾಗದಲ್ಲಿ ನಿರ್ಮಿಸಿದನು. ಇಂದಿಗೂ ಈ ಗೋರಿಗಳಿವೆ.

**ಗಳಗನಾಥ ವಿಹಾರ**

ಈ ಮಂಟಗಣಿ ದುರ್ಘಟಣೆ ನಡೆದ ಮೇಲೆ ಹಕೀಮಖಾನನು ಕೆಲವೊಂದು ದಿವಸ ವಿಹಾರಕ್ಕೆ ಹೋಗಿರಲಿಲ್ಲ. ಮುಂದೆ ಕೆಲ ವರುಷಗಳ ಮೇಲೆ ಅಂತಃಪುರದ ಪರಿವಾರದೊಂದಿಗೆ ಗಳಗನಾಥಕ್ಕೆ ಹೋದನು. ತುಂಗಭದ್ರಾ ಮತ್ತು ವರದಾ ನದಿಗಳ ಸಂಗಮವೇ ಗಳಗನಾಥ. ಇದೊಂದು ಅತ್ಯಂತ ರಮ್ಯಸ್ಥಳ. ಅಂತಃಪುರದ ಸ್ತ್ರೀಯರು ನೀರಿನಲ್ಲಿ ಚಲ್ಲಾಟವಾಡಿ ಕೇಕೆ ಹಾಕುತ್ತಿರುವಾಗ ಸವಣೂರಿನಿಂದ ಇಬ್ಬರು ಅಶ್ವಸವಾರರು ಬಂದು ಟೊಂಕದಲ್ಲಿ ಭದ್ರವಾರಿಸಿಕೊಂಡಿದ್ದ ಒಂದು ಪತ್ರನ್ನು ಮೆಲ್ಲನೆ ತೆಗೆದು ನವಾಬರಿಗೆ ಕೊಟ್ಟರು. ಈ ಪತ್ರವು ಒಂದು ರೇಶಿಮೆ ಚೀಲದಲ್ಲಿ ಭದ್ರವಾಗಿತ್ತು. ಅದೇಕೋ ಅಶ್ವಾರೋಹಿಗಳ ಮುಖ ಅಷ್ಟು ಪ್ರಫುಲ್ಲವಾಗಿರಲಿಲ್ಲ. ನವಾಬನು ಆ ಚೀಲದಲ್ಲಿದ್ದ ಮೊಹರಬಂದ ಪತ್ರವನ್ನು ಮೊಲ್ಲನೆ ತೆಗೆದು ಮುನಸಿಗೆ ಓದಲು ಹೇಳಿದನು. ಆ ಪತ್ರದ ಪ್ರಾರಂಭಿಕ ಒಕ್ಕಣಿಕೆ ನೋಡಿ ಮುನಸಿ ಹಿಂಜರಿದಾಗ ಹಕೀಮಖಾನನು ಸುತ್ತಲಿದ್ದವರನ್ನು ಬೇರೆ ಕಡೆ ಕಳಿಸಿ, ಪತ್ರವನ್ನು ಓದಲು ಹೇಳಿದನು. ಅದು ಟಿಪುವು ಹಕೀಮಖಾನ ನವಾಬನಿಗೆ ಬರೆದ ಪತ್ರವಾಗಿತ್ತು. ಅದರಲ್ಲಿ ಟಿಪು "ನಮ್ಮ ದಿವಂಗತ ತಂದೆಯವರಾದ ಸುಲ್ತಾನ ಹೈದರ ಅಲಿಖಾನ ಬಹದ್ದೂರರು, ತಮ್ಮ ಮಗಳ ವಿವಾಹದಲ್ಲಿ ವರದಕ್ಷಿಣೆಯೆಂದು ಕೆಲವು ಪರಗಣಾ, ಕಸಬಾ ಮತ್ತು ಮಹಲುಗಳನ್ನು ನಿಮಗೆ ಕೊಟ್ಟಿದ್ದಾರೆ. ಆ ಒಪ್ಪಂದವನ್ನು ನಾನೀಗ ರದ್ದುಪಡಿಸಿರುವುದರಿಂದ ಆ ಪ್ರದೇಶಗಳನ್ನು ನಮಗೆ ಮರಳಿ ಒಪ್ಪಿಸಬೇಕು" ಎಂದು ತಿಳಿಸಿದ್ದನು.

ಹಕೀಮಖಾನನು ಈ ಪತ್ರ ನೋಡಿ ಸಿಟ್ಟಿಗೆದ್ದು ಮುನಸಿಯ ಕಡೆಯಿಂದ ಪತ್ರಬರೆಸಿ "ನೀವು ಕಾಣಿಕೆಯಾಗಿ ಕೊಟ್ಟ ಎಲ್ಲ ವಸ್ತುಗಳನ್ನು ನಿಮ್ಮ ಮುಖದ ಮೇಲೆ ಬಿಸಾಕಿದ್ದೇನೆ. ಈ ಪ್ರದೇಶಗಳನ್ನು ನಿಮಗೆ ಬಿಟ್ಟುಕೊಡಲು ನಮ್ಮ ಅಧಿಕಾರಿಗೆ ಪತ್ರಗಳನ್ನು ಕಳಿಸಿದ್ದೇನೆ". ಎಂದು ತಿಳಿಸಿದನು. ಹಕೀಮಖಾನನ ಪತ್ರವು ಟಿಪುವಿನ ತಲೆಯನ್ನು ಮತ್ತಷ್ಟು ಕೆಡಿಸಿತು. ೧೭೮೬ರ ಹೊತ್ತಿಗೆ ಪೇಶ್ವೆಯವರು ಕರ್ನಾಟಕ ಸುಬಾದಲ್ಲಿ ಕಾಲು ಚಾಚುತ್ತ ಒಂದೊಂದೇ ಪ್ರದೇಶವನ್ನು ಗೆಲ್ಲುತ್ತ ನಡೆದಿದ್ದರು. ಪೇಶ್ವೆಯವರನ್ನು ಅಲ್ಲಿಂದ ಹೊರಗೆ ಹಾಕಿ, ತುಂಗಭದ್ರೆಯ ಆಚೆಯ ನೆಲವನ್ನು ತನ್ನ ವಶಕ್ಕೆ ತೆಗೆದುಕೊಳ್ಳಲು ಟಿಪು ಜೈತ್ರ ಯಾತ್ರೆಯನ್ನು ಪ್ರಾರಂಭಿಸಿ, ಅದವಾನಿ ಕೋಟೆಯನ್ನು ಗೆದ್ದು, ಕುತುಬುದ್ದೀನ

ಅನ್ನುವವನನ್ನು ಕಿಲ್ಲೇದಾರನನ್ನಾಗಿ ನಿಯಮಿಸಿ, ಮುಂದೆ ನಡೆದನು. ಸವಣೂರತ್ತ ಹೋಗುವ ಮುನ್ನ ಟಿಪುವು ತನ್ನ ಖಜಾಂಚಿ ರಾಘವೇಂದ್ರ ನಾಯಕನನ್ನು ಮೊದಲು ಸವಣೂರಿಗೆ ಕಳಿಸಿ, ಹಕೀಮಖಾನನಿಂದ ಇಪ್ಪತ್ತೆಂಟು ಲಕ್ಷ ರೂಪಾಯಿ ಕಪ್ಪವನ್ನು ವಸೂಲು ಮಾಡಿಕೊಂಡು ಬರಲು ಆಜ್ಞಾಪಿಸಿದ್ದನು.

ಅಬ್ದುಲ್ ಹಕೀಮಖಾನನು ಟಿಪುವು ತನಗೆ ತೊಂದರೆಯನ್ನು ಕೊಡಬಹುದೆಂದು ಪೇಶ್ವೆಯವರ ಸಹಾಯವನ್ನು ಕೋರಿದನು. ಆಗ ಪೇಶ್ವೆ ಸರದಾರನಾಗಿದ್ದ ತುಕೋಜಿ ಹೋಳ್ಕರ ಟಿಪುವಿಗೆ ಸೇರಿದ್ದ ಕಿತ್ತೂರನ್ನು ವಶಪಡಿಸಿಕೊಳ್ಳಲು ಯುದ್ಧದಲ್ಲಿ ತೊಡಗಿದ್ದನು. ಹಕೀಮಖಾನನ ಅವಸರದ ಕರೆ ಬಂದೊಡನೆ, ಒಂದೇ ರಾತ್ರಿಯಲ್ಲಿ ಹೋಳ್ಕರನು ಧಾವಿಸುತ್ತ ಸವಣೂರಿಗೆ ಬಂದನು. ಟಿಪುವಿನಿಂದ ಕಪ್ಪವನ್ನು ಕೇಳಲು ಬಂದ ರಾಘವೇಂದ್ರನಾಯಕನನ್ನು ಹಿಡಿಯಬೇಕೆಂದರೆ, ಅವನು ಅಷ್ಟರಲ್ಲಿ ಪಾರಾಗಿ ಹೋಗಿದ್ದನು. ಆದರೆ ರಾಘವೇಂದ್ರನಾಯಕನು ತಂದಿದ್ದ ಎರಡು ಲಕ್ಷ ರೂಪಾಯಿಗಳು ಇವನಿಗೆ ಸಿಕ್ಕವು. ಇದನ್ನು ಕೇಳಿದ ಟಿಪು ಕೊಪ್ಪಳದ ಮಾರ್ಗವಾಗಿ ಸವಣೂರಿಗೆ ಬಂದನು.

ಹಕೀಮಖಾನನು ಪೇಶ್ವೆಯವರ ಜೊತೆ ಹೈದರಾಬಾದಿನ ನಿಜಾಮನ ಸಹಾಯವನ್ನು ಯಾಚಿಸಿದ್ದನು. ಅದರಿಂದ ಹೈದ್ರಾಬಾದಿನಿಂದ ಘನೀಮಿಯಾ ಮತ್ತು ತಹವರಜಂಗ್ ಎಂಬ ಇಬ್ಬರು ಸರದಾರರೊಂದಿಗೆ ಅಪಾರ ಸೈನ್ಯವು ಬಂದಿತು. ಪುಣೆಯಿಂದ ಹರಿಪಂತ ಫುಡಕೆ ಹಾಗೂ ಧೋಲೇಕರ ಸಾಹೇಬ ಜರೀಪಟ್ಕಾ ಎಂಬ ಸರದಾರರು ಎರಡು ಲಕ್ಷ ಸೈನ್ಯವನ್ನು ತಂದು ಟಿಪುವಿನ ದಾಳಿಯನ್ನು ಎದುರು ನೋಡುತ್ತಿದ್ದರು.

ಟಿಪುವು ತನ್ನ ಅಪಾರ ಸೈನ್ಯದೊಂದಿಗೆ ಸವಣೂರಿನ ದಕ್ಷಿಣಕ್ಕೆ ಮೂರು ಮೈಲುಗಳ ಮೇಲಿರುವ ಹುರಳೀಕೊಪ್ಪಿಗೆ (ಹುಲಿಕೊಪ್ಪ) ಬಂದು ತಲುಪಿದನು. ಯುದ್ಧವು ಪ್ರಾರಂಭವಾಗುವ ಮೊದಲು ಟಿಪುವು ಹಕೀಮಖಾನನಿಗೆ ಒಂದು ಪತ್ರವನ್ನು ಬರೆದು "ನೀವು, ಜಾತಿ ಬಾಂಧವ್ಯ ಮತ್ತು ನಮ್ಮ ಮನೆತನಗಳ ಮಧ್ಯೆ ಇರುವ ಶರೀರ ಸಂಬಂಧಗಳನ್ನು ಗಣನೆಗೆ ತೆಗೆದುಕೊಳ್ಳದೆ, ಪೇಶ್ವೆಯವರ ಸಹಾಯವನ್ನು ಯಾಚಿಸಬಾರದಿತ್ತು. ನೀವು ನಮ್ಮ ಎಲ್ಲ ಕರಾರುಗಳನ್ನು ಮುರಿದಿದ್ದೀರಿ" ಎಂದು ತಿಳಿಸಿದನು. ಹಕೀಮಖಾನ ಬಹದ್ದೂರನು ಹಿಂದೆ ಸರಿಯದಷ್ಟು ಸಿದ್ಧತೆಗಳನ್ನು ಮಾಡಿದ್ದನು.

ಎರಡೂ ಪಕ್ಷದವರು ಕತ್ತಿಗಳನ್ನು ಹಿಡಿದರು. ಗುಂಡುಗಳು ಹಾರಿದವು. ಸವಣೂರಿನ ನೆಲವೆಲ್ಲವೂ ರಕ್ತದಿಂದ ತನ್ನ ಮೂಲ ವರ್ಣವನ್ನೇ ಕಳೆದುಕೊಂಡಿತು. ಈ ಯುದ್ಧವು ದಾರಾ ಮತ್ತು ಸಿಕಂದರನ ಮಧ್ಯೆ ನಡೆದಷ್ಟು ತೀವ್ರವಾಗಿ ನಡೆಯಿತೆಂದು ಸವಣೂರು ಅರಮನೆ ಮೂಲಗಳು ದಾಖಲಿಸಿವೆ. ಈ ಯುದ್ಧಗಳಲ್ಲಿ "ಒಬ್ಬರನ್ನೊಬ್ಬರು ತಪ್ಪಿಸಿಕೊಂಡು ಹೋಗುವಂತಿರಲಿಲ್ಲವಾದ್ದರಿಂದ ಯುದ್ಧವು ಅನಿವಾರ್ಯವಾಯಿತು"

ಎಂದು ಹಜರತ್ ಮೌಲಾನಾ ನಿಜಾಮುದ್ದೀನ ಗೌಜವಿ ಹೇಳಿದ್ದಾನೆ. ಈ ಯುದ್ಧದಲ್ಲಿ ಹೈದ್ರಾಬಾದ ನಿಜಾಮನ ದಂಡನಾಯಕ ಗೌಸುಮೀಯಾ ಮತ್ತು ತಹವರಜಂಗ ಕಲಿತನದಿಂದ ಕಾದಾಡಿದರು. ಆದರೂ ಪ್ರಯೋಜನವಾಗಲಿಲ್ಲ. ಪೇಶ್ವೆಯವರ ಸೈನ್ಯ ಕೂಡ ಹಿಂದೇಟು ಹಾಕಬೇಕಾಯಿತು.

೧೭೮೭, ಫೆಬ್ರವರಿ ಒಂದರಂದು ಇಬ್ಬರೂ ಶಸ್ತ್ರವಿರಾಮಕ್ಕೊಪ್ಪಿ, ಶಾಂತಿಯ ಮಾತುಗಳನ್ನು ಪ್ರಾರಂಭಿಸಿದರು. ಏಪ್ರಿಲ್ ೧೭೮೭ರ ಹೊತ್ತಿಗೆ ಒಪ್ಪಂದವು ಏರ್ಪಟ್ಟಿತು.

ಟಿಪುವು ತನಗೆ ದ್ರೋಹವನ್ನು ಬಗೆಯಬಹುದೆಂದು ಅಂಜಿದ ಹಕೀಮಖಾನ ನವಾಬನು ತನ್ನ ಹೆಂಡಂದಿರು ಮತ್ತು ಮಕ್ಕಳನ್ನು ಕಟ್ಟಿಕೊಂಡು ಟಿಪುವಿನ ಕೈಗೆ ಸಿಕ್ಕದೆ ಪುಣೆಯತ್ತ ಪಲಾಯನ ಮಾಡಿದನು. ಅವನು ಹೋಗುವಾಗ ನಾಲ್ಕು ಕೋಟಿ ರೂಪಾಯಿಗಳನ್ನು ಖಜಾನೆಯಿಂದ ತೆಗೆದುಕೊಂಡಿದ್ದನು. ಆದರೆ, ಪ್ರತಿ ವುರುಷವೂ ಇಪ್ಪತ್ತು ಲಕ್ಷ ರೂಪಾಯಿಗೂ ಹೆಚ್ಚು ಕಂದಾಯವನ್ನು ತರುತ್ತಿದ್ದ ಅನುವಂಶಿಕವಾಗಿ ಬಂದ ರಾಜ್ಯವನ್ನು ತೊರೆದು ಹೋಗಲು ಅವನಿಗೆ ತುಂಬಾ ವ್ಯಥೆಯಾಯಿತು. ಈಗ ಅವನಿಗೆ ಪೇಶ್ವೆಯವರ ಆಶ್ರಯವು ಸುರಕ್ಷಿತವೆನಿಸಿತು.

ಅಬ್ದುಲ್ ಹಕೀಮಖಾನನು ಅತ್ಯಂತ ರಸಿಕನಿದ್ದನು. ಅವನದು ತುಂಬಿದ ಸಂಸಾರ. ಅವನಿಗೆ ಇಪ್ಪತ್ತೆರಡು ಗಂಡು ಮಕ್ಕಳಿದ್ದರು. ಅವನು ಮಲಂಗಿ ಅನ್ನುವ ಶಿಲ್ಪಿಯನ್ನು ಕರೆಸಿ, ಸವಣೂರಿನಲ್ಲಿ ಗಗನ ಮಹಲ್ ಮತ್ತು ದಿಲ್‌ಬಹಾರ್ ಮಹಲುಗಳನ್ನು ಕಟ್ಟಿಸಿದನು. ಅವನು ತನ್ನ ತೋಶಖಾನಾದಲ್ಲಿ ಕಾಶ್ಮೀರ ಮತ್ತು ಬುರ್‌ಹಾನಪುರದಿಂದ ತಂದ ಅತ್ಯಂತ ಬೆಲೆಬಾಳುವ ವಸ್ತುಗಳನ್ನು ಪ್ರದರ್ಶಿಸಿದ್ದನು (ತೋಶಖಾನಾ ಎಂದರೆ ಬೆಲೆಬಾಳುವ ವಸ್ತುಗಳನ್ನಿಡುವ ಕೋಶಾಗಾರವಿದ್ದಂತೆ) 'ಜಮಾದಾರ ಖಾನಾ' ಅನ್ನುವ ಇನ್ನೊಂದು ವಿಶಾಲ ಕೋಣೆಯಲ್ಲಿ ಅವನು ತನ್ನ ದರ್ಬಾರಿ ವೇಷಭೂಷಣಗಳನ್ನಿಡುತ್ತಿದ್ದನು. ಅವನು ಸದಾ ಸೌಂದರ್ಯವರ್ಧಕ ವಸ್ತುಗಳನ್ನು ಪ್ರಸಾಧನಕ್ಕಾಗಿ ಬಳಸುತ್ತಿದ್ದನು. ಹಕೀಮಖಾನನು ತಲೆಗೆ ಸುತ್ತುತ್ತಿದ್ದ ಕೇಸರಿ ಮತ್ತು ಇತರ ವರ್ಣಗಳ ಪಟಗಾದ ಉದ್ದ ನೂರಾ ಮೂವತ್ತು ಮೊಳ ಉದ್ದವಿದ್ದಿತು. ಕೊರಳಿಗೆ ಕಿಮ್ಮತ್ತಿನ ಮುತ್ತಿನ ಮಾಲೆಗಳನ್ನು ಹಾಕಿಕೊಳ್ಳುತ್ತಿದ್ದನು. ಅವನ ಝುನಾನಾ ಚೀನಾ ಮತ್ತು ಬುರ್‌ಹಾನಪುರದಲ್ಲಿ ಸಿದ್ಧವಾದ ರೇಶಿಮೆ ಜಮಖಾನೆಗಳಿಂದ ಆಲಂಕೃತ ವಾಗಿರುತ್ತಿತ್ತು. ನೆಲಕ್ಕೆ ಹಾಸುವ ಒಂದೊಂದು ಜಮಖಾನೆಯೂ ಆನೆಗಳನ್ನು ಬಿಟ್ಟು ಬೇರಾರೂ ಹೊರಲಿಕ್ಕೆ ಸಾಧ್ಯವಿಲ್ಲದಷ್ಟು ಭಾರವಾಗಿದ್ದವು.

ಅವನ ಜಲಪಾನ ಕೋಣೆಯಲ್ಲಿ ಎರಡು ನೂರು ನಕ್ಷೆಯ ನೀರಿನ ಹೂಜಿಗಳಿದ್ದು, ಈಜಿಪ್ತ ಶಿಲೆಯಲ್ಲಿ ಕೆತ್ತಿದ ಜಾಂಬಳಿ ವರ್ಣದ ಕುಡಿಯುವ ಬಟ್ಟಲುಗಳಿದ್ದವು.

ಅರಮನೆಯಲ್ಲಿ ಅಲ್ಲಲ್ಲಿ ಶಾಮಿಯನಾ ಪರದೆಗಳನ್ನು ಇಳಿ ಬಿಟ್ಟಿದ್ದರು. ಅವನ ಅರಮನೆಯಲ್ಲಿಯೇ ಒಂದು ದೊಡ್ಡ ಶಸ್ತ್ರಾಗಾರವಿದ್ದು, ಅಲ್ಲಿ ಎರಡೂ ಕಡೆ ಹರಿತವಾದ ಅಬಾಸ್ ಮತ್ತು ಯಾಮಿನಿ ಅನ್ನುವ ಎರಡು ಅಪರೂಪದ ಖಡ್ಗಗಳಿದ್ದವು. ಇಷ್ಟೆಲ್ಲ ವೈಭವ ಮತ್ತು ಸಂಪತ್ತುಗಳನ್ನು ಏಕಾಏಕೀ ಬಿಟ್ಟು ಅನಾಥನಂತೆ ಹೋಗಲು ಹಕೀಮಖಾನನಿಗೆ ಅತೀವ ವೇದನೆಯಾಯಿತು.

ಅಬ್ದುಲ್ ಹಕೀಮಖಾನನು ಯಾರಿಗೂ ತಿಳಿಯದಂತೆ ರಹಸ್ಯವಾಗಿ ಅಂತಃಪುರವನ್ನು ತ್ಯಜಿಸಿ ಹೋದ ಸುದ್ದಿಯನ್ನು ಗುಪ್ತಚಾರರು ಟಿಪ್ಪು ಸುಲ್ತಾನನಿಗೆ ತಿಳಿಸಿದಾಗ, ಟಿಪ್ಪು ತನ್ನ ಮಂತ್ರಿ ಮೀರ್ ಮಹಮ್ಮದ ಸಾದಿಕ್‌ನನ್ನು ಕರೆದು "ಯಾರಿಗೂ ಹಿಂಸೆ ಮಾಡದೆ ಅಬ್ದುಲ್ ಹಕೀಮಖಾನನು ಅರಮನೆಯಲ್ಲಿ ಬಿಟ್ಟು ಹೋದದ್ದನ್ನೆಲ್ಲ ವ್ಯವಸ್ಥಿತವಾಗಿ ತೆಗೆದುಕೊಂಡು ಬಾ"ಎಂದು ಹೇಳಿ ಕಳಿಸಿದನು.

ಮೀರ ಸಾದೀಕನಿಗೆ ಅಬ್ದುಲ್ ಹಕೀಮಖಾನನ ಅಂತಃಪುರಕ್ಕೆ ಹೋದಾಗ ಆಶ್ಚರ್ಯವಾಯಿತು. ಕಾರಣ, ಹಕೀಮಖಾನನು ಅಷ್ಟು ವೈಭವೋಪೇತ ಸುಂದರ ಅರಮನೆಯನ್ನು ಕಟ್ಟಿಸಿರಬಹುದೆಂಬ ಕಲ್ಪನೆ ಅವನಿಗಿರಲಿಲ್ಲ. ಹಕೀಮಖಾನನು ವ್ಯವಸ್ಥೆಗೊಳಿಸಿದ್ದ ಕಾರ್ಖಾನೆಗಳನ್ನು ನೋಡಿ ಮೀರಸಾದಿಕನಿಗೆ ಅಪಾರ ಸಂತೋಷವಾಯಿತು. ನವಾಬನ ಬಗ್ಗೆ ಅಭಿಮಾನವೆನಿಸಿತು.

ಹಕೀಮಖಾನನು 'ಫತೇ-ಹೋ-ಜಹಬಾರ' ಅನ್ನುವ ೧೨ ದಾರಾ (ಸುಮಾರು ಮೂವತ್ತಾರು ಅಡಿ) ಉದ್ದದ ಗನ್ನನ್ನು ಬಿಟ್ಟು ಹೋಗಿದ್ದನು. ಸಾಮಾನ್ಯರಿಗೆ ಈ ಗನ್ನನ್ನು ಎತ್ತುವುದು ಸಾಧ್ಯವಿರಲಿಲ್ಲ. ಅದು ಸ್ವಲ್ಪ ಕೆಟ್ಟಿದ್ದರಿಂದ ಶಸ್ತ್ರಾಗಾರಕ್ಕೆ ದುರಸ್ತಿಗೆಂದು ಬಂದಿತ್ತು.

ಅಬ್ದುಲ್ ಹಕೀಮಖಾನ ನವಾಬನ ಜ್ಯೇಷ್ಠ ಪುತ್ರ ಮತ್ತು ಟಿಪ್ಪು ಸುಲ್ತಾನನ ತಂಗಿಯ ಗಂಡ ಅಬ್ದುಲ್ ಖೈರಖಾನನು ಅಶ್ವವನ್ನೇರಿ ಒಬ್ಬನೇ ಬಂದು ಟಿಪ್ಪುವನ್ನು ಭೇಟಿಯಾದನು.ಅವನು ಟಿಪ್ಪುವನ್ನು ಅತ್ಯಂತ ಗೌರವದಿಂದ ಕಂಡನು. ಆಗ ಟಿಪ್ಪುವು ಅಬ್ದುಲ್ ಖೈರಖಾನನಿಗೆ "ನಿನ್ನ ತಂದೆ ಅದೇಕೆ ತುಂಬಿದ ಅರಮನೆಯನ್ನು ಹೀಗೆ ತೊರೆದು ಹೋದರೋ ಗೊತ್ತಿಲ್ಲ. ನಾನು ಅವರ ಮೇಲೆ ಯಾವ ನಿರ್ಬಂಧವನ್ನೂ ಹೇರಿರಲಿಲ್ಲ. ಈಗವರು ನಿರಾಶ್ರಿತರಂತೆ ಅತ್ತಿತ್ತ ಅಲೆಯಬೇಕಾಯಿತಲ್ಲ. ರಾಜಧಾನಿಯಲ್ಲಿ ಇಷ್ಟು ಸಂಪತ್ತಿರುವಾಗ ಅವರು ಪಲಾಯನವನ್ನು ಮಾಡಬಾರದಿತ್ತು" ಎಂದು ಸಹಾನುಭೂತಿಯನ್ನು ವ್ಯಕ್ತಪಡಿಸಿದನು. ಇದಕ್ಕೆ ಖೈರಖಾನನು ತನ್ನ ಭಾವಮೈದುನನಿಗೆ ಸಮಾಧಾನಕರ ಉತ್ತರವನ್ನಿತ್ತನು.

ಟಿಪ್ಪು ತಕ್ಷಣವೇ ತನ್ನ ಡೇರೆಯ ಬದಿಗೆ ಇನ್ನೊಂದು ವಿಶೇಷ ಡೇರೆಯನ್ನು ನಿಲ್ಲಿಸಿ,

ಖೈರಖಾನನನ್ನು ಅಲ್ಲಿಗೆ ಕರೆತಂದು ಅವನೊಂದಿಗೆ ಸಹಭೋಜನವನ್ನು ಮಾಡಿದನು. ಟಿಪ್ಪು ಖೈರಖಾನನಿಗೆ ಅವನ ತಂದೆಯ ಪರಗಣಾಗಳ ಬಗ್ಗೆ ಕೂಲಂಕಷವಾಗಿ ವಿಚಾರಿಸಿ, ಅವನಿಗೆ ಮರ್ಯಾದೆಯನ್ನು ಸಲ್ಲಿಸಿದನು. ಟಿಪ್ಪುವು ಹಕೀಮಖಾನನು ಬಿಟ್ಟು ಹೋದ ರಾಜ್ಯದಲ್ಲಿ ಮೊದಲು ಯಾವ ವ್ಯವಸ್ಥೆ ಇತ್ತೋ ಅದನ್ನೇ ಮುಂದುವರೆಸಲು ಅಧಿಕಾರಿಗಳಿಗೆ ಆಜ್ಞೆಗಳನ್ನಿತ್ತನು.

ಟಿಪ್ಪುವು ಒಂದು ಸಾವಿರ ರೂಪಾಯಿ ಉತ್ಪನ್ನ ಬರುವ ತಿಮ್ಮಾಪುರ ಗ್ರಾಮವನ್ನು ಹಜರತ್ ಖಾನ ದರ್ಗಾದ ವ್ಯವಸ್ಥೆ ಮತ್ತು ಅದು ಪ್ರತಿ ವರುಷವೂ ಅಲ್ಲಿ ನಡೆಸುತ್ತಿದ್ದ ಉರುಸಿನ ವೆಚ್ಚಕ್ಕೆಂದು ಉಂಬಳಿಯಾಗಿ ಕೊಟ್ಟನು. ಈ ದರ್ಗಾ ಸವಣೂರಿನ ಮಧ್ಯದಲ್ಲಿಯೇ ಇದ್ದಿತ್ತು. ನಾಲ್ಕು ನೂರು ರೂಪಾಯಿ ಉತ್ಪನ್ನ ಬರುತ್ತಿದ್ದ ದ್ಯಾಮನಕೊಪ್ಪ ಅನ್ನುವ ಇನೊಂದು ಹಳ್ಳಿಯನ್ನು ಅಸರ್ -ಇ-ಶರೀಫ್ ಅನ್ನುವವನಿಗೆ ವೆಚ್ಚಕ್ಕೆಂದು ದಾನವನ್ನಿತ್ತನು. ಮೊಗಲರ ಕಾಲದಿಂದಲೂ ಇಂತಹ ದಾನಗಳನ್ನು ಕೊಡುವ ಸಂಪ್ರದಾಯವಿತ್ತು.. ಅದನ್ನೇ ಟಿಪ್ಪು ಈಗ ಮುಂದುವರೆಸಿದ್ದನು.

ಟಿಪ್ಪು ಸವಣೂರಿನಿಂದ ತೆರಳುವಾಗ, ಮುಂದೆ ತನಗೆ ತೊಂದರೆಯನ್ನೀಬಾರದೆಂದು ಬಂಕಾಪುರ ಕೋಟೆಯನ್ನು ಭಗ್ನಗೊಳಿಸಿ, ಸವಣೂರಿನ ಸುತ್ತಲಿದ್ದ ಶತ್ರುಗಳ ಕೇಂದ್ರ ಗಳನ್ನು ಹಾಳುಗೆಡವಿ, ಅಬ್ದುಲ್ ಹಕೀಮಖಾನನ ಮಗ ಅಬ್ದುಲ್ ಖೈರಖಾನನನ್ನು ಕರೆದುಕೊಂಡು ಮುಂದೆ ನಡೆದನು. ಯುವರಾಜ ಖೈರಖಾನನು ಹೈದರನ ಮಗಳನ್ನು ಮದುವೆಯಾದಂದಿನಿಂದ ಶ್ರೀರಂಗಪಟ್ಟಣದಲ್ಲಿಯೇ ಮನೆ ಅಳಿಯನಂತೆ ಇರುತ್ತಿದ್ದನು. ಸವಣೂರಿಗೆ ಅವನು ಬಂದಿರಲೇ ಇಲ್ಲ. ಈಗ ಕೂಡ ಟಿಪ್ಪು ಮತ್ತೆ ಅವನನ್ನು ಶ್ರೀರಂಗಪಟ್ಟಣಕ್ಕೆ ಕರೆದೊಯ್ದನು.

ಸವಣೂರಿನಿಂದ ಪಲಾಯನ ಮಾಡಿದ ಅಬ್ದುಲ್ ಹಕೀಮಖಾನ ನವಾಬನು ಪರಿವಾರದೊಂದಿಗೆ ಅಲ್ಲಲ್ಲಿ ತಂಗಿ ಮೊದಲು ವಿಜಾಪುರಕ್ಕೆ ಹೋದನು. ಅವನಿಗೆ ಕಾಲಿನ ಸಂದುಗಳು ನೋಯ್ಯುಹತ್ತಿದ್ದರಿಂದ ಅವನು ಅದರ ಉಪಚಾರಕ್ಕಾಗಿ ವಿಜಾಪುರದಲ್ಲಿ ಒಂದು ವರುಷ ನಿಂತನು. ಅವನು ಶಾರೀರಿಕವಾಗಿಯಲ್ಲದೇ ಮಾನಸಿಕವಾಗಿಯೂ ಬಳಲಿದ್ದನು. ಅಲ್ಲಿಂದ ಮುಂದೆ ಮಿರಜಕ್ಕೆ ಹೋಗಿ ವಾಸ್ತವ್ಯ ಮಾಡಿದನು. ಅದು ಬಾಳಾಸಾಹೇಬ ಪಟವರ್ಧನರ ಜಹಗೀರಾಗಿತ್ತು. ಅಲ್ಲಿ ನಿಂತು ಕೆಲಕಾಲ ವಿಶ್ರಾಂತಿ ಪಡೆದನು. ಅಲ್ಲಿಂದ ಪುಣೆಗೆ ಹೋಗುವಾಗ ತಾನು ತಂದಿದ್ದ 'ದಲ್ ಬದಲ್ ' ಮತ್ತು 'ಜಫರ್ ತಬಲ್ ' ಎಂಬ ಎರಡು ಯುದ್ಧದ ನಗಾರಿಗಳನ್ನು ಮತ್ತು ಕೆಲ ಪರಿವಾರದ ಸದಸ್ಯರನ್ನು ಮಿರಜದಲ್ಲಿ ಬಿಟ್ಟು ಮುಂದೆ ನಡೆದನು. ಮಿರಜದಿಂದ ಹಕೀಮಖಾನನಿಗೆ ಪುಣೆಯನ್ನು ಮುಟ್ಟಲು ಎಷ್ಟೋ ದಿನಗಳ ಹಿಡಿದವು.

ಅಬ್ದುಲ್ ಹಕೀಮಖಾನ ನವಾಬನು ಪುಣೆಗೆ ಬರುವ ಹಾದಿಯನ್ನೇ ಪೇಶ್ವೆಯವರು ಆತುರದಿಂದ ಕಾಯುತ್ತಿದ್ದರು. ಹಕೀಮಖಾನನು ಪುಣೆಯ ಸಮೀಪಕ್ಕೆ ಬಂದನು ಅನ್ನುವ ವಾರ್ತೆ ತಿಳಿದೊಡನೆ ಸವಾಯಿ ಮಾಧವರಾಯನು ಲೋಣಿ ಅನ್ನುವ ಹಳ್ಳಿಯ ಹತ್ತಿರ ಅವನನ್ನು ಸ್ವಾಗತಿಸಿ, ಕರೆತರಲು ತನ್ನ ದರ್ಬಾರದ ಅಧಿಕಾರಿಗಳನ್ನು ಕಳಿಸಿದನು. ಸವಾಯಿ ಮಾಧವರಾಯನ ತಂದೆಯ ಅಣ್ಣಾ, ಸಿಂಹಾಸನವನ್ನು ಆಳಿದ ಮಾಧವರಾವ್ ಪೇಶ್ವೆ, ಸವಣೂರಲ್ಲಿ ಅಬ್ದುಲ್ ಹಕೀಮಖಾನನ ಅರಮನೆಯಲ್ಲಿಯೇ ಹುಟ್ಟಿದ್ದನು. ಮಾಧವರಾವನು ಹಕೀಮಖಾನನನ್ನು ಸೋದರಮಾವನಂತೆ ಗೌರವದಿಂದ ಕಾಣುತ್ತಿದ್ದುದನ್ನು ಸವಾಯಿ ಮಾಧವರಾಯನು ಕೇಳಿ ತಿಳಿದಿದ್ದನು. ಇದರಿಂದ ಸವಾಯಿ ಮಾಧವರಾಯನಿಗೆ ನವಾಬ ಹಕೀಮಖಾನನ ಬಗ್ಗೆ ಗೌರವವಿತ್ತು. ಸವಾಯಿ ಮಾಧವರಾಯನು ಹಕೀಮಖಾನನು ಪುಣೆಗೆ ಬಂದೊಡನೆ, ಆದರದಿಂದ ಸ್ವಾಗತಿಸಿ 'ವಾನೋಡಿ' ಅನ್ನುವಲ್ಲಿ ವಾಸ್ತವ್ಯದ ಎಲ್ಲ ವ್ಯವಸ್ಥೆಯನ್ನು ಮಾಡಿಸಿ, ಕರೆತಂದನು. ಹಕೀಮಖಾನ ನವಾಬನ ಅಲ್ಲಿ ಮೂರು ವರುಷ ಕಳೆದನು. ಹಕೀಮಖಾನನು ಸವಣೂರನ್ನು ತ್ಯಜಿಸಿ ಬರುವಾಗ ಅವನು ಟಿಪುವಿನೊಡನಿದ್ದ ಎಲ್ಲ ಸಂಬಂಧಗಳನ್ನೂ ಕಡಿದುಕೊಂಡು ಬಂದಿರುವನೆಂದು ಪೇಶ್ವೆ ಅಧಿಕಾರಿಗಳು ಹಕೀಮಖಾನನಿಂದ ಖಚಿತಪಡಿಸಿಕೊಂಡರು. ಹಕೀಮಖಾನನು ನಿರಾಶ್ರಿತನಾಗಿ ತಮ್ಮ ಆಶ್ರಯಕ್ಕೆ ಬಂದಿರುವನೆಂದು ಪೇಶ್ವೆಯವರು ಅವನಿಗೆ ಸಹಾಯ ಮಾಡಲು ಒಪ್ಪಿಕೊಂಡರು. ಪೇಶ್ವೆಯವರು ನವಾಬನೊಡನೆ ಒಂದು ಒಪ್ಪಂದವನ್ನು ಮಾಡಿಕೊಂಡು, ಅವನ ತಾಲೂಕುಗಳನ್ನೆಲ್ಲ ಐದು ವರುಷಗಳವರೆಗೆ ತಾವು ವ್ಯವಸ್ಥೆಗೊಳಿಸುವುದಾಗಿ ಒಪ್ಪಿ, ಅದರ ಪರಿಹಾರವೆಂದು ಅಬ್ದುಲ್ ಹಕೀಮಖಾನನಿಗೆ ಪ್ರತಿ ತಿಂಗಳು ನಾಲ್ಕು ಸಾವಿರ ರೂಪಾಯಿ ಪಿಂಚಣಿ ಕೊಡಹತ್ತಿದರು. ಹಕೀಮಖಾನನಿಗೆ ಈಗ ಹಾಲು ಹಿಂಡುವ ಹಸುವನ್ನು ಬಿಟ್ಟು, ಹಾಲಿನ ಗಿಂಡಿಯನ್ನು ಉಳಿಸಿಕೊಳ್ಳಲು ಹೆಣಗುವಂತಾಯಿತು.

ಈ ದುಸ್ಥಿತಿಯಲ್ಲಿಯೇ ಹಕೀಮಖಾನ ನವಾಬನು ಮೂರು ವರುಷ ಪುಣೆಯಲ್ಲಿ ಇದ್ದನು. ಆಗ ಹಕೀಮಖಾನನು ನಿತ್ಯವೂ ಮೇಲೆ ಮುಖ ಮಾಡಿ "ಸುಭಾನುಲ್ಲಾ, ನನಗಾವ ಗತಿಯನ್ನು ಕೊಟ್ಟಿರುವಿ? ನನ್ನೆದುರು ಹಾಡಿದವನಿಗೆ, ನಾನು ನಾಲ್ಕು ಸಾವಿರ ರೂಪಾಯಿ ಬಹುಮಾನವನ್ನು ಕೊಡುತ್ತಿದ್ದೆ. ಆದರೆ ನಾನೀಗ ಆ ನಾಲ್ಕು ಸಾವಿರ ರೂಪಾಯಿಗಳಲ್ಲಿ ಜೀವಿಸಬೇಕಲ್ಲ"ಎಂದು ಮಿಡಿಯುತ್ತಿದ್ದನು. ಆಗಾಗ ಕಣ್ಣೀರು ಸುರಿಸುತ್ತಿದ್ದನು.

ಪೇಶ್ವೆಯವರು ಮೂರು ನಾಲ್ಕು ವರುಷಗಳ ನಂತರ ಶ್ರೀರಂಗಪಟ್ಟಣದ ಮೇಲೆ ದಂಡೆತ್ತಿ ಹೋಗುವ ಸಿದ್ಧತೆಗಳನ್ನು ಮಾಡಿದರು. ಪೇಶ್ವೆಯವರು ಪರಶುರಾವ ಭಾವೂ ಪಟವರ್ಧನನ ತಲೆಗೆ ಜರೀ ಪಟಗಾ ಸುತ್ತಿ, ಸೇನಾಪತಿ ಪದವಿಯನ್ನು ಕೊಟ್ಟು, ಒಂದು ಲಕ್ಷ ಸೈನ್ಯವನ್ನು ಅವನ ಸಹಾಯಕ್ಕಿತ್ತು, ಅವನನ್ನು ಮೂರನೇ ಮೈಸೂರು ಯುದ್ಧಕ್ಕೆ

(೧೭೯೦-೯೨) ಕಳಿಸಿದರು. ಅವನ ಜೊತೆ ಅಬ್ದುಲ್ ಹಕೀಮಖಾನ ಬಹದ್ದೂರ ನವಾಬನನ್ನೂ ಕಳಿಸಿದರು.

ಮರಾಠರಿಗೆ ಪರಶುರಾಮ ಭಾವೂನನ್ನು ಮೈಸೂರು ಯುದ್ಧಕ್ಕೆ ಕಳಿಸಬೇಕಿತ್ತು. ಕಾರಣ ಟಿಪುವಿನೊಡನೆಹೋರಾಡಲು ಕಾರ್ನವಾಲೀಸನು ಹೈದರಾಬಾದ್ ನಿಜಾಮ, ಮರಾಠ ಮತ್ತು ಇಂಗ್ಲೀಷರ ಒಂದು ಮಿತ್ರಕೂಟವನ್ನು ಏರ್ಪಡಿಸಿದ್ದನು. ಈ ಮಿತ್ರಕೂಟವನ್ನು ಮರಾಠರು ಸೇರಬಾರದೆಂದು ಟಿಪು ಸರ್ವ ಪ್ರಯತ್ನ ಮಾಡಿದ್ದನಲ್ಲದೆ,ಪುಣೆಗೆ ಚಿನ್ನದ ಚೀಲಗಳನ್ನು ಹಾಗೂ ತನ್ನ ವಕೀಲನನ್ನು ಕಳಿಸಿದ್ದನು. ಆದರೆ ಅದರಿಂದ ಪ್ರಯೋಜನವಾಗಲಿಲ್ಲ. ಈ ಯುದ್ಧದಲ್ಲಿ ಮೊದಮೊದಲು(೧೭೯೧)ರ ಮಧ್ಯಭಾಗದಲ್ಲಿ) ವಾಯುಗುಣ ವೈಪರೀತ್ಯದಿಂದಲೂ, ಆಯಾಸದಿಂದಲೂ, ಸಾಂಕ್ರಾಮಿಕ ರೋಗಗಳಿಂದಲೂ, ಧವಸ ಧಾನ್ಯಗಳ ಕೊರತೆಯಿಂದಲೂ ಮಿತ್ರಕೂಟದ ಇಂಗ್ಲೀಷ್ ಸೈನ್ಯ ಕುಸಿದು ಬಿದ್ದಿತು. ಕಾರ್ನವಾಲೀಸನು ಅಂಜಿ ಶ್ರೀರಂಗಪಟ್ಟಣದಿಂದ ಬೆಂಗಳೂರಿಗೆ ಪಲಾಯನ ಮಾಡಿದನು. ಮುಂದೆ ೧೭೯೧ರ ಮಳೆಗಾಲದಲ್ಲಿ ಇಂಗ್ಲೀಷರು ಮತ್ತೆ ಆಕ್ರಮಣಕ್ಕೆ ಸಿದ್ಧರಾಗಿ ೧೭೯೨ರಲ್ಲಿ ಟಿಪುವನ್ನು ಸೋಲಿಸಿದರು. ಟಿಪು ಯುದ್ಧ ಮಾಡಿ ಪ್ರಯೋಜನವಿಲ್ಲವೆಂದು, ಶಾಂತಿ ಒಪ್ಪಂದವನ್ನು ಮಾಡಿಕೊಂಡನು. ಅದರಿಂದ ಟಿಪು ಬದುಕಿ ಉಳಿದನು.

ಈ ಮಿತ್ರಕೂಟವನ್ನು ಸೇರಲು ಪೇಶ್ವೆಯವರ ಸೇನಾಪತಿ ಪರಶುರಾಮ ಭಾವು ಸವಣೂರ ಮೇಲಿಂದ ತನ್ನ ಸೈನ್ಯವನ್ನು ತೆಗೆದುಕೊಂಡು ನಡೆದನು. ಈಗ ಟಿಪು ಅತ್ತ ತನ್ನ ಲಕ್ಷ್ಯವನ್ನು ಪೂರೈಸಬೇಕಾಗಿದ್ದರಿಂದ ಪರಶುರಾಮ ಭಾವೂ ಆಯಾಸವಿಲ್ಲದೆ, ಸವಣೂರಿನ ಎಲ್ಲ ಪ್ರದೇಶಗಳನ್ನೂ ತನ್ನ ವಶಕ್ಕೆ ತೆಗೆದುಕೊಂಡನು. ಈಗ ಅವನಿಗೆ ಯಾರ ಪ್ರತಿಭಟನೆಯೂ ಇರಲಿಲ್ಲ. ಪರಶುರಾಮ ಭಾವೂ ತೆಗೆದುಕೊಂಡ ತನ್ನ ಒಡೆತನದ ಪರಗಣಾ, ಮಹಲು, ಪೇಠಾಗಳನ್ನು ತನಗೆ ಮರಳಿ ಕೊಡಬಹುದೆಂದು ನವಾಬ ಹಕೀಮಖಾನನು ಬಕಪಕ್ಷಿಯಂತೆ ನೋಡುತ್ತಿದ್ದನು. ಸವಣೂರಿನ ಪ್ರದೇಶವನ್ನೆಲ್ಲ ಮರಳಿ ಕೊಡುವುದಾಗಿ ಸವಾಯಿ ಮಾಧವರಾವ ಹಕೀಮಖಾನನಿಗೆ ಆಶ್ವಾಸನವನ್ನಿತ್ತನು. ಎಲ್ಲ ಪ್ರದೇಶಗಳೂ ಮರಾಠರ ಸ್ವಾಧೀನಕ್ಕೆ ಬಂದೊಡನೆ, ಪೇಶ್ವೆಯವರು "ನಿನ್ನ ಎಲ್ಲ ಪ್ರದೇಶಗಳನ್ನು ಸಾಧ್ಯವಾದಷ್ಟು ತೀವ್ರ ಮರಳಿ ನಿನಗೆ ಕೊಡುತ್ತೇವೆ. ಈಗ ಎಪ್ಪತ್ತು ಸಾವಿರ ಹೊನ್ನ (ಎರಡು ಲಕ್ಷ ಮೂವತ್ತೈದು ಸಾವಿರ) ಉತ್ಪನ್ನ ಬರುವ ಕಾರಡಿಗಿ ಮಹಲಿನ ಹಳ್ಳಿಗಳನ್ನು ಮಾತ್ರ ನಿನಗೆ ಒಪ್ಪಿಸಿಕೊಡುತ್ತೇವೆ. ಇದರಿಂದ ನೀನು ಅಳು ಹೋಳುಗಳ ವೆಚ್ಚವನ್ನು ನಿಭಾಯಿಸಿಕೊ"ಎಂದು ಹೇಳಿ,ಕಾರಡಗಿ ಮಹಲನ್ನು ಬಿಟ್ಟುಕೊಟ್ಟು, ಹಕೀಮಖಾನನ್ನು ಸವಣೂರಲ್ಲಿ ನೆಲೆಸಿಲ್ಲುವಂತೆ ಮಾಡಿದರು. ಪರಶುರಾಮ ಭಾವೂ ತನ್ನ ಸೈನ್ಯದೊಂದಿಗೆ ಮಿತ್ರಕೂಟವನ್ನು ಸೇರಲು ಮುಂದೆ ಶ್ರೀರಂಗಪಟ್ಟಣಕ್ಕೆ ಪ್ರಯಾಣವನ್ನು ಬೆಳೆಸಿದನು. ಮಿತ್ರಕೂಟದಿಂದ ಟಿಪುವನ್ನು ಸೋಲಿಸಿ, ಪರಶುರಾಮ ಭಾವೂ ಮರಳಿ

ಸವಣೂರಿಗೆ ಬಂದು, ಕಾರಡಗಿ ಮಹಲಿನ ಹಳ್ಳಿಗಳನ್ನು ಬಿಟ್ಟು, ಉಳಿದೆಲ್ಲ ಸವಣೂರಿನ ಪ್ರದೇಶಗಳ ಮೇಲೆ ಮರಾಠ ಆಡಳಿತವನ್ನು ಹೇರಿ ಪುಣೆಗೆ ತೆರಳಿದನು.

ಪರಶುರಾಮ ಭಾವೂ ಪುಣೆಗೆ ಹೋದ ಮೇಲೆ ಪೇಶ್ವೆಯವರು ತನಗೆ ತನ್ನ ಪ್ರದೇಶಗಳನ್ನೆಲ್ಲ ಮರಳಿ ಕೊಡಬಹುದೆಂದು ಹಕೀಮಖಾನ ನವಾಬನು ಯಕ್ಷಿಣಿಯಂತೆ ಹಾದಿಯನ್ನು ಕಾಯಹತ್ತಿದನು. ಹಕೀಮಖಾನನು ಒಂದೇ ಸಮನೆ ಪೇಶ್ವೆಯವರನ್ನು ಒತ್ತಾಯಿಸಲು ಅವರು ಸ್ಪಷ್ಟವಾಗಿ "ಈ ಯುದ್ಧಕ್ಕೆ ನಾವು ಅಪಾರ ಹಣವನ್ನು ವ್ಯಯಿಸಿದ್ದೇವೆ. ಅದಕ್ಕಾಗಿ ಸಾಹುಕಾರರಿಗೆ ಕರ್ನಾಟಕದ ಈ ಪ್ರದೇಶವನ್ನು ಒತ್ತೆ ಹಾಕಿ ಐದು ಲಕ್ಷ ಸಾಲವನ್ನು ತಂದಿದ್ದೇವೆ. ಆ ಸಾಲವು ತೀರಿದೊಡನೆ ನಾವು ಖಂಡಿತ ನಿಮ್ಮ ಪ್ರದೇಶವನ್ನು ನಿಮಗೆ ಒಪ್ಪಿಸುವೆವು"ಎಂದು ಹೇಳಿದರು. ಇದರ ಪರಿಣಾಮವಾಗಿ ಕಾರಡಿ ಮಹಲಿನ ಉತ್ಪನ್ನವನ್ನು ಬಿಟ್ಟು ಉಳಿದೆಲ್ಲ ಪ್ರದೇಶಗಳ ಹಣವನ್ನು ಪೇಶ್ವೆಯವರ ಪ್ರತಿನಿಧಿಗಳು ತೆಗೆದುಕೊಂಡು ಪುಣೆಗೆ ಒಪ್ಪಿಸುತ್ತಿದ್ದರು. ಈ ಕಾರಡಗಿ ಮಹಲು ಕೆಲ ವರುಷ ಹಕೀಮಖಾನನ ಬಳಿ ಉಳಿಯಿತು. ಮುಂದೆ ಪೇಶ್ವೆಯವರು ಅದನ್ನೂ ಕಿತ್ತುಕೊಂಡು ತಿಂಗಳಿಗೆ ನಾಲ್ಕು ಸಾವಿರ ರೂಪಾಯಿಗಳಂತೆ ವರ್ಷಕ್ಕೆ ನಲವತ್ತೆಂಟು ಸಾವಿರ ರೂಪಾಯಿ ಪಿಂಚಣಿಯನ್ನು ಗೊತ್ತುಪಡಿಸಿದರು. ಹಕೀಮಖಾನನು ೧೮೦೫ರಲ್ಲಿ ಸಾಯುವವರೆಗೂ ಈ ಪಿಂಚಣಿಗಾಗಿ ಪ್ರತಿ ತಿಂಗಳೂ ಪರಿತಪಿಸಬೇಕಾಗುತ್ತಿತ್ತು.

ಅಬ್ದುಲ್ ಹಕೀಮಖಾನ ಬಹದ್ದೂರ ನವಾಬನು ಅತ್ಯಂತ ಸುಂದರನಿದ್ದು, ಅವನ ಮುಖವನ್ನು ನೋಡಲು ಅನೇಕ ಸ್ತ್ರೀಯರು ತವಕಪಡುತ್ತಿದ್ದರು. ಅವನು ಅದೆಷ್ಟು ಸದೃಢನಿದ್ದನೆಂದರೆ, ಅವನನ್ನು ಹೊತ್ತುಕೊಂಡು ಹೋಗುತ್ತಿದ್ದ ಮೇಣೆಯ ಬೋವಿಗಳ ಹೆಗಲುಗಳು ನೋಯುತ್ತಿದ್ದವು. ಅದಕ್ಕೆ ಅವನು ಹೆಚ್ಚಾಗಿ ಆನೆಯ ಮೇಲಿನ ಅಂಬಾರಿಯಲ್ಲಿ ಕುಳಿತೇ ಪ್ರವಾಸವನ್ನು ಮಾಡುತ್ತಿದ್ದನು. ಒಮ್ಮೆ ಒಬ್ಬರು ರತ್ನಖಚಿತವಾದ ಲಾಹೋರಿ ಬಿಲ್ಲನ್ನು ತೆಗೆದುಕೊಂಡು ಬಂದರು. ಸಾಮಾನ್ಯರಿಗೆ ಅದನ್ನು ಎತ್ತಲು ಸಾಧ್ಯವಿರಲಿಲ್ಲ. ಆದರೆ ಹಕೀಮಖಾನ ಬಹದ್ದೂರನು ಅದನ್ನು ಹೂವಿನ ಹಾರದಂತೆ ಸರಾಗವಾಗಿ ಎತ್ತಿದನು. ಇದನ್ನು ನೋಡಿ ಎಲ್ಲರಿಗೂ ಆಶ್ಚರ್ಯ.

ಮಹಬೂಬ-ಇ-ಸುಭಾನಿ ಉರಸು ನಡೆಯುತ್ತಿದ್ದಾಗ ಅನೇಕರು ನೆರೆದಿದ್ದರು. ಆಗ ಅಲ್ಲಿ ಹಾಸಿದ್ದ ಅತ್ಯಂತ ಬೆಲೆಬಾಳುವ ಗಾಲೀಚಿನ ಮೇಲೆ ಯಾರೋ ಒಬ್ಬರು ಕೈತಪ್ಪಿ ಉರಿಯುವ ಕರ್ಪೂರವನ್ನು ಚೆಲ್ಲಿದರು. ಅದರ ಉರಿ ಜಮಖಾನೆಗೆ ತಗಲಿತು. ಈ ಜಮಖಾನೆಗಳ ವ್ಯವಸ್ಥೆಯನ್ನು ನೋಡುತ್ತಿದ್ದ ಮಹಮ್ಮದಖಾನನು ಆಗ ಆ ಸ್ಥಳದಲ್ಲಿ ಇರಲಿಲ್ಲ. ಆಗ ಹಕೀಮಖಾನನೇ ಸ್ವತಃ ಆ ಬೆಂಕಿಯನ್ನು ನಂದಿಸಿ, ಬೇರೆ ಆಳುಗಳನ್ನು ಕರೆತಂದು ಅದನ್ನು ಹೊಲಿಸಿ ಮೊದಲಿನ ಹಾಗೆ ಕಾಣುವಂತೆ ಮಾಡಿದನು. ಹಕೀಮಖಾನನ ಘ್ರಾಣೇಂದ್ರಿಯವು ಅತ್ಯಂತ ತೀಕ್ಷ್ಣವಾಗಿತ್ತು. ಊಟಕ್ಕೆ ಕುಳಿತಾಗ ಒಮ್ಮೆ ತುತ್ತನ್ನು

ತೆಗೆದುಕೊಂಡು ಬಾಯಿಗೆ ಹಾಕಿಕೊಳ್ಳಬೇಕು ಅನ್ನುತ್ತಿರುವಾಗಲೇ ಅನ್ನದಿಂದ ಸುಟ್ಟ ವಾಸನೆ ಬಂದಿತು. ಅವನು ತಕ್ಷಣ ಅಡಿಗೆಯನ್ನು ಮಾಡುತ್ತಿದ್ದ ರಹೀಮಖಾನನಿಗೆ ಬರಲು ಹೇಳಿಕಳಿಸಿದನು. ಪಾಪ, ಅವನು ಅಂಜಿ ತನಗಾವ ಶಿಕ್ಷೆ ಕಾದಿದೆಯೋ ಎಂದು ಹಕೀಮಖಾನರ ಮುಂದೆ ಹಾಜರಾಗದೇ ಕಣ್ಣುತಪ್ಪಿಸಿದನು. ಹಕೀಮಖಾನನು ನಂತರ ಯಾವ ಸರಕಾರಿ ಅಂಗಡಿಯಿಂದ ಈ ಅಕ್ಕಿಯನ್ನು ಕೊಂಡು ತಂದಿದ್ದರೋ ಅಲ್ಲಿಯ ಅಧಿಕಾರಿಯನ್ನು ಕರೆಸಿದನು. ಆಗ ಆ ಅಧಿಕಾರಿಯು ಯಾವ ವ್ಯಾಪಾರಿಯಿಂದ ತಾನು ಅಕ್ಕಿಯನ್ನು ತಂದಿದ್ದನೋ ಆ ಅಕ್ಕಿ ವ್ಯಾಪಾರಿಯನ್ನು ಕರೆತಂದನು. ನಂತರ ಅವು ಮೂಲತಃ ಹೊಲದಿಂದ ಹಾಗೆ ಬಂದಿರುವವೆಂದು ತಿಳಿದೊಡನೆ, ಯಾರ ಮೇಲೂ ಕ್ರಮವನ್ನು ತೆಗೆದುಕೊಳ್ಳಲಿಲ್ಲ.

ಹಕೀಮಖಾನನ ದೊಡ್ಡ ದೌರ್ಬಲ್ಯವೆಂದರೆ ಅವನಿಗಿದ್ದ ಹೆಣ್ಣಿನ ವ್ಯಾಮೋಹ. ಹಕೀಮಖಾನ ರಾಜ್ಯವನ್ನು ಕಳೆದುಕೊಂಡರೂ, ಮದಿರೆ, ಮದಿರಾಕ್ಷಿಯರ ಗುಂಗಿನಲ್ಲಿಯೇ ಕಾಲವನ್ನು ಕಳೆಯುತ್ತಿದ್ದನು. ಹಕೀಮಖಾನನು ಸವಿಗಾರನಿದ್ದನು. ಅವನಿಗೆ ಸಮೀಚೀನ ಭೋಜನವು ಬೇಕಾಗುತ್ತಿತ್ತು. ಬೆಳಿಗ್ಗೆ ನಾಷ್ಟಕ್ಕೆ ಬ್ರೆಡ್, ಕಬಾಬ್ (ಹುರಿದ ಮಾಂಸ) ಮತ್ತು ಹಲ್ವಾ ತಿನ್ನುತ್ತಿದ್ದನು. ಮಧ್ಯಾಹ್ನ ಎರಡು ಗಂಟೆಗೆ ಬಿರಿಯಾನಿ ಮತ್ತು ತುಪ್ಪವನ್ನು ಉಣ್ಣುತ್ತಿದ್ದನು. ಆ ತುಪ್ಪಕ್ಕೆ ಕೇಸರಿ ಬೆರೆಸುತ್ತಿದ್ದರು. ನಂತರ ವಿವಿಧ ಫಲಗಳ ಭಕ್ಷಣೆ ಮಾಡುತ್ತಿದ್ದನು. ರಾತ್ರಿ ಖಾರದ ಪದಾರ್ಥಗಳಾದ ಕಬಾಬ, ಸಮೋಸಾ, ಹುರಿದ ಇಡೀ ಕೋಳಿ ಅಥವಾ ಹುಂಜ, ವಿವಿಧ ಜಾತಿಯ ಮೀನುಗಳನ್ನು ತಿನ್ನುತ್ತಿದ್ದನು. ಹಕೀಮಖಾನ ನವಾಬನ ಮೂರು ಹೊತ್ತಿನ ಊಟವನ್ನು ತೂಗಿದರೆ ಅದು ಒಂದು 'ಅಸರ್ -ಇ-ಪಕ್ಕಾ' ಅಥವಾ ಹತ್ತು ಕೆ.ಜಿ.ಯಷ್ಟು ಇರುತ್ತಿತ್ತು. ಅವನು ವೈವಿಧ್ಯಮಯ ಮದ್ಯಗಳನ್ನು ಸೇವಿಸುತ್ತಿದ್ದನು. ದೇಹಕ್ಕೆ ಶಕ್ತಿಯನ್ನೀಯುವ ಯುನಾನಿ ಕಾಡಾಗಳನ್ನು ಕುಡಿಯುತ್ತಿದ್ದನು. ಸದಾ ಹಗಲು ಬೇಟೆಗೆ ಹೋಗಿ ಹಕ್ಕಿಗಳನ್ನು ಹೊತ್ತುಕೊಂಡು ಬರುತ್ತಿದ್ದನು. ಪ್ರತಿ ರಾತ್ರಿ ಹಲವಾರು ಸಲ ಸ್ನಾನವನ್ನು ಮಾಡುತ್ತಿದ್ದನು.

ಅಬ್ದುಲ್ ಹಕೀಮಖಾನನು ಅತ್ಯಂತ ಶೋಕಿ ಮನುಷ್ಯನಾಗಿದ್ದನು. ಮಗ ಅಜೀಜಮೀಯಾನ್ ಅಕ್ಷರಾಭ್ಯಾಸದಂದು ಪ್ರಾರಂಭವಾದ ವಿಜೃಂಭಣೆಯ ಸಮಾರಂಭವು ಒಂದು ತಿಂಗಳವರೆಗೂ ನಡೆಯಿತು. ಅಂತಃಪುರದ ಪರಿವಾರದ ಮುಂದೆ ಸಂಗೀತ, ನಾಟ್ಯಗಳು, ಸಂಗೀತ ಕಛೇರಿಗಳು, ಡೊಳ್ಳು ಭಾರಿಸುವುದು ಮೊದಲಾದ ಕಾರ್ಯಕ್ರಮಗಳು ಮೇಲಿಂದ ಮೇಲೆ ನಡೆಯುತ್ತಿದ್ದವು. ಹಕೀಮಖಾನನು ತನ್ನ ಮಕ್ಕಳಿಗೆ ವಿದ್ಯಾಭ್ಯಾಸದ ಜೊತೆ ಭಾಷಣ ಕಲೆಯನ್ನು ಕಲಿಸುವ ವ್ಯವಸ್ಥೆ ಮಾಡಿದ್ದನು. ಹಬ್ಬದ ಸಮಾರಂಭಗಳಲ್ಲಿ ಹಕೀಮಖಾನನು ಜನರಿಗೆ ಮೀಠಾಯಿಗಳನ್ನು ಹಂಚುತ್ತಿದ್ದನು. ನವಾಬ ಹಕೀಮಖಾನನ್ನು ಸಂಪ್ರೀತಿಗೊಳಿಸಲು ಸೂರತ ಬಂದರದ ಅಧಿಕಾರಿ, ನವಾಬ ಕಾಮಗಾರಖಾನ ಮತ್ತು

ಆದವಾನಿ ನವಾಬ ಸೂಜಾ ಉಲ್ಕ-ಮುಲ್ಕರು ಶುಭಾಶಯಗಳೊಂದಿಗೆ ಸೋನೇರಿ ಕಾಗದಗಳಲ್ಲಿ ಕಟ್ಟಿದ ಉಂಡೆಗಳನ್ನು ಒಂದು ಬಂಡಿಯ ತುಂಬಾ ಹೇರಿ ಸವಣೂರಿಗೆ ಕಳಿಸಿದ್ದರು. ನವಾಬನು ಸಂತೋಷ ಕೂಟವನ್ನು ಏರ್ಪಡಿಸಿ ಅವುಗಳನ್ನು ಎಲ್ಲರಿಗೂ ಹಂಚಿದನು. ಪ್ರತಿಷ್ಠಿತರಿಗೆ ಆಗಾಗ ಭರ್ಜರಿ ಮೇಜವಾನಿಗಳನ್ನು ಏರ್ಪಡಿಸುತ್ತಿದ್ದನು.

ದಿಲ್ಲಿಯ ಬಾದಶಹನಾಗಿದ್ದ ಶಹಾ ಆಲಂ ಬಾದಶಹಾ ಗಾಝಿ ಸವಣೂರು ರಾಜಧಾನಿಗೆ ಒಂದು ಲಕ್ಷ ರೂಪಾಯಿ, ನವಾಬನಿಗೆ ದಿಲಾವರಜಂಗ ಬಹದ್ದೂರ ಅನ್ನುವ ಬಿರುದು, ಐದು ಸಾವರಿ ರೂಪಾಯಿಗಳ ಸ್ಥಾನ ಮತ್ತು ಐದು ಸಾವಿರ ಅಶ್ವಗಳ ಸರದಾರಿಕೆಯನ್ನು ೧೭೭೧ರ ಹೊತ್ತಿಗೆ ಕಳಿಸಿ ಗೌರಿವಿಸಿದ್ದನು. ಆಗ ಅವನು ಒಂದು ಸನದನ್ನು ಕೊಟ್ಟಿದ್ದನು. ಇದರಿಂದ ಹಕೀಮಖಾನನ ಗೌರವವು ಹೆಚ್ಚಿತು.

ಮೂರನೇ ಮೈಸೂರು ಯುದ್ಧವಾದ ಮೇಲೆ ಟಿಪು ತನ್ನ ಸೈನ್ಯವನ್ನು ಧಾರವಾಡದಿಂದ ಮರಳಿ ಕರೆಸಿಕೊಂಡನು. ಆಗ ಅಬ್ದುಲ್ ಹಕೀಮಖಾನನು ರಾಜ್ಯವನ್ನು ಕಳೆದುಕೊಂಡಿದ್ದರೂ ರಾಜಧಾನಿ ಸವಣೂರಿನಲ್ಲಿಯೇ ಇದ್ದನು.೧೭೯೨ರಲ್ಲಿ ಯುದ್ಧವು ಕೊನೆಗೊಂಡಾಗ, ಯುರೋಪಿಯನ್ ಸೈನ್ಯವು ಶ್ರೀರಂಗಪಟ್ಟಣದಿಂದ ಮರಳಿ ಬರಹತ್ತಿತು. ಆಗ ಕ್ಯಾಪ್ಟನ್ ಲಿಟಲ್‌ನ ಒಂದು ಸೈನ್ಯದ ತುಕಡಿ ಸವಣೂರಲ್ಲಿ ವಿಶ್ರಾಂತಿಗೆಂದು ನಿಂತಿತು. ಅವರು ಸವಣೂರಿಗೆ ಬಂದೊಡನೆ, ಹಕೀಮಖಾನನಿಗೆ ತಾವು ಬಂದಿರುವುದಾಗಿ ತಿಳಿಸಿದರು. ಅವನ ಅಪ್ಪಣೆ ಪಡೆದು ಅವರು ತಮ್ಮ ಗೌರವಗಳನ್ನು ಸಲ್ಲಿಸಿ ಹೋಗಲು ನವಾಬನ ಅನುಮತಿ ಕೇಳಿದರು. ಈ ಯೂರೋಪಿಯನ್ ಸೈನಿಕರು ಪುಣೆಯತ್ತ ನಡೆದಿದ್ದರು. ಅಬ್ದುಲ್ ಹಕೀಮಖಾನನು ಟಿಪುವಿನ ಬೀಗನಾಗಿದ್ದರೂ, ಅವನು ಟಿಪುವನ್ನು ದ್ವೇಷಿಸುತ್ತಿದ್ದನೆಂದು ಅವರಿಗೆ ಮೊದಲೇ ತಿಳಿದಿತ್ತು. ಕಾರಣ, ಅವನಿಂದಲೇ ಹಕೀಮಖಾನನಿಗೆ ಈ ದುರವಸ್ಥೆ ಬಂದಿತ್ತು. ಅಬ್ದುಲ್ ಹಕೀಮಖಾನನು ಮಾನಸಿಕವಾಗಿ ಬಳಲಿ ಅಸ್ವಸ್ಥನಾಗಿದ್ದನು. ಅವನಿಗೂ ಕೂಡ ಈ ಯೂರೋಪಿಯನ್ ಸೈನಿಕರಿಗೆ ಮತ್ತು ಸಾಮಾನ್ಯವಾಗಿ ಎಲ್ಲ ಫಿರಂಗಿಗಳಿಗೂ ತಾನು ಉಪಕೃತನಾಗಿದ್ದೇನೆಂದು ಹೇಳಬೇಕಿತ್ತು. ಟಿಪು ಈ ಯುದ್ಧದಲ್ಲಿ ಸೋತದ್ದು ಹಕೀಮಖಾನನಿಗೆ ಸಂತೋಷವನ್ನು ತಂದಿತ್ತು. ನಿಶ್ಚಿತಪಡಿಸಿದ ದಿವಸ ಈ ಸೈನಿಕರು ಹಕೀಮಖಾನನ ಅರಮನೆಗೆ ಹೋದಾಗ ರಾಜ್ಯದ ಮುಖ್ಯ ಹಕೀಮ ಮತ್ತು ದರಬಾರದವರು ಸ್ವಾಗತಿಸಿದರು. ಪರ್ಶಿಯನ್ ಮತ್ತು ಅರೇಬಿಕ್ ಭಾಷೆಗಳಲ್ಲಿ ಪ್ರವೀಣರಾಗಿದ್ದ ನವಾಬ ಹಕೀಮಖಾನನು ತನ್ನ ಅನೇಕ ಮಕ್ಕಳನ್ನು ಈ ಫಿರಂಗಿಯವರಿಗೆ ಪರಿಚಯಿಸಿಕೊಟ್ಟನು. ಹಕೀಮಖಾನನು ಅರಮನೆಯ ಉದ್ಯಾನದಲ್ಲಿ ವಿಶ್ರಮಿಸಿದ್ದನು. ಅವನನ್ನು ಕಾಣಲು ಈ ಸೈನಿಕರು ಹಲವಾರು ದ್ವಾರಗಳನ್ನು ದಾಟಿ ಹೋಗಬೇಕಾಯಿತು. ನವಾಬನು ಕುಳಿತ ಉದ್ಯಾನದ ಮಧ್ಯದಲ್ಲಿ ಕಾರಂಜಿಯು ನೀರು ಸುರಿಸುತ್ತಿತ್ತಲ್ಲದೆ, ನೆಲಕ್ಕೆ ಹೂವುಗಳನ್ನು ಹಾಸಿದಷ್ಟು ಸುಂದರವಾದ ಹೂಬಳ್ಳಿಗಳನ್ನು ಬೆಳೆಸಲಾಗಿತ್ತು. ಅದು ಮೇ

ತಿಂಗಳಾದ್ದರಿಂದ ನವಾಬನು ತೆಳ್ಳಗಿನ ಮುಖಮಲ್ ಅಂಗಿಯನ್ನು ಹಾಕಿಕೊಂಡಿದ್ದನು. ಅವನ ಮುಖದಲ್ಲಿ ವೃದ್ಧಾಪ್ಯದ ಗೆರೆಗಳು ಮೂಡಿದ್ದವು. ಸಂದರ್ಶಕರಾಗಿ ಬಂದ ಸೈನಿಕರನ್ನು ಗೌರವದಿಂದ ಬರಮಾಡಿಕೊಂಡು, ಜಮಖಾನೆಯ ಮೇಲೆ ಕೂಡಿಸಿದನು. ಅವರು ಒಳಗೆ ಬಂದಾಗ ತಮ್ಮ ತಲೆಗಳ ಮೇಲಿನ ಹ್ಯಾಟುಗಳನ್ನು ತೆಗೆದು ಬಗಲಲ್ಲಿ ಇಟ್ಟುಕೊಂಡಿದ್ದರು. ಅಬ್ದುಲ್ ಹಕೀಮಖಾನನು ಅವರೊಡನೆ ಅರ್ಧಗಂಟೆ ಮಾತನಾಡಿ ಯುದ್ಧದ ವಿವರಗಳನ್ನು ಕೇಳಿ ತಿಳಿದುಕೊಂಡನು. ತನಗೆ ಪುನಃ ಮೊದಲಿನ ಸ್ಥಾನವನ್ನು ಪೇಶ್ವೆಯವರು ಕಲ್ಪಿಸಿ ಕೊಡುವರೋ ಹೇಗೆ ಎಂದು ಅವರನ್ನು ಕೇಳಿದನು. ಸೈನಿಕರು ನವಾಬನೊಡನೆ ಮನಸ್ಸು ಬಿಚ್ಚಿ ಮಾತನಾಡಿದರು. ಅವನಿಗೆ ಅವನ ಪೂರ್ವದ ಸ್ಥಾನ ದೊರೆಯುವುದೋ ಇಲ್ಲವೋ ಅನ್ನುವ ಬಗ್ಗೆ ಮಾತ್ರ ತಮ್ಮ ಅಜ್ಞಾನವನ್ನು ಪ್ರದರ್ಶಿಸಿದರು. ಟಿಪ್ಪು ಶರಣಾಗತನಾದದ್ದನ್ನು ಕೇಳಿದ ಅಬ್ದುಲ್ ಹಕೀಮಖಾನನು ತನಗೆ ಸಂತೋಷವಾದುದನ್ನು ತೋರಿಸಿದನು. ನಂತರ, ತನ್ನ ಸೇವಕರಿಗೆ ತಾನು ಬೇಟೆಯಾಡಿದ ವಸ್ತುಗಳನ್ನು ತೋರಿಸಿಕೊಂಡು ಬರಲು ಹೇಳಿದನು. ಆಗ ಹಕೀಮಖಾನನು "ಫಿರಂಗಿಯವರನ್ನು ಬಿಟ್ಟರೆ, ಈ ರೀತಿ ಬೇಟೆಯಾಡುವುದು ಯಾರಿಗೂ ಸಾಧ್ಯವಿಲ್ಲ"ಎಂದು ಉದ್ಗಾರಗಳನ್ನು ತೆಗೆದನು. ಅಬ್ದುಲ್ ಹಕೀಮಖಾನನು ಬುದ್ಧಿವಂತನಿದ್ದು, ಜಗತ್ತಿನ ವಿಷಯವನ್ನೆಲ್ಲ ತಿಳಿದುಕೊಂಡಿದ್ದನು. ಅತಿಥಿಗಳಿಗೆ ವಿದೇಶಿ ಗ್ಲಾಸುಗಳಲ್ಲಿ ಮದ್ಯವನ್ನು ಕೊಟ್ಟರೆ, ತಾನು ಮಾತ್ರ ಒಂದು ಗ್ಲಾಸಿನಲ್ಲಿ ಕೇವಲ ನೀರನ್ನೇ ತೆಗೆದುಕೊಂಡು "ನಾನೀಗ ಕುಡಿಯುವುದು ಗಂಗಾ ಮತ್ತು ಗೋದಾವರಿ ನದಿಗಳ ನೀರನ್ನಷ್ಟೇ, ಆ ನೀರಿನ ಪಾವಿತ್ರ್ಯತೆಯ ಬಗ್ಗೆ ನನಗೆ ಗೌರವವಿಲ್ಲ, ಆದರೆ ಆ ನೀರು ನನ್ನ ದೇಹಕ್ಕೆ ಸರಿಹೊಂದುವುದು" ಎಂದು ಹೇಳಿ, ತನ್ನ ಇಂದಿನ ಅಗೌರವಗೊಂಡ ಸ್ಥಿತಿಗೂ, ತಾನು ಕೀರ್ತಿಯ ಆಕಾಶದಲ್ಲಿ ಹಾರಾಡುತ್ತಿದ್ದ ಆ ದಿನಗಳ ವೈಭವಕ್ಕೂ ಹೋಲಿಸಿ ಮಾತನಾಡಿ ನಿಟ್ಟುಸಿರನ್ನು ಬಿಟ್ಟನು.

ನವಾಬನ ಜೀವನದ ಮಧುಪಾತ್ರೆ ಈಗ ಬರಿದಾಗುತ್ತ ಬಂದಿತ್ತು. ಪೇಶ್ವೆಯವರು ಅವನನ್ನು ಪದಚ್ಯುತಗೊಳಿಸಿ, ಪಿಂಚಣಿದಾರನನ್ನಾಗಿ ಮಾಡಿದ ವ್ಯಥೆ ಅವನನ್ನು ಸುಡಹತ್ತಿತ್ತು. ನವಾಬ ಹಕೀಮಖಾನನು ತನಗೆ ಅವಸಾನ ಕಾಲವು ಬಂದಿದೆಯೆಂದು ತಿಳಿದೊಡನೆ, ದರಬಾರದವರು, ಸರದಾರರು,ಹಿತಚಿಂತಕರು ಸೇರಿ, ಶ್ರೀರಂಗಪಟ್ಟಣದಿಂದ ಯುವರಾಜ ಶಹಜಾದಾ ಅಬ್ದುಲ್ ಖೈರಖಾನನನ್ನು ಈ ಕ್ಷಣ ಕರೆಸಬೇಕೆಂದು ನಿರ್ಧರಿಸಿದರು. ಸವಣೂರನ್ನು ಉಧ್ವಸ್ತಗೊಳಿಸಿ ಹೋಗುವಾಗ ಟಿಪ್ಪು ಸುಲ್ತಾನನು ಸವಣೂರು ಯುವರಾಜ "ಅಬ್ದುಲ್ ಖೈರಖಾನನನ್ನು ತನ್ನ ಜೊತೆ ಕರೆದುಕೊಂಡು ಹೋಗಿದ್ದನು. ಪ್ರಾಯಶಃ ೧೭೭೯ರಲ್ಲಿ ಲಗ್ನವಾದ ಮೇಲಿಂದ ಅವನ ಹೆಂಡತಿ (ಹೈದರನ ಮಗಳು) ಸವಣೂರಿಗೆ ಬಂದಂತೆ ಕಂಡುಬರುವುದಿಲ್ಲ. ಅವಳ ಗಂಡನೇ ಅಲ್ಲಿದ್ದ ಮೇಲೆ ಅವಳಿಗೆ ಅತ್ತೆಯ ಮನೆಗೆ ಬರುವ ಅವಶ್ಯಕತೆ ಕಾಣಲಿಲ್ಲ.

ಹಕೀಮಖಾನನು ಮೃತ್ಯುವಿನ ದವಡೆಯಲ್ಲಿ ಸಿಕ್ಕಾಗ, ನಂದೀಹಳ್ಳಿ ಜಹಗೀರದಾರ್ ಶಹಾ ಬಹುವುದ್ದೀನ ಹಜೀಕ ಮಸೂದಖಾನ್, ಸುಲೇಮಾನ್ ಖಾನ್ ಮೊದಲಾದ ಪ್ರತಿಷ್ಠಿತರು ಅವನ ಹಾಸಿಗೆಯ ಬಳಿಯೇ ಕುಳಿತರು. ಹಕೀಮಖಾನನು ತನ್ನೆಲ್ಲ ರಾಣಿಯರು, ಮಕ್ಕಳು, ಮೊಮ್ಮಕ್ಕಳು ತನ್ನ ಹತ್ತಿರವೇ ಇರಬೇಕೆಂದು ಬಯಸಿದ್ದನು. ನಗರದ ಇತರ ಪ್ರತಿಷ್ಠಿತರೂ ಕೂಡ ಅಲ್ಲಿದ್ದರು. ಅಬ್ದುಲ್ ಹಕೀಮಖಾನನು ಪ್ರತಿಷ್ಠಿತರಿಗೆ ಕೈಮುಗಿದು "ನನ್ನ ಹೆಂಡಂದಿರು ಮತ್ತು ಮಕ್ಕಳನ್ನು ನೀವೇ ರಕ್ಷಿಸಬೇಕು. ನನಗೆ ಇಪ್ಪತ್ತೆರಡು ಗಂಡಸು ಮಕ್ಕಳಿದ್ದರೂ ಸವಣೂರು ಗಾದೆಗೆ ಶೋಭೆಗೆ ತರುವವರು ಅವರಲ್ಲಿ ಯಾರೂ ಹುಟ್ಟಲಿಲ್ಲ. ನನ್ನ ನಂತರ ಈ ಸಿಂಹಾಸನವನ್ನು ಸಮರ್ಥ ರೀತಿಯಲ್ಲಿ ಆಳಿ, ಮೀಯಾನಾ ಘರಾಣದ ಮರ್ಯಾದೆಯನ್ನು ಕಾಪಾಡಿಕೊಂಡು ಹೋಗುವವನೆಂದರೆ, ನನ್ನ ಜ್ಯೇಷ್ಠಪುತ್ರನಾದ ಯುವರಾಜ ಅಬ್ದುಲ್ ಖೈರಖಾನ ಬಹದ್ದೂರ್ ಒಬ್ಬನೇ. ಆದರೆ ಈಗ ಅವನು ಇಲ್ಲಿರದೆ ಶ್ರೀರಂಗಪಟ್ಟಣದಲ್ಲಿ ಇರುವನು. ಖಂಡಿತವಾಗಿಯೂ ಅವನು ಇಂದಿಲ್ಲ ನಾಳೆ ಸವಣೂರಿಗೆ ಮರಳಿ ಬರುತ್ತಾನೆ. ಅದಕ್ಕೆ ನಮ್ಮ ರಾಜ್ಯ ಕೋಶದ ಕೀಲಿಕೈ, ನಮ್ಮ ತೋಶಖಾನೆಯಲ್ಲಿರುವ ಅಮೂಲ್ಯ ವಸ್ತುಗಳು, ಕಿಮ್ಮತ್ತಿನ ಸುವರ್ಣ ಅಭರಣಗಳು, ಮುತ್ತು ರತ್ನ, ವಜ್ರ ವೈಢೂರ್ಯಗಳು, ಸಿಂಹಾಸನವನ್ನೇರುವವರು ಧರಿಸುವ ವಜ್ರದ ನಡುಪಟ್ಟಿ, ರಾಜ್ಯದ ಮೊಹರು, ಕಠಾರಿಗಳನ್ನು ನಾನು ಖೈರಖಾನನ ತಾಯಿಯಾದ ಕುಲಸುಮ್ ಖಾತೂನ ಬೇಗಂ ಸಾಹೀಬಾಳ ಕಡೆಗೆ ಕೊಡುತ್ತೇನೆ. ಅಬ್ದುಲ್ ಖೈರಖಾನನು ಶ್ರೀರಂಗಪಟ್ಟಣದಿಂದ ಬಂದು ಅಧಿಕಾರವನ್ನು ವಹಿಸಿಕೊಳ್ಳುವವರೆಗೂ ಅವುಗಳನ್ನು ಅವಳು ರಕ್ಷಿಸಿ, ಅವನು ಬಂದೊಡನೆ ಅವನಿಗೆ ಒಪ್ಪಿಸುವಳು ಎಂದು ಹೇಳಿ ಮೃತ್ಯುಶಯ್ಯೆಯಲ್ಲಿ ನಿಧನನಾದನು.

ಅರ್ಧಶತಮಾನಕಾಲ ಸವಣೂರು ಗಾದೆಯನ್ನಾಳಿದ ನವಾಬ ಅಬ್ದುಲ್ ಹಕೀಮಖಾನನು ಜೀವನವನ್ನೇನೋ ಐಷಾರಾಮದಲ್ಲಿ ಕಳೆದರೂ, ಇವನ ಕಾಲಕ್ಕೆ ಸವಣೂರು ರಾಜ್ಯವೇ ನಷ್ಟವಾಗಿ, ಇವನೊಬ್ಬ ಪೇಶ್ವೆಯವರ ಪಿಂಚಣಿದಾರನಾಗಿ ಜೀವನದ ಅಂತಿಮ ಚರಣವನ್ನು ಕಷ್ಟದಿಂದ ಕಳೆಯಬೇಕಾಯಿತು. ಅಬ್ದುಲ್ ಹಕೀಮಖಾನ ಸಾಯುವ ಎರಡು ವರುಷ ಮೊದಲು ಖಂಡೇರಾವ ಸಂಗೋ ದಿವಾಣನು ಸತ್ತನು. ಅಬ್ದುಲ್ ಹಕೀಮಖಾನನನ್ನು ಪೇಶ್ವೆಯವರು ಹೈದರ ಆಲಿ ಮತ್ತು ಟಿಪ್ಪು ಸುಲ್ತಾನ ಇವರು ಪಗಡೆಕಾಯಿಯಂತೆ ಅಚೀಚೆ ಸರಿಸಾಡಿ ಹಣ್ಣು ಮಾಡಿದರು. ಸವಣೂರು ವಿಶಾಲ ರಾಜ್ಯವು ಇಪ್ಪತ್ತೈದು ಹಳ್ಳಿಗಳ ಕುಬ್ಜ ಸಂಸ್ಥಾನವಾಗಲಿಕ್ಕೆ ಹಕೀಮಖಾನನ ದೌರ್ಬಲ್ಯವೇ ಕಾರಣವೆನ್ನಬೇಕು.

ನವಾಬ ಅಬ್ದುಲ್ ಹಕೀಮಖಾನನು ಇಪ್ಪತ್ತೆರಡು ಗಂಡು ಮಕ್ಕಳನ್ನು ತನ್ನ ಹಿಂದೆ ಬಿಟ್ಟು ಸತ್ತನು.

೦೧. ಅಬ್ದುಲ್ ಖೈರಖಾನ್
೦೨. ಅಬ್ದುಲ್ ಸಮದ್ ಖಾನ್
೦೩. ಅಬ್ದುಲ್ ಹುಸೇನಖಾನ್
೦೪. ಅಬ್ದುಲ್ ರಹೀಮಖಾನ್
೦೫. ಅಬ್ದುಲ್ ಜಬ್ಬಾರಖಾನ್
೦೬. ಅಬ್ದುಲ್ ರಸೀದಖಾನ್
೦೭. ಅಬ್ದುಲ್ ಕಾಸೀಮಖಾನ್
೦೮. ಅಬ್ದುಲ್ ಅಲೀಫಖಾನ್
೦೯. ಅಬ್ದುಲ್ ಚಮ್ಮಾಖಾನ್
೧೦. ಅಬ್ದುಲ್ ಅಜೀಜಖಾನ್
೧೧. ಅಬ್ದುಲ್ ಹಾತೀಮಖಾನ್
೧೨. ಅಬ್ದುಲ್ ಮೋಹಸೀನಖಾನ್
೧೩. ಅಬ್ದುಲ್ ಫಿರೋಜ್ ಖಾನ್
೧೪. ಅಬ್ದುಲ್ ಅಹಮ್ಮದ್ ಖಾನ್
೧೫. ಅಬ್ದುಲ್ ಮಜೀದಖಾನ್
೧೬. ಅಬ್ದುಲ್ ಶಮಾಸಖಾನ್
೧೭. ಅಬ್ದುಲ್ ಖಿದ್ದೂಸಖಾನ್
೧೮. ಅಬ್ದುಲ್ ಕರೀಮಖಾನ್
೧೯. ಅಬ್ದುಲ್ ಮೊಹಮ್ಮದ್ ಖಾನ್
೨೦. ಅಬ್ದುಲ್ ದಲೇರಖಾನ್
೨೧. ಅಬ್ದುಲ್ ಸಲಾಮಖಾನ್
೨೨. ಅಬ್ದುಲ್ ಫತ್ತೇಖಾನ್

ಅಬ್ದುಲ್ ಹಕೀಮಖಾನನು ತೀರಿಕೊಂಡಾಗ ಸ್ವಾಭಾವಿಕವಾಗಿ ಅವನ ಜ್ಯೇಷ್ಠಪುತ್ರನಾದ ಅಬ್ದುಲ್ ಖೈರಖಾನನು ಸವಣೂರು ಗಾದೆಯನ್ನು ಅಲಂಕರಿಸಬೇಕಾಗಿತ್ತು. ಆದರೆ ಅವನು ಆಗ ಶ್ರೀರಂಗಪಟ್ಟಣದಲ್ಲಿದ್ದನು. ಟಿಪು ಸವಣೂರನ್ನು ಅಸ್ತವ್ಯಸ್ಥಗೊಳಿಸಿ ಹೋಗುವಾಗ ಅಬ್ದುಲ್ ಖೈರಖಾನನನ್ನು ತನ್ನೊಡನೆ ಮರಳಿ ಶ್ರೀರಂಗಪಟ್ಟಣಕ್ಕೆ ಕರೆದುಕೊಂಡು ಹೋಗಿದ್ದರಿಂದ ಅವನಿಗೆ ತನ್ನ ತಂದೆಗೆ ಜಡ್ಡಾದ ವಿಷಯ ಕೂಡ ತಿಳಿದಿರಲಿಲ್ಲ. ತಂದೆಯ ಸಾವಿನ ಸುದ್ದಿ ತಿಳಿಯಲು ಆರು ತಿಂಗಳು ಹಿಡಿದವು. ಸವಣೂರು ರಾಜ್ಯದ ಸಿಂಹಾಸನವು ದೊರೆಯಿಲ್ಲದೆ ಉಳಿಯಬಾರದೆಂದು ಸರದಾರರು, ಸವಣೂರಿನ ಪ್ರತಿಷ್ಠಿತರು ಹಾಗೂ ರಾಜಪರಿವಾರದವರು ಸಮಾಲೋಚಿಸಿ, ಅಬ್ದುಲ್ ಖೈರಖಾನ ಬರುವವರೆಗೆ ಅವನ ಎರಡನೇ ತಮ್ಮನಾದ ಅಬ್ದುಲ್ ಹುಸೇನಖಾನನ್ನು ಸವಣೂರಿನ ಆಡಳಿತೆಯನ್ನು ತಾತ್ಪೂರ್ತಿಕವಾಗಿ ನಡೆಸಿಕೊಂಡು ಹೋಗಬೇಕೆಂದು ನಿರ್ಣಯಿಸಿ, ಅವನ ಕೈಗೆ ಅಧಿಕಾರವನ್ನಿತ್ತರು. ಆದರೆ ವಿಧ್ಯುಕ್ತವಾಗಿ ಅವನನ್ನು ಸಿಂಹಾಸನದ ಮೇಲೆ ಕೂಡಿಸಲಿಲ್ಲ. ಕಾರಣ ನಿಜವಾದ ಹಕ್ಕುದಾರ ಶ್ರೀರಂಗಪಟ್ಟಣದಲ್ಲಿದ್ದ.

ಹಾಗೆ ನೋಡಿದರೆ, ಸವಣೂರು ನವಾಬನಿಗೆ ಆಡಳಿತೆ ನಡೆಸಲು ರಾಜ್ಯವೇ ಇರಲಿಲ್ಲ. ಕೇವಲ ಕಾರಡಗಿ ಮಹಲೊಂದು ಅವನ ಅಧೀನದಲ್ಲಿತ್ತು. ಉಳಿದೆಲ್ಲ ಸವಣೂರು ರಾಜ್ಯವು ಪೇಶ್ವೆಯವರ ಕೈಯಲ್ಲಿದ್ದು, ಅವರ ಸರದಾರನು ಆಡಳಿತೆಯ ವ್ಯವಸ್ಥೆಯನ್ನು

ನೋಡಿಕೊಳ್ಳುತ್ತಿದ್ದನು. ಕಾರಡಗಿ ಮಹಲಿನ ಕಂದಾಯವನ್ನು ಕೂಡ ಅವರೇ ವಸೂಲು ಮಾಡಿ ನವಾಬನಿಗೆ ಕೊಡುತ್ತಿದ್ದಿರಬೇಕು. ಈ ಹೊತ್ತಿಗೆ ಅಬ್ದುಲ್ ಹಕೀಮಖಾನನಿಗೆ ವರ್ಷಕ್ಕೆ ೪೮,೦೦೦ ರೂಪಾಯಿ ಪಿಂಚಣಿ ಮಂಜೂರಾಗಿತ್ತು. ಇದರಿಂದ ಅಬ್ದುಲ್ ಹಕೀಮಖಾನನ ಆರ್ಥಿಕ ಸ್ಥಿತಿ ತೀರ ಹದಗೆಟ್ಟಿತ್ತು.

೧೭೮೭ರಲ್ಲಿ ಸವಣೂರನ್ನು ತ್ಯಜಿಸಿ, ಪುಣೆಗೆ ಪಲಾಯನ ಮಾಡಿದ ಅಬ್ದುಲ್ ಹಕೀಮಖಾನನು, ಮಧ್ಯದಲ್ಲಿ ಒಂದು ವರುಷ ವಿಜಾಪುರದಲ್ಲಿದ್ದು ವ್ಯಾಧಿಯನ್ನು ನಿವಾರಿಸಿಕೊಂಡು ಪುಣೆಯನ್ನು ತಲುಪುವ ಹೊತ್ತಿಗೆ ಒಂದೂವರೆ ವರುಷಗಳಾಗಿದ್ದವು. ಮುಂದೆ ಅವನು ಮರು ವರುಷ ಪೇಶ್ವೆಯವರ ಆಶ್ರಯದಲ್ಲಿದ್ದನು. ಆಗ ಕೂಡ ಅವರು ಅವನಿಗೆ ವ್ಯವಸ್ಥಿತವಾಗಿ ಪಿಂಚಣಿಯನ್ನು ಕೊಡುತ್ತಿರಲಿಲ್ಲ. ೧೭೯೧-೯೨ರವರೆಗೂ ಅವನು ತನ್ನೊಂದಿಗೆ ತೆಗೆದುಕೊಂಡು ಹೋಗಿದ್ದ ನಾಲ್ಕು ಕೋಟಿ ರೂಪಾಯಿಗಳಲ್ಲಿಯೇ ಜೀವನವನ್ನು ನಡೆಸಬೇಕಾಯಿತು. ೧೭೯೨ರಲ್ಲಿ ಪೇಶ್ವೆಯವರು ಹಕೀಮಖಾನನನ್ನು ಪರಶುರಾಮ ಭಾವೂ ಪಟವರ್ಧನನೊಡನೆ ಸವಣೂರಿಗೆ ಕಳಿಸಿದರು. ಪರಶುರಾಮ ಭಾವೂ ಹಕೀಮಖಾನನ ರಾಜ್ಯವನ್ನು ಟಿಪುವಿನ ಕಡೆಯಿಂದ ಮರಳಿ ಪಡೆದರೂ, ಅದನ್ನೇನೂ ಅವನಿಗೆ ಕೊಡದೆ, ಅದನ್ನು ಯುದ್ಧದ ವೆಚ್ಚಕ್ಕೆಂದು ಹಣವಿಲ್ಲವೆಂದು ಗೋಣಗಿದಾಗ ಕಾರಡಗಿ ಮಹಲಿನ ಉತ್ಪನ್ನವನ್ನು ಬಿಟ್ಟುಕೊಟ್ಟರು. ಹೀಗಾಗಿ ನವಾಬ ಅಬ್ದುಲ್ ಹಕೀಮಖಾನ ದಿಲೇರಜಂಗ ದಿಲೇರಬಹದ್ದೂರನು ಸರಿಯಾಗಿ ಪಿಂಚಣಿ ಪಡೆಯದೆ ಪೇಶ್ವೆಯವರ ಮೋಸಕ್ಕೆ ಒಳಗಾಗಿ ಮರಣವನ್ನಪ್ಪಬೇಕಾಯಿತು. ಅಬ್ದುಲ್ ಹಕೀಮಖಾನನು ಸವಣೂರಲ್ಲಿ ಇರದಾಗ ಯಾರು ಆಡಳಿತೆಯನ್ನು ನಡೆಸಿದರೆಂದು ದಿಲೇರಜಂಗೀ ಕಾವ್ಯವು ಹೇಳದಿದ್ದರೂ, ಪೇಶ್ವೆಯವರ ಪ್ರತಿನಿಧಿಗಳೇ ಆಳಿರಬೇಕು.

### ಸಂತ ಬೈರುಲ್ಲಾ ಭಾಶಾ

ಅಬ್ದುಲ್ ಕರೀಮಖಾನನ ಕಾಲದಲ್ಲಿ ಸವಣೂರಲ್ಲಿ ಬೈರುಲ್ಲಾ ಭಾಶಾ ಎಂಬ ಒಬ್ಬ ಸಂತನಿದ್ದ. ಅವನ ಬಾಯಿಂದ ಬರುವ ಮಾತುಗಳು ಸತ್ಯವಾಗುವವೆಂಬ ಪ್ರತೀತಿ ಇದ್ದಿತು. ಸವಣೂರು ರಾಜ್ಯವು ಎರಡು ಹೋಳಾಗಿ ಒಂದು ಹೋಳು ಸವಣೂರು ನವಾಬನ ಕೈಬಿಡುವುದೆಂದು ಅವನು ಮೊದಲೇ ಭವಿಷ್ಯ ನುಡಿದಿದ್ದನಂತೆ. ಇವನೊಬ್ಬ ಅಲೌಕಿಕ ಸಿದ್ಧಪುರಷನಿದ್ದ. ಅವನಾಡುತ್ತಿದ್ದ ಭವಿಷ್ಯದ ಮಾತುಗಳು ಮೇಲ್ನೋಟಕ್ಕೆ ಸಾಮಾನ್ಯರಿಗೆ ಅರ್ಥವಾಗುತ್ತಿರಲಿಲ್ಲ. ಒಂದು ಸಲ ರಾಜ್ಯದ ಗುಪ್ತಚಾರರು ದಿಲ್ಲಿಗೆ ಹೋಗುವಾಗ ಸಂತ ಭಾಶಾ ಸವಣೂರು ಕೋಟೆಯ ದಿಲ್ಲಿ ದರವಾಜದ ಹತ್ತಿರ ಕಬ್ಬು ತಿನ್ನುತ್ತ ನಿಂತಿದ್ದನು.ಅದನ್ನು ನೋಡಿದ ಗುಪ್ತಚಾರರು ದಿಲ್ಲಿಗೆ ಹೋದಾಗ ಇದೇ ಬೈರುಲ್ಲಾ ಬಾಶಾ ದಿಲ್ಲಿಯ ಪ್ರವೇಶ ದ್ವಾರದ ಬಳಿ ಸವಣೂರಿನಲ್ಲಿದ್ದಂತೆಯೇ ಕಬ್ಬು ತಿನ್ನುತ್ತ ನಿಂತಿದ್ದನಂತೆ. ಬಹು ಪ್ರಯಾಸದಿಂದ ಏಲ್ಲಿಗೆ ಹೋದ ಗುಪ್ತಚಾರರಿಗೆ

ಆಶ್ಚರ್ಯವಾಗಯಿತು. ಅವರು ಮರಳಿಬಂದು ಸವಣೂರನ್ನು ತಲುಪಿದಾಗ ಭೈರುಲ್ಲಾ ಭಾಶಾ ಸವಣೂರಿನ ಅದೇ ದಿಲ್ಲಿ ದರವಾಜದ ಹತ್ತಿರ ಹಾಗೆಯೇ ಕಬ್ಬು ತಿನ್ನುತ್ತ ನಿಂತಿದ್ದನು. ಈ ಅಲೌಕಿಕ ಘಟನೆಯನ್ನು ಗುಪ್ತಚಾರರು ನವಾಬ ಅಬ್ದುಲ್ ಹಕೀಮಖಾನನಿಗೆ ಹೇಳಿದಾಗ ಅವನಿಗೂ ಆಶ್ಚರ್ಯವಾಯಿತು. ಬೈರುಲ್ಲಾ ಭಾಶಾ ಸಂತನು ಸದಾ ಸವಣೂರಲ್ಲಿ "ಆಧಾ ತೇರೇ ಆಧಾ ಮೇರೇ" ಎಂದು ಕೂಗುತ್ತಾ ಬೀದಿಗಳಲ್ಲಿ ಅಲೆದಾಡುತ್ತಿದ್ದನು. ಅವನು ಅತ್ಯಂತ ಸಾಧು ಸ್ವಭಾವದವನಿದ್ದುದರಿಂದ, ಜನರು ಅವನ ಮೇಲೆ ಭಕ್ತಿಯನ್ನಿಟ್ಟಿದ್ದರು. ಜನರು ಅವನಿಗೆ "ಆಧಾ ತೇರೆ ಆಧಾ ಮೇರೇ"ಎಂದರೆ ಏನು ಎಂದು ಕೇಳಿದರೆ, ಸಂತನು ನಕ್ಕು ಸುಮ್ಮನಾಗುತ್ತಿದ್ದನು. ಆದರೆ, ಅಬ್ದುಲ್ ಕರೀಮಖಾನ ಬಹದ್ದೂರ ನವಾಬನ ಕಾಲಕ್ಕೆ ಸವಣೂರು ರಾಜ್ಯವು ಎರಡು ಹೋಳಾಗಿ, ಒಂದು ಪೇಶ್ವೆಯವರಿಗೆ ಹೋಗಿ, ಇನ್ನೊಂದು ಇಪ್ಪತ್ತೈದು ಹಳ್ಳಿಗಳುಳ್ಳ ಪ್ರದೇಶವು ಅಬ್ದುಲ್ ಕರೀಮಖಾನನಿಗೆ ಬಂದಾಗ "ಅರ್ಧ ಮತ್ತೊಬ್ಬರಿಗೆ, ಅರ್ಧ ನನಗೆ" ಎಂಬುದರ ಸಂತನ ರಹಸ್ಯದ ಮಾತು ಅರ್ಥವಾಯಿತು. ಅವನು ಸತ್ತಾಗ ಅವನ ಗೋರಿ ಸವಣೂರಿನ ಲಷ್ಕರ ಬಜಾರದಲ್ಲಿ ನಿರ್ಮಾಣವಾಯಿತು.

## ಅಬ್ದುಲ್ ಖೈರಖಾನ ನವಾಬ (೧೭೯೬-೧೮೨೭)

ಅಬ್ದುಲ್ ಖೈರಖಾನನ ತಾಯಂದಿರು ಅಬ್ದುಲ್ ಹಕೀಮಖಾನನು ಸತ್ತ ಸುದ್ದಿಯನ್ನು ಪತ್ರ ಬರೆದು ಶ್ರೀರಂಗಪಟ್ಟಣಕ್ಕೆ ತಿಳಿಸಿದರು. ಈ ದುಃಖದ ವಾರ್ತೆಯನ್ನು ಕೇಳಿದ ಟಿಪ್ಪು ಸುಲ್ತಾನನು, ಭಾವನಾದ ಅಬ್ದುಲ್ ಖೈರಖಾನನಿಗೆ ದುಃಖದಲ್ಲಿ ಧರಿಸಬೇಕಾದ ಪೋಷಕವನ್ನು ಕೊಟ್ಟು, ಸಾಂತ್ವನಗೊಳಸಿದನು. ಕೂಡಲೇ ಟಿಪ್ಪು ಎಲ್ಲ ವ್ಯವಸ್ಥೆಯನ್ನೂ ಮಾಡಿ ಅಬ್ದುಲ್ ಖೈರಖಾನನನ್ನು ಸವಣೂರಿಗೆ ಕಳಿಸಿದನು. ಅಬ್ದುಲ್ ಖೈರಖಾನ ಯುವರಾಜನು ಸವಣೂರನ್ನು ತಲುಪುವ ಹೊತ್ತಿಗೆ ತಂದೆ ಅಬ್ದುಲ್ ಹಕೀಮಖಾನನು ತೀರಿಕೊಂಡು ಆಗಲೇ ಹತ್ತು ತಿಂಗಳಾಗಿದ್ದವೆಂದು ತಿಳಿಯಿತು.

ಖೈರಖಾನನು ಬಂದು ಅಂತಃಪುರದ ಪರಿವಾರದೊಂದಿಗೆ ತನ್ನ ದುಃಖವನ್ನು ಹಂಚಿಕೊಂಡನು. ನಂತರ ತಾಯಂದಿರ ಮತ್ತು ಹಿರಿಯರೊಂದಿಗೆ ಸಮಾಲೋಚಿಸಿ ತಮ್ಮ ಅಬ್ದುಲ್ ಹುಸೇನಖಾನನಿಗೆ ತನ್ನ ಸಿಂಹಾಸನವನ್ನು ಬಿಟ್ಟುಕೊಡಬೇಕೆಂದು ಕೇಳಿದನು. ಆದರೆ ತನ್ನ ಕೈಗೆ ಬಂದ ಸಂಸ್ಥಾನದ ಅಧಿಕಾರವು ಜಾರಿ ಹೋಗುವುದೆಂದು ಹತಾಶನಾದ ಅಬ್ದುಲ್ ಹುಸೇನಖಾನನು,ಅಣ್ಣ ಬಂದ ಸುದ್ದಿಯನ್ನು ಕೇಳಿದೊಡನೆ, ಅರಮನೆಯಲ್ಲಿದ್ದ ಪರ್ಶಿಯನ್ ಜಮಖಾನೆಗಳಿಗೆ ತೂತು ಕೊರೆದು, ಕೆಲವೊಂದು ಜಮಾಖಾನೆಗಳನ್ನು ಕತ್ತರಿಸಿ ರಾಶಿರಾಶಿಯಾಗಿ ಒಗೆಸಿದ್ದನು. ತೋಶಖಾನಾದಲ್ಲಿದ್ದ ಕೆಲವೊಂದು ಬೆಲೆಬಾಳುವ ಪದಾರ್ಥಗಳನ್ನು ಮಾಯ ಮಾಡಿದನು. ಅವನಿಗೆ ಮರಣಾನಂರ ತನ್ನಣ್ಣನೇ ಪಟ್ಟಕ್ಕೆ

ಕುಳಿತುಕೊಳ್ಳಬೇಕೆಂದು ತನ್ನ ತಂದೆ ಅಬ್ದುಲ್ ಹಕೀಮಖಾನನು ಹೇಳಿದ್ದು ಸರಿಬಂದಿರಲಿಲ್ಲ. ಅಂತಲೇ ಅವನು ಅಣ್ಣನ ಮೇಲೆ ದ್ವೇಷಭಾವನೆಯನ್ನು ತಾಳಿದ್ದನು.

ಖೈರಖಾನನು ನ್ಯಾಯವಾಗಿ ಸಿಂಹಾಸನವನ್ನು ಕೇಳಿದ್ದಕ್ಕೆ ಹುಸೇನಖಾನನು ಸಿಟ್ಟಿಗೆದ್ದು ಸವಣೂರಿನ ಆಡಳಿತವನ್ನು ಬಿಟ್ಟುಕೊಡುವುದಿಲ್ಲ ಎಂದು ಖಡಾಖಂಡಿತವಾಗಿ ಹೇಳಿದನು. ಇಷ್ಟೇ ಅಲ್ಲ ಪೇಶ್ವೆಯವರ ಸರದಾರನಾಗಿದ್ದ ಪರಶುರಾಮಭಾವೂ ಪಟವರ್ಧನನನ್ನು ಒಳಗೆ ಹಾಕಿಕೊಂಡು ಅಬ್ದುಲ್ ಖೈರಖಾನ ನವಾಬನನ್ನು ರಾಜಧಾನಿಯಿಂದ ಹೊರಗೆ ದಬ್ಬಿಸಿದನು. ಈ ಅಪಮಾನವನ್ನು ತಾಳಲಾರದ ಅಬ್ದುಲ್ ಖೈರಖಾನನು ತನ್ನ ಸ್ತ್ರೀ ಪರಿವಾರದೊಂದಿಗೆ ಸವಣೂರು ಅರಮನೆಯನ್ನು ತ್ಯಜಿಸಿ, ಸಮೀಪದ ಚಿಲ್ಲೂರಲ್ಲಿ ವಾಸಿಸಹತ್ತಿದನು. ಪರಶುರಾಮಭಾವೂ ಪೇಶ್ವೆಯವರ ದರ್ಬಾರದಲ್ಲಿ ಮುಖ್ಯ ಸರದಾರನಾಗಿದ್ದರಿಂದ ಅವನ ಬಳಿ ಸೈನ್ಯವಿತ್ತು. ಖೈರಖಾನನು ಗೊಂದಲ ಹಾಕಿದರೆ, ಅವನನ್ನು ಪ್ರತಿಭಟಿಸಬೇಕೆಂದು ಹುಸೇನಖಾನನು ಅವನಿಗೆ ಲಂಚವನ್ನು ಬೇರೆ ಕೊಟ್ಟಿದ್ದನು.

ಅಬ್ದುಲ್ ಖೈರಖಾನನು ತನ್ನ ಸೇವಕರನ್ನು ಪರಿವಾರದವರ ರಕ್ಷಣೆಗೆ ಬಿಟ್ಟು, ತನಗಾದ ಅನ್ಯಾಯವನ್ನು ಸರಿಪಡಿಸಿಕೊಳ್ಳಲು ಪುಣೆಗೆ ಧಾವಿಸಿದನು. ಪುಣೆಯ ಪೇಶ್ವೆ ಗಾದೆಯ ಮೇಲೆ ಆಗ ಸವಾಯಿ ಮಾಧವರಯನು ವಿರಾಜಮಾನನಾಗಿದ್ದನು. ಅವನಿಗೆ, ತನ್ನಕಕ್ಕ ಮೊದಲನೇ ಮಾಧವರಾಯನು ಸವಣೂರಲ್ಲಿ ಜನ್ಮತಾಳಿದ್ದರಿಂದ, ಅಬ್ದುಲ್ ಖೈರಖಾನನ ತಂದೆ ಅಬ್ದುಲ್ ಹಕೀಮಖಾನನ್ನು ಸೋದರಮಾವನೆಂದು ಗೌರವಿಸುತ್ತಿದ್ದನೆಂದು ಕೇಳಿದ್ದನು. ಹೀಗಾಗಿ ಖೈರಖಾನನ ಬಗ್ಗೆ ಅವನಿಗೆ ಅನುಕಂಪ ಮೂಡಿತು.

ಅಬ್ದುಲ್ ಖೈರಖಾನ ನವಾಬನು ಪುಣೆಗೆ ಬಂದು, ಸವಾಯಿ ಮಾಧವರಾವ ಮತ್ತು ನಾನಾ ಫಡಣವೀಸನನ್ನು ಕಂಡು, ತನಗೆ ತನ್ನ ತಮ್ಮನಿಂದ ಸಿಂಹಾಸನವನ್ನು ಕೊಡಿಸಬೇಕೆಂದು ಪ್ರಾರ್ಥಿಸಿದನು. ನಾನಾ ಫಡಣವೀಸನು ನ್ಯಾಯವಾಗಿ ಸವಣೂರು ಸಿಂಹಾಸನವು ಜ್ಯೇಷ್ಠ ಪುತ್ರನಾದ ಖೈರಖಾನ ನವಾಬನಿಗೆ ಬರಬೇಕೆಂದು ನಿರ್ಣಯವನ್ನಿತ್ತು, ಸರಕಾರಿ ಹುಕುಮನ್ನು ಹೊರಡಿಸಿದನು.

ಸವಾಯಿ ಮಾಧವರಾಯನು ತುಂಬಿದ ಪೇಶ್ವೆ ದರ್ಬಾರದಲ್ಲಿ ಅಬ್ದುಲ್ ಖೈರಖಾನನಿಗೆ ರಾಜಪೋಷಾಕು, ತಾಂಬೂಲಗಳನ್ನಿತ್ತು, ಅತ್ತರುಗುಲಾಬ ಸಿಂಪಡಿಸಿದನು. ಅಲ್ಲದೇ ಅವನ ಕೈಗೆ ಒಂದು ಖಡ್ಗ ಮತ್ತು 'ಮುಸಲ್ಮಾನರಿಗೆ ಪವಿತ್ರ ಗ್ರಂಥವಾದ ಕುರಾಣವನ್ನು ಕೊಟ್ಟು ಮರ್ಯಾದೆ ಸಲ್ಲಿಸಿದನು. ನಂತರ ಧೋಂಡೋಪಂತ ಗೋಖಲೆ ಸರದಾನಿಗೆ ಆಜ್ಞೆಯನ್ನಿತ್ತು, ಅವನು ಸೈನ್ಯದೊಂದಿಗೆ ಸವಣೂರಿಗೆ ಹೋಗಿ, ಹುಸೇನಖಾನನನ್ನು ಸಿಂಹಾಸನದಿಂದ ಇಳಿಸಿ, ಅಬ್ದುಲ್ ಖೈರಖಾನ ನವಾಬನಿಗೆ

ಪಟ್ಟಿಗಟ್ಟಿ ಬರಬೇಕೆಂದು ಹೇಳಿದನು. ಧೊಂಡೋಪಂತ ಗೋಖಲೆಯೊಂದಿಗೆ ಖೈರಖಾನನು ಸವಣೂರನ್ನು ತಲುಪುವ ಹೊತ್ತಿಗೆ ಸವಾಯಿ ಮಾಧವರಾವ ಪುಣೆಯಲ್ಲಿ ಆಕಸ್ಮಿಕವಾಗಿ ೧೭೯೫ ಅಕ್ಟೋಬರ್ ೨೭ಕ್ಕೆ ಸತ್ತು ಹೋದನು. ಇದನ್ನು ಕೇಳಿದ ಅಬ್ದುಲ್ ಖೈರಖಾನನು ಅಧೀರನಾದನು. ಇದರಿಂದ ತನಗೆ ಪೇಶ್ವೆಯವರ ಆಶ್ರಯವು ತಪ್ಪುವುದೇನೋ ಎಂದು ಅನಿಸಿತು. ಆದರೆ ಸವಾಯಿ ಮಾಧವರಾವ ನಂತರ ಅವನ ಕಕ್ಕನಾದ ರಘುನಾಥರಾಯನು ಪೇಶ್ವೆ ಸರ್ಕಾರದ ಅಧಿಕಾರ ಸೂತ್ರಗಳನ್ನು ವಹಿಸಿಕೊಂಡಿದ್ದರಿಂದ, ಅವನು ಅಬ್ದುಲ್ ಖೈರಖಾನನಿಗೆ ಎಲ್ಲ ಸಹಾಯವನ್ನೂ ಮಾಡುವುದಾಗಿ ಆಶ್ವಾಸನೆಯನ್ನು ಕೊಟ್ಟನು. ೧೭೯೬ರ ಪ್ರಾರಂಭದಲ್ಲಿ ಅಬ್ದುಲ್ ಖೈರಖಾನನು ಗೋಖಲೆಯೊಂದಿಗೆ ಸವಣೂರಿಗೆ ಬಂದನು. ಗೋಖಲೆ ಸರದಾರನು ತನ್ನ ಸೈನ್ಯದೊಂದಿಗೆ ಸವಣೂರಿನ ನವಾಬಾಗದಲ್ಲಿ ಡೇರೆಗಳನ್ನು ಹೊಡೆಸಿ ತಳವೂರಿದನು.

ಆಗ ಸವಣೂರು ಅರಮನೆಯಲ್ಲಿ, ಹುಸೇನಖಾನ ನವಾಬನ ಸಮಕ್ಷಮದಲ್ಲಿ, ಗಾಯನ, ನೃತ್ಯ, ಮದಿರಾಪಾನ, ಮಾಂಸಭಕ್ಷಣೆಗಳು ನಡೆದಿದ್ದವು. ನಿತ್ಯವೂ ಈ ಕಾರ್ಯಕ್ರಮ ಇರುತ್ತಿದ್ದವು. ಆದರೆ ಇಂದು ಮಾತ್ರ ಧೊಂಡೋಪಂತ ಗೋಖಲೆ ಸವಣೂರಿಗೆ ಬಂದ ಸುದ್ದಿಯನ್ನು ಕೇಳಿ,ಎಲ್ಲ ಮನರಂಜನೆಗಳನ್ನೂ ನಿಲ್ಲಿಸಿಬಿಟ್ಟನು.

ಇಲ್ಲಿಯವರೆಗೂ ಮೋಜು ಮಾಡುತ್ತಿದ್ದ ಅಬ್ದುಲ್ ಹುಸೇನಖಾನನಿಗೆ ಈಗ ಖಂಡಿತವಾಗಿಯೂ ಅಧಿಕಾರವನ್ನು ಬಿಟ್ಟುಕೊಡಬೇಕಾಗುವುದೆಂದು ಅನಿಸಿತು. ಅದರಿಂದ ಅವನು ಅಂಜಿ ಬೆವರಹತ್ತಿದನು. ಅಬ್ದುಲ್ ಖೈರಖಾನನಿಗೆ ಮಾತ್ರ ತನ್ನ ಹಕ್ಕಿಗಳ ಹಿಂಡಿನಿಂದ ತಪ್ಪಿಸಿಕೊಂಡು ಹೋಗಿ ಈಗ ಪುನಃ ಆ ಗುಂಪನ್ನು ಸೇರಿದಷ್ಟು ಸಂತೋಷವಾಯಿತು. ಹೇಗಾದರೂ ಮಾಡಿ ಧೊಂಡೋಪಂತ ಗೋಖಲೆ ತನಗ ಸಿಂಹಾಸನವನ್ನು ಕೊಡಿಸುವನೆಂದು ವಿಶ್ವಾಸವಾಯಿತು.

ಅಬ್ದುಲ್ ಹುಸೇನಖಾನನು, ಸರದಾರ ಧೊಂಡೋಪಂತ ಗೋಖಲೆನಿಂದ ಬುಲಾವ್ ಬರುವ ಮೊದಲೇ ತಾನೇ ಅವನ ಡೇರೆಗೆ ಹೋಗಿ ಭೇಟಿಯಾದನು. ಧೊಂಡೋಪಂತನು ಅಬ್ದುಲ್ ಹುಸೇನಖಾನನಿಗೆ ರಾಜಮುದ್ರೆ, ಕಠಾರಿ ಮತ್ತು ರಾಜ್ಯಬಂಢಾರದ ಬೀಗದ ಕೈಗಳನ್ನು ತಂದು ಒಪ್ಪಿಸಬೇಕೆಂದು ಹೇಳಿದನು. ಅಬ್ದುಲ್ ಹುಸೇನಖಾನನು ತನ್ನ ಬಳಿ ಇದ್ದ ಸರಕಾರದ ಎಲ್ಲ ವಸ್ತುಗಳನ್ನು ತಂದು ಧೊಂಡೋಪತನಿಗೆ ಒಪ್ಪಿಸಿದನು. ತನ್ನ ರಾಯಭಾರವು ಇಷ್ಟು ಸುಲಭವಾಗಿ ಬಗೆಹರಿಯಬಹುದೆಂದು ಧೊಂಡೋಪಂತ ಅಂದುಕೊಂಡಿರಲಿಲ್ಲ.

ಮರುದಿವಸ ಧೊಂಡೋಪಂತನು ಅಬ್ದುಲ್ ಖೈರಖಾನನನ್ನು ಅಂಬಾರಿಯ ಮೇಲೆ ಕೂಡಿಸಿ ಸವಣೂರಲ್ಲಿ ಮೆರೆಸಿದನು. ತಾನು ಆ ಮೆರವಣಿಗೆಯಲ್ಲಿ ಮುಂದೆ

ಬಿಚ್ಚುಗತ್ತಿಯನ್ನು ಝಳಪಿಸುತ್ತ ನಡೆದಿದ್ದನು. ಅಬ್ದುಲ್ ಹಕೀಮಖಾನನು ಪುಣೆಗೆ ಪಲಾಯನ ಮಾಡಿದನಂದಿನಿಂದ ಇಷ್ಟು ಸಂಭ್ರಮದ ಮೆರವಣಿಗೆ ಸವಣೂರಲ್ಲಿ ಹಿಂದೆ ನಡೆದಿರಲಿಲ್ಲ. ಹೀಗಾಗಿ ಸವಣೂರೇ ಈಗ ನೆರೆದಿತ್ತು. ಧೊಂಡೋಪಂತನು ತಕ್ಷಣ ಖೈರಖಾನ ನವಾಬನು ಪಟ್ಟವೇರುವ ಸಿದ್ಧತೆಗಳನ್ನು ಮಾಡಿದನು. ಅಬ್ದುಲ್ ಖೈರಖಾನನು, ಸವಣೂರಿನ ಗಣ್ಯರು, ಸರದಾರರು, ರಾಜಪರಿವಾರದವರು ಕೊಟ್ಟ ನಜರಾಣೆಗಳನ್ನು ಸ್ವೀಕರಿಸಿ ಸವಣೂರಿನ ನವಾಬನಾದನು. ಈ ಸಿಂಹಾಸನಾರೋಹಣವು ೧೭೯೬ರ ಅಂತ್ಯ ಅಥವಾ ೧೭೯೭ರಲ್ಲಿ ನಡೆದಿರಬೇಕು.

ತಂದೆ ಹಕೀಮಖಾನನ ಇಚ್ಛೆಯಂತೆ ಜ್ಯೇಷ್ಠ ಪುತ್ರ ಅಬ್ದುಲ್ ಖೈರಖಾನನೇ ಸಿಂಹಾಸನಕ್ಕೆ ಬಂದಿದ್ದರಿಂದ ಪ್ರಜೆಗಳಿಗೆ, ರಾಜಪರಿವಾರದವರಿಗೆ ಸಂತೋಷವಾಗಿತ್ತು. ನೊಂದವನೆಂದರೆ ಅಧಿಕಾರವನ್ನು ಬಿಟ್ಟುಕೊಟ್ಟ ಅಬ್ದುಲ್ ಹುಸೇನಖಾನ ಒಬ್ಬನೇ.

ಖೈರಖಾನನು ಸಿಂಹಾಸವನ್ನೇರಿದೊಡನೆ ಸುಬ್ಬರಾವ ಅನ್ನುವ ಬ್ರಾಹ್ಮಣನನ್ನು ಶಿಕ್ಷಿಸಬೇಕಾಯಿತು. ಹಕೀಮಖಾನ ಸಾವಿನ ನಂತರ, ಅರಮನೆಯ ಸಂಪತ್ತನ್ನು ವಿತರಿಸುವಾಗ ಇವನು ಕೆಲ ಮುತ್ತು ರತ್ನಗಳನ್ನು ಅಪಹರಿಸಿದ್ದನೆಂಬ ಅಪಾದನೆ ಇವನ ಮೇಲಿತ್ತು. ಅದರಿಂದ ಖೈರಖಾನನು ಸುಬ್ಬರಾವ ಅನಂತನನ್ನು ದರ್ಬಾರಕ್ಕೆ ಕರೆಸಿ ಅಪಹೃತ ಸಂಪತ್ತನ್ನು ಸರಕಾರಕ್ಕೆ ಒಪ್ಪಿಸಬೇಕೆಂದು ಕೇಳಿದನು. ಆದರೆ ಅವನು ಅಗೌರವವಾಗುವ ರೀತಿಯಲ್ಲಿ ಮಾತನಾಡಿದ್ದರಿಂದ ಅಬ್ದುಲ್ ಖೈರಖಾನ ನವಾಬನು ಅವನಿಗೆ ಮರಣದಂಡನೆಯನ್ನು ವಿಧಿಸಿದನು. ನಂತರ, ಸುಬ್ಬರಾವ ಅನಂತನು ತನ್ನಲ್ಲಿದ್ದ ಸಂಪತ್ತನ್ನು ಮರಳಿ ಕೊಟ್ಟನು. ಧೊಂಡೋಪಂತ ಗೋಖಲೆ ಮಧ್ಯದಲ್ಲಿ ಪ್ರವೇಶಿಸಿದ್ದರಿಂದ ಈ ಬ್ರಾಹ್ಮಣನ ಮರಣದಂಡನೆಯ ಶಿಕ್ಷೆ ಕಡಿಮೆಯಾಯಿತು. ಮುಂದೆ ಕೆಲ ದಿವಸಗಳಲ್ಲಿ ಧೊಂಡೋಪಂತನ ಶಿಫಾರಸ್ಸಿನ ಮೇರೆಗೆ ವಾಸುದೇವರಾವ ಅನ್ನುವವನನ್ನು ಸವಣೂರಿನ ದಿವಾಣನನ್ನಾಗಿ ನಿಯಮಿಸಿದನು. ಇವನು ಧೊಂಡೋಪಂತನ ಹತ್ತಿರ ವಕೀಲೀ ಕಾರ್ಯವನ್ನು ಯಶಸ್ವಿ ರೀತಿಯಲ್ಲಿ ನಿರ್ವಹಿಸಿದ್ದನು. ಆದರೆ ಇವನು ಅಧಿಕಾರಕ್ಕೆ ಬಂದೊಡನೆ ಲಂಚರುಷವತ್ತುಗಳನ್ನು ಸ್ವೀಕರಿಸಹತ್ತಿದನು. ಈ ವಿಷಯವು ಅಬ್ದುಲ್ ಖೈರಖಾನನ ಕಿವಿಯವರೆಗೆ ಹೋಗಿದ್ದರಿಂದ ಅವನು ವಿಚಾರಣೆ ನಡೆಸಿ, ವಾಸುದೇವರಾವನನ್ನ ಸೇವೆಯಿಂದ ಕಿತ್ತು ಹಾಕಿದನು.

ಹುಸೇನಖಾನ ನವಾಬನು ತನ್ನ ಒಂದೂವರೆ ಎರಡು ವರ್ಷಗಳ ಆಡಳಿತೆಯಲ್ಲಿ ತಂದೆಯ ಕಾಲದಿಂದ ಸೇವೆ ಸಲ್ಲಿಸುತ್ತ ಬಂದಿದ್ದ ಅಂತಃಪುರಾಧಿಕಾರಿ ಹಬೀಬಖಾನ ಖಲೂದಿ, ಕುದುರೆ ಪಾಗಾದ ಅಧಿಕಾರಿ ಕಮಾಲಖಾನ ಮತ್ತು ಸಯ್ಯದ ಕಮಾಲರನ್ನು ಯಾವ ಅಪಾದನೆಗಳಿಲ್ಲದೆ ಸೆರೆಮನೆಯಲ್ಲಿ ಇಟ್ಟಿದ್ದನು. ಈ ವಿಷಯವು ಖೈರಖಾನನಿಗೆ ತಿಳಿದೊಡನೆ, ಅವನು ವಿಚಾರಣೆ ನಡೆಸಿ ಈ ಆಪಾದಿತರು ನಿರಪರಾಧಿಗಳೆಂದು

ನಿರ್ಣಯವಾದೊಡನೆ ಇವರನ್ನು ಬಂಧಮುಕ್ತರನ್ನಾಗಿ ಮಾಡಿ, ಗೌರವಿಸಿದನು. ಹುಸೇನಖಾನನು ಅಧಿಕಾರದಲ್ಲಿದ್ದಾಗ, ಅವನಿಗೆ ಸಲಹೆಗಾರನಾಗಿದ್ದ ಗುಲಾಮ ಮೊಯುದ್ದೀನ ಹಸನ್ ಜನರಿಗೆ ಅವಾಚ್ಯ ಶಬ್ದಗಳನ್ನು ನುಡಿದು ಅವಮಾನಗೊಳಿಸುತ್ತಿದ್ದುದನ್ನು ಕೇಳಿದ ಖೈರಖಾನನು ಅವನನ್ನು ಸೇವೆಯಿಂದ ಕಿತ್ತುಹಾಕಿದನು.ಇದರಿಂದ ಖೈರಖಾನನ ಕೀರ್ತಿ ಬೆಳೆಯಿತು.

**ಖೈರಖಾನ ನವಾಬನ ಪಿಂಚಣಿ**

ಖೈರಖಾನ ನವಾಬನು ಸಿಂಹಾಸನವನ್ನೇರಿದ ಕೆಲವೇ ದಿವಸಗಳಲ್ಲಿ ತನಗೆ ಪೇಶ್ವೆ ಸರ್ಕಾರದಿಂದ ಬರಬೇಕಾಗಿದ್ದ ವಾರ್ಷಿಕ ಪಿಂಚಣಿ ಬಾಕಿ ಬಂದಿಲ್ಲವೆಂದು ಗಾದೆಯ ಮೇಲಿದ್ದ ಶ್ರೀಮಂತ ಎರಡನೇ ಬಾಜೀರಾವನ ಗಮನಕ್ಕೆ ತಂದನು. ಹಕೀಮಖಾನ ಸತ್ತಂದಿನಿಂದ ಪೇಶ್ವೆ ಸರ್ಕಾರವು ಈ ಪಿಂಚಣಿಯನ್ನು ನಿಲ್ಲಿಸಿಬಿಟ್ಟಿತ್ತು. ಇವನ ಎಲ್ಲ ರಾಜ್ಯವನ್ನೂ ಅವರೇ ವಹಿಸಿಕೊಂಡಿದ್ದರು. ಪಿಂಚಣಿ ನಿಂತ ಸುದ್ದಿಯನ್ನು ಕೇಳಿ ಎರಡನೇ ಬಾಜೀರಾವ್ ಪೇಶ್ವೆ ಕರ್ನಾಟಕದ ಸುಬೇದಾರ ಮೋರೋ ಬಾಪೂಜೀಗೆ ತಕ್ಷಣ ಅಬ್ದುಲ್ ಖೈರಖಾನನಿಗೆ ಅವನ ಪಿಂಚಣಿಯನ್ನು ತಕ್ಷಣ ಕೊಡಬೇಕೆಂದು ಅಜ್ಞಾಪಿಸಿದನು. ಮೋರೋ ಬಾಪೂಜಿಯು,ಸುಬಾದ ಹಣವನ್ನು ವಸೂಲು ಮಾಡುತ್ತಿದ್ದ ಪರಶುರಾವ ರಾಮಚಂದ್ರ ಪಟವರ್ಧನನನಿಗೆ ನವಾಬ ಖೈರಖಾನನೊಡನೆ ಮಾತನಾಡಿ, ಅವನ ಪಿಂಚಣಿಯನ್ನು ಕೊಡಬೇಕೆಂದು ಪತ್ರವನ್ನು ಕಳಿಸಿದನು. ಇದರಿಂದ, ಪ್ರತಿ ತಿಂಗಳೂ ಬರುತ್ತಿದ್ದ ನಾಲ್ಕು ಸಾವಿರ ರೂಪಾಯಿ ಪಿಂಚಣಿಯನ್ನು ಅಬ್ದುಲ್ ಖೈರಖಾನನು ಪ್ರಯಾಸದಿಂದ ಪಡೆಯುವಂತಾಯಿತು.

ಧೊಂಡೋಪಂತ ಗೋಖಲೆ ಸವಣೂರಲ್ಲಿ ಇರುವಾಗಲೇ ಪೇಶ್ವೆಯವರು ಪುಣೆಯಿಂದ "ನಮ್ಮ ಮತ್ತು ನಿಜಾಮರ ನಡುವೆ ಭಿನ್ನಾಭಿಪ್ರಾಯಗಳು ಬಂದುದರಿಂದ ನೀನು ಈ ಕ್ಷಣ ಸೈನ್ಯದೊಂದಿಗೆ ನಮ್ಮೆರಡೂ ರಾಜ್ಯಗಳ ಗಡಿಯಾದ ಹುನುಗುಂದದವರೆಗೆ ಹೋಗಿ, ನಿಜಾಮಶಾಹಿ ನಡೆಸಿದ್ದ ಗೊಂದಲವನ್ನು ನಿವಾರಿಸಿ, ಶಾಂತಿಯನ್ನು ಸ್ಥಾಪಿಸು" ಎಂದು ಗೋಖಲೆಗೆ ಅಜ್ಞಾಪಿಸಿದರು.

ಗೋಖಲೆ ಹುನುಗುಂದಕ್ಕೆ ಹೋಗುವ ಸಿದ್ಧತೆಯಲ್ಲಿರುವಾಗ ಖೈರಖಾನನು ಅವನಿಗೆ "ನೀನೇನೋ ಸವಣೂರಿಂದ ಹೊರಟು ಹೋಗುವೆ. ಆಗ ನನ್ನ ಭೂಮಿಗಳನ್ನು ರಕ್ಷಿಸುವವರಾರು?" ಎಂದು ಕೇಳಿದನು. ಗೋಖಲೆ ತಕ್ಷಣ ವಿಚಾರಿಸಿ "ನಿಮ್ಮ ಸುಭಾ ಈಗ ಹರಿಪಂತ ಫಡಕೇನ ಆಡಳಿತೆಯಲ್ಲಿ ಬರುವುದರಿಂದ ಅವನ ಸಹಾಯವನ್ನು ಕೋರು. ನಾನು ನಿಸ್ಸಹಾಯಕನು. ನಾನು ಇಲ್ಲಿರದಾಗ ನೀನು ಸವಣೂರಲ್ಲಿ ಇರುವುದು ಕ್ಷೇಮವಲ್ಲ. ಕಾರಣ, ನಿನ್ನ ತಮ್ಮಂದಿರು ನಿನಗೆ ತೊಂದರೆಯನ್ನು ಕೊಡಬಹುದು.

ಆದರಿಂದ ನೀನು ಪ್ರವಾಸದ ಆಯಾಸವನ್ನು ತಡೆದುಕೊಳ್ಳುವದಾದರೆ, ನನ್ನೊಡನೆ ಬಾ"ಎಂದನು. ಅಬ್ದುಲ್ ಖೈರಖಾನನಿಗೆ ಧೊಂಡೋಪಂತ ಗೋಖಲೆನ ಮಾತು ಸರಿ ಎನಿಸಿತು. ಅಬ್ದುಲ್ ಖೈರಖಾನನು ಅವನ ಜೊತೆ ಪ್ರಯಾಣವನ್ನು ಬೆಳೆಸಿ, ರೋಣದಲ್ಲಿ ನಿಂತು, ಅವನು ನಿಜಾಮನನ್ನು ಸೋಲಿಸಿ ಬರುವವರೆಗೂ ಅಲ್ಲಿಯೇ ವಾಸ್ತವ್ಯ ಮಾಡಿದನು. ಪ್ರಾಯಶಃ ಖೈರಖಾನನು ಬಲಹೀನನಾಗಿ ಪೇಶ್ವೆಯವರ ಹಂಗಿನಲ್ಲಿಯೇ ಇದ್ದನೇನೋ. ಅವನಿಗೆ ಅಡಚಣೆಯಾಗಿತ್ತು. ಈಗ ಅವನಿಗೆ, ತಾನೇಕೆ ವಿವಾಹವಾದಂದಿನಿಂದ ಶ್ರೀರಂಗಪಟ್ಟಣದಲ್ಲಿಯೇ ಇದ್ದೆನೆಂದು ವ್ಯಥೆಯಾಯಿತು. ಪ್ರಾಯಶಃ ಅಬ್ದುಲ್ ಖೈರಖಾನ ನವಾಬನ ದುರವಸ್ಥೆಗೆ ಒಂದು ರೀತಿ ಟಿಪ್ಪು ಸುಲ್ತಾನ ಕಾರಣನಾದನೇನೋ ಎಂದೆನಿಸಿತು. ಆದರೆ ಕಾಲವು ಮಿಂಚಿತ್ತು.

ಧೊಂಡೋಪಂತ ಗೋಖಲೆ ಹುನುಗುಂದಕ್ಕೆ ಹೋಗಿ ನಿಜಾಮನ ಸದ್ದನ್ನು ಅಡಗಿಸಿದ್ದನೋ ಇಲ್ಲವೋ, ಕೊಲ್ಲಾಪುರದ ಛತ್ರಪತಿ ಎರಡನೇ ಶಿವಾಜಿ ಮಹಾರಾಜನು,ತನ್ನ ಸರದಾರನಾದ ರತ್ನಾಕರ ಪಂತನಿಗೆ ರಾಜಾಜ್ಞೆಯನ್ನಿತ್ತು ಸೈನ್ಯ ಕೊಟ್ಟು ೧೭೭೭ರಲ್ಲಿ ಕರ್ನಾಟಕಕ್ಕೆ ಕಳಿಸಿ, ಪೇಶ್ವೆಯವರ ಅಧೀನದಲ್ಲಿದ್ದ ಕರ್ನಾಟಕದ ಪ್ರದೇಶದ ಮೇಲೆ ದಾಳಿಯನ್ನು ಮಾಡಿಸಿದನು. ಅವನು ಮುನವಳ್ಳಿಯನ್ನು ವಶಪಡಿಸಿಕೊಂಡನು. ಮುಂದೆ ಅದೇ ತಿಂಗಳಲ್ಲಿ ರಾಮದುರ್ಗ ಮತ್ತು ನರಗುಂದ ಸಂಸ್ಥಾನಿಕರಿಂದ ಬಲವಂತವಾಗಿ ಖಂಡಣಿ ವಸೂಲು ಮಾಡಿದನು.ಹಾಗೆಯೇ ಕರ್ನಾಟಕ ಸುಬಾದ ಪ್ರಜೆಗಳನ್ನು ಸುಲಿಯ ಹತ್ತಿದನು. ಇದನ್ನು ನೋಡಿದ ಕರ್ನಾಟಕ ಸರ್ ಸುಬೇದಾರನಾಗಿದ್ದ ಬಾಪೂಜಿ ಸಿಂಧೆ ರತ್ನಾಕರ ಪಂತನೊಡನೆ ಘರ್ಷಣೆಗೆ ಇಳಿದನು. ಪೇಶ್ವೆ ಮತ್ತು ಕೊಲ್ಲಾಪುರ ಸೈನ್ಯಗಳ ಮಧ್ಯೆ ೧೭೭೮, ಜನವರಿ ೨೪ರಂದು ಹುಬ್ಬಳ್ಳಿಯ ಹತ್ತಿರ ಘೋರ ಯುದ್ಧವಾಯಿತು. ಈ ಯುದ್ಧದ ಕಾಲಕ್ಕೆ ರತ್ನಕಾರಪಂತನಿಗೆ ಮೂಲವ್ಯಾಧಿಯಾಗಿದ್ದರಿಂದ ಅವನು ಕೊಲ್ಲಾಪುರದ ಛತ್ರಪತಿಗೆ ಬೇರೆ ಸೈನ್ಯವನ್ನು ಕಳಿಸಬೇಕೆಂದು ಕೇಳಿದನು. ತಕ್ಷಣ ಕೊಲ್ಲಾಪುರದ ಛತ್ರಪತಿಯು ಸ್ವತಃ ಹಿಮವತ್ ಬಹದ್ದೂರ್ ಚವ್ಹಾಣನೆಂಬ ಸರದಾರನೊಡನೆ ಸೈನ್ಯವನ್ನು ತೆಗೆದುಕೊಂಡು ಹುಬ್ಬಳ್ಳಿಯತ್ತ ಧಾವಿಸಿದನು. ಆಗ ಹುಬ್ಬಳ್ಳಿ, ಕಿತ್ತೂರು ದೇಸಾಯಿಯ ಅಧೀನದಲ್ಲಿತ್ತು. ಕೊಲ್ಲಾಪುರದ ಛತ್ರಪತಿಯು ಹಾದಿಯಲ್ಲಿ ಗೋಕಾಕನ್ನು ಗೆದ್ದು ಹುಬ್ಬಳ್ಳಿಗೆ ಬಂದಿದ್ದನು. ಆಗ ಕಿತ್ತೂರು ದೇಸಾಯಿಯು ಛತ್ರಪತಿಯನ್ನು ಭೇಟಿಯಾಗಿ ತನಗೆ ಹುಬ್ಬಳ್ಳಿ ಮತ್ತು ಸಂಗೊಳ್ಳಿಗಳನ್ನು ಮರಳಿ ಕೊಡಿಸಬೇಕೆಂದು ಪ್ರಾರ್ಥಿಸಿದನು. ಅಲ್ಲದೇ, ತಾನು ಹುಬ್ಬಳ್ಳಿಯ ಬಗ್ಗೆ ಎರಡು ಲಕ್ಷ ರೂಪಾಯಿಗಳನ್ನು ಕೊಡುವುದಾಗಿ ಒಪ್ಪಿದನು. ಕೊಲ್ಲಾಪುರದ ಛತ್ರಪತಿಯು ೧೭೭೮ ಫೆಬ್ರವರಿಯಲ್ಲಿ ಹುಬ್ಬಳ್ಳಿಗೆ ಬಂದು ಮರುವಾರ ಮುತ್ತಿಗೆ ಹಾಕಿದನು. ಆಗ ಹುಬ್ಬಳ್ಳಿ ಕಿಲ್ಲೇದಾರನಾಗಿ ಪೇಶ್ವೆಯವರ ಸರದರನಾಗಿದ್ದ ರಾಘೋಪಂತ ಗೋಡಬೋಲೆ ಇದ್ದನು.

ಅವನು ಶಹರ ಮತ್ತು ಹುಬ್ಬಳ್ಳಿ ಕೋಟೆಯನ್ನು ಉಳಿಸಿಕೊಳ್ಳಲು ಜೀವದ ಹಂಗು ತೊರೆದು ಹೋರಾಡಿದರೂ ಸಾಧ್ಯವಾಗಲಿಲ್ಲ. ಕೊಲ್ಲಪುರದ ಛತ್ರಪತಿಯು ಕಿತ್ತೂರ ದೇಸಾಯಿಯಿಂದ ಹೊಸಹುಬ್ಬಳ್ಳಿಗೆ ಎರಡು ಲಕ್ಷ ಮತ್ತು ಹಳೇ ಹುಬ್ಬಳ್ಳಿಗೆ ಮೂರು ಲಕ್ಷ ರೂಪಾಯಿಗಳನ್ನು ತೆಗೆದುಕೊಂಡು ದೇಸಾಯಿಗೆ ಮರಳಿ ಬಿಟ್ಟುಕೊಟ್ಟನು. ಈ ಯುದ್ಧದಲ್ಲಿ ಕಿತ್ತೂರು ದೇಸಾಯಿ ಕೊಲ್ಹಾಪುರದವರ ಕಡೆಗಿದ್ದನು. ನವಲುಗುಂದ, ಶಿರಹಟ್ಟಿ ಮತ್ತು ಡಂಬಳದ ದೇಸಾಯರು ಪೇಶ್ವೆಯವರ ಕಡೆಗಿದ್ದುದರಿಂದ ಕೊಲ್ಹಾಪುರದವರಿಗೆ ಕರ್ನಾಟಕ ಸುಬಾದಲ್ಲಿ ಮುಂದುವರೆಯಲು ಆಗಲಿಲ್ಲ.

ಛತ್ರಪತಿ ಮರಳಿ ಕೊಲ್ಹಾಪುರಕ್ಕೆ ಹೋಗಿ ರತ್ನಾಕರ ಪಂತ ರಾಜಾಜ್ಞೆ ಮತ್ತು ಪ್ರೀತಿರಾವ ಚವ್ಹಾಣ ಅನ್ನುವ ಸರದಾರರೊಂದಿಗೆ ಸೈನ್ಯವನ್ನು ಕೊಟ್ಟು ಎರಡನೇ ಸಲ ಕರ್ನಾಟಕ ಸುಬಾ ಸುಲಿಯಲು ಅಜ್ಞೆ ಮಾಡಿದನು.ಆದರೆ ಹಲವಾರು ಠಾಣೆ, ಕೋಟೆಗಳು ಮತ್ತು ನಲವತ್ತು ಲಕ್ಷ ರೂಪಾಯಿ ವಾರ್ಷಿಕ ಉತ್ಪನ್ನವಿರುವ ಪ್ರದೇಶವು ಪೇಶ್ವೆಯವರ ಸರ್ ಸುಬೇದ್‌ರ ಬಾಪೂಜಿ ಸಿಂಧೇನ ಕಡಗಿದ್ದುದರಿಂದ ಅವನು ಛತ್ರಪತಿ ಸೈನ್ಯವನ್ನು ತಡೆದನು. ಆಗ ಕರ್ನಾಟಕ ಪ್ರಾಂತ್ಯವನ್ನು ಪಟವರ್ಧನರ ಪ್ರತಿನಿಧಿ ನೋಡಿಕೊಳ್ಳುತ್ತಿದ್ದು, ಅವನು ಸಾಲಕ್ಕಾಗಿ ಇಡೀ ಪ್ರಾಂತ್ಯವನ್ನು ಪೇಶ್ವೆಯವರಿಗೆ ಒತ್ತೆ ಹಾಕಿದ್ದನು. ಪೇಶ್ವೆಯವರ ಮತ್ತು ಕೊಲ್ಹಾಪುರದ ಅರಸರ ಮಧ್ಯೆ ಒಳ್ಳೇ ಸಂಬಂಧಗಳು ಇರಲಿಲ್ಲ. ಇದರಿಂದ ಪೇಶ್ವೆ ಮತ್ತು ಪಟವರ್ಧನರು ಸೇರಿ, ಕೊಲ್ಹಾಪುರದ ವಿರುದ್ಧ ಹೋರಾಡಲು ನಿರ್ಧರಿಸಿದರು.

ಪೇಶ್ವೆಯವರು ತಮ್ಮ ಸರದಾರನಾಗಿದ್ದ ಧೊಂಡೋಪಂತ ಗೋಖಲೆಗೆ ಕೊಲ್ಹಾಪುರದ ಛತ್ರಪತಿ ಸೈನ್ಯವು ಮುಂದುವರೆಯದಂತೆ ತಡೆಯಬೇಕೆಂದು ಹೇಳಿದರು. ಇದರಿಂದ ಇಬ್ಬರ ಮಧ್ಯೆ ಘರ್ಷಣೆ ಪ್ರಾರಂಭವಾಯಿತು. ಧೊಂಡೋಪಂತನ ಬಳಿ ಆಗ ಸಾಕಷ್ಟು ಸೈನ್ಯವು ಇರದ್ದರಿಂದ ಕೊಲ್ಹಾಪುರದವರು ಗೋಖಲೆಯೊಡನೆ ಕಾದಾಡಿ ಸವಣೂರು ಪ್ರಾಂತದ ಹನ್ನೊಂದು ಮುಖ್ಯ ಠಾಣೆಗಳನ್ನು ಗೆದ್ದು ತಮ್ಮ ವಶಕ್ಕೆ ತೆಗೆದುಕೊಂಡರು. ಕೊಲ್ಹಾಪುರದವರಿಗೆ ಯಾವ ಹಳ್ಳಿಗಳನ್ನೂ ಜಯಿಸಲು ಸಾಧ್ಯವಾಗಲಿಲ್ಲವೋ, ಅಂಥವುಗಳನ್ನು ಸುಟ್ಟುಹಾಕಿದರು.ನಂತರ ಎರಡೂ ಪಕ್ಷಗಳ ಮಧ್ಯೆ ಯುದ್ಧವಾಗಿ ಕೊಲ್ಹಾಪುರದಿಂದ ಮುನವಳ್ಳಿಯವರೆಗಿನ ಹಾದಿಯು ಕೊಲ್ಹಾಪುರದ ವಶಕ್ಕೆ ಹೋಯಿತು. ಅವರು ಕರ್ನಾಟಕ ಸುಬಾವನ್ನು ಪೂರ್ಣವಾಗಿ ಸುಲಿದರು. ಧೊಂಡೋಪಂತನು ತನ್ನ ಸೈನ್ಯವನ್ನು ತೆಗೆದುಕೊಂಡು ಮುದ್ಗಲ್ಲಿಗೆ ಹೋದನು. ಅಲ್ಲಿ ಸೈನ್ಯವನ್ನು ಜಮಾಯಿಸಿ ತೋಪುಗಳನ್ನು ನಿಲ್ಲಿಸಿದನು. ೧೭೯೮ ಮಾರ್ಚ್ ಹೊತ್ತಿಗೆ ಗೋಖಲೇನ ಬಳಿ ಮೂರು ಸಾವಿರ ಸೈನ್ಯವು ಸೇರಿತ್ತು.

ರತ್ನಾಕರ ರಾಜಾಜ್ಞೆ ಮತ್ತು ಪ್ರೀತಿರಾವ್ ಚವ್ಹಾಣರು, ಹುಬ್ಬಳ್ಳಿ ಗೆದ್ದು, ಸಂಗೊಳ್ಳಿಯನ್ನು ಗೆಡೆಯಲು ಹೋಗಬೇಕೆನ್ನುವಾಗ ಮೊದಲು ಸವಣೂರು, ಶಹಪೂರ,

ಜಾಂಬೋಟಿ, ಚಂದಗಡಗಳನ್ನು ಗೆದ್ದುಕೊಂಡು ಧೊಂಡೋಪಂತನನ್ನು ಎದುರಿಸಬೇಕೋ ಅಥವಾ ಧೊಂಡೋಪಂತನು ತನ್ನ ಸೈನ್ಯವನ್ನು ಬೆಳೆಸುವ ಪೂರ್ವದಲ್ಲಿಯೇ ಎದುರಿಸಬೇಕೋ ಅನ್ನುವ ಬಗ್ಗೆ ಭಿನ್ನಾಭಿಪ್ರಾಯಗಳು ಬಂದವು. ಈ ವಿಷಯವು ಚರ್ಚಿಸಲ್ಪಡುತ್ತಿರುವಾಗಲೇ ಧೊಂಡೋಪಂತ ಗೋಖಲೆ ೧೭೭೮, ಮೇ ೫ ರಂದು ಕೊಲ್ಲಾಪುರದ ಸೈನ್ಯದಮೇಲೆ ದಂಡೆತ್ತಿ ಹೋದನು. ಆಗ ಕೊಲ್ಲಾಪುರ ಸೈನ್ಯವು ಬೆಣ್ಣೀಹಾಳದ ಸಮೀಪದಲ್ಲಿತ್ತು. ಧೊಂಡೋಪಂತನು ತನ್ನ ಸೈನ್ಯವನ್ನು ತೆಗೆದುಕೊಂಡು ಕೋಳಿವಾಡದಲ್ಲಿ ತಳವನ್ನೂರಿದ್ದನು. ಆದರೆ ಉಭಯತ್ರರು ಸಂಘರ್ಷಣೆಗೆ ಇಳಿಯಲಿಲ್ಲ. ಒಂದು ತಿಂಗಳ ಕಾಲ ಅಸ್ಥಿರ ಸ್ಥಿತಿ ನಿರ್ಮಾಣವಾಯಿತು. ಧೊಂಡೋಪಂತ ಗೋಖಲೆ ಕೊಲ್ಲಾಪುರದ ಸೈನ್ಯವನ್ನು ಗೆಲ್ಲುವುದು ಅಸಾಧ್ಯವೆಂದೆನಿಸಿತೇನೋ ಅದಕ್ಕೆ ಅವನು ಮೆಲ್ಲನೆ ಹಿಂದೆ ಸರಿದು ಸವಣೂರು ನಗರವನ್ನು ಪ್ರವೇಶಿಸಿದನು. ಆಗ ಸವಣೂರು ರಾಜ್ಯವು ವಿಶಾಲವಾಗಿದ್ದರಿಂದ ಧೊಂಡೋಪಂತನ ಸೈನ್ಯಕ್ಕೆ ಧವಸ ಧಾನ್ಯಗಳ ಕೊರತೆಯಾಗಲಿಲ್ಲ. ಅಲ್ಲದೆ, ಧೊಂಡೋಪಂತನಿಗೆ ಭದ್ರವಾದ ಸವಣೂರು ಕೋಟೆ ಸಿಕ್ಕಿದ್ದರಿಂದ ಸ್ವಲ್ಪ ಕಾಲ ಮೆತ್ತಗಿದ್ದನು. ರತ್ನಾಕರಪಂತ ರಾಜಾಜ್ಞೆಗೆ ಏನಾದರೂ ಮಾಡಿ ಧೊಂಡೋಪಂತನನ್ನು ಕೋಟೆಯಿಂದ ಹೊರಗೆ ಕರೆತರಬೇಕೆನಿಸಿತು.ಹೀಗೆಯೇ ದಿವಸಗಳು ಕಳೆಯುತ್ತಿದ್ದವು. ಧೊಂಡೋಪತನು ಒಂದು ಯೋಚನೆ ಮಾಡಿ, ಅಡವಿಯಲ್ಲಿ ಗಿಡಗಳಿಗೆ ಗೋಣಿ ಚೀಲಗಳನ್ನು ಕಟ್ಟಿಸಿ ಸುಡಲು ಹೇಳಿದನು. ರಾತ್ರಿ ಆ ಬೆಂಕಿಯನ್ನು ನೋಡಿ ರತ್ನಾಕರ ಪಂತನು ಮೋಸ ಹೋಗಿ ಧೊಂಡೋಪಂತನ ಸೈನ್ಯವು ಬಂದಿದೆಯೆಂದು ತನ್ನ ಎದುರು ಬಂದರೆ, ಬೇರೊಂದು ಮಾರ್ಗದಿಂದ ಸವಣೂರಿಂದ ಹೋಗಿ ಅವನ ಮೇಲೆ ದಾಳಿ ಮಾಡಬೇಕೆಂಬುದೇ ಅವನ ಯೋಜನೆಯಾಗಿತ್ತು. ಆದರೆ ಅದು ಫಲಿಸಲಿಲ್ಲ. ಇದರ ಪರಿಣಾಮವೇನಾಯಿತೆಂದರೆ ಸವಣೂರಿಂದ ಹತ್ತು ಮೈಲುಗಳಂತರದಲ್ಲಿರುವ ಕಾರಡಗಿಯಲ್ಲಿ ಘನಘೋರ ಯುದ್ಧವಾಯಿತು. ಈ ಯುದ್ಧದಲ್ಲಿ ಎರಡೂ ಸೈನ್ಯಗಳಿಗೆ ಅಪಾರ ಹಾನಿಯಾಯಿತು. ಅದರಲ್ಲಿ ಕೊಲ್ಲಾಪುರ ಸೈನ್ಯವು ಹೆಚ್ಚು ಹಾನಿಗೊಳಗಾಯಿತು. ಕೊಲ್ಲಾಪುರದ ಅನೇಕ ಸರದಾರರು ಸತ್ತರಲ್ಲದೆ ರತ್ನಾಕರಪಂತನು ಒಂದು ದಿವಸ ಅಲ್ಲಿಂದ ಮಾಯವಾದನು. ಪ್ರೀತಿರಾವ ಚವ್ಹಾಣನ ಮುಖಕ್ಕೆ ಮೂರು ಗಾಯಗಳಾದವು. ಧೊಂಡೋಪಂತನ ಸೈನಿಕರು, ಎರಡನೇ ಶಿವಾಜಿ ಮಹಾರಾಜನ ಸರದಾರನಾಗಿದ್ದ ರತ್ನಾಕರಪಂತನ ಆನೆ, ಆನೆಯ ಮೇಲಿನ ನಗಾರಿ ನವಬತ್ತು, ಅವರ ನಿಶಾನೆ ಹಾಗೂ ಪಲ್ಲಕ್ಕಿಯನ್ನು ಕಸಿದುಕೊಂಡರು. ಇದರಿಂದ ಹತಾಶನಾದ ರತ್ನಾಕರಪಂತನು ಹಿಂದೆ ಸರಿದು ಮೊದಲು ಕುಂದುಗೋಳಕ್ಕೆ ಹೋಗಿ, ಅಲ್ಲಿಂದ ಮುನವಳ್ಳಿಯತ್ತ ಪ್ರಯಾಣ ಬೆಳೆಸಿದನು. ಧೊಂಡೋಪಂತನ ಸೈನ್ಯದಲ್ಲಿ ನಾಲ್ಕು-ಐದು ನೂರು ಸೈನಿಕರು ಸತ್ತರು. ಕೆಲವರಿಗೆ ಗಾಯಗಳಾದವು.ನಿಶ್ಚಿತವಾಗಿ ಯಾರಿಗೂ ಜಯವಾಗದಿದ್ದರೂ ಕೊಲ್ಲಾಪುರದ ಸೈನ್ಯವು ಹಣ್ಣುಹಣ್ಣಾಯಿತು.

ಧೊಂಡೋಪಂತನಿಗೆ ಕೂಡ ಈ ಕಾರಡಗಿ ಯುದ್ಧವು ನಿರ್ಣಾಯಕ ಯುದ್ಧವೆಂದೆನಿಸಲಿಲ್ಲ. ಈ ಯುದ್ಧದಲ್ಲಿ ಕಾರಡಗಿ ದೇಶಪಾಂಡೆ ಕೊಲ್ಲಾಪುರದವರಿಗೆ ಸಹಾಯ ಮಾಡಿದರೂ ನಿಷ್ಪ್ರಯೋಜಕವಾಯಿತು. ಧೊಂಡೋಪಂತನು ಕೊಲ್ಲಾಪುರದ ಸೈನ್ಯವನ್ನು ಬೆನ್ನಟ್ಟಿ ಮುನವಳ್ಳಿಯವರೆಗೆ ಹೋಗದೆ, ಧಾರವಾಡಕ್ಕೆ ಬಂದನು. ತಮ್ಮ ಸೈನ್ಯಕ್ಕಾದ ಅಪಮಾನಕರ ಸೋಲನ್ನು ಕೇಳಿ ಕೊಲ್ಲಾಪುರದ ಛತ್ರಪತಿ ಎರಡನೇ ಶಿವಾಜಿ ಮಹಾರಾಜನು ರಾಯಾಜಿ ಜಾಧವ, ಹೈಬತ್‌ರಾವ ಗಾಯಕವಾಡ ಮತ್ತು ವಿಶ್ವಾಸದ ಸರದಾರರ ಜೊತೆ ಎರಡು ಸಾವಿರ ಸೈನ್ಯವನ್ನು ಮತ್ತೆ ಕಳಿಸಿದನು. ಅಷ್ಟೇ ಅಲ್ಲ ಶಿವಾಜಿ ಮಹಾರಾಜನೇ ಬಂದು ಮನವಳ್ಳಿಯಲ್ಲಿ ತಳವೂರಿದನು. ಆದರೆ ಅತ್ತ ಪರಶುರಾಮ ಭಾವೂ ಸಾತಾರೆಯ ಮೇಲೆ ದಾಳಿಯನ್ನು ಪ್ರಾರಂಭಿಸಿದ್ದರಿಂದ ಎರಡನೇ ಶಿವಾಜಿ ಮಹಾರಾಜನು ಮರಳಿ ಕೊಲ್ಲಾಪುರಕ್ಕೆ ಹೋದನು.

ಈ ಮಧ್ಯೆ ಸವಣೂರಲ್ಲಿ ಇನ್ನೊಂದು ಸುಂಟರಗಾಳಿ ಬೀಸಿತು. ಕೊಲ್ಲಾಪುರದ ಸೈನ್ಯವು ದಂಗೆಯೆದ್ದ ಪ್ರದೇಶವೆಲ್ಲವೂ ಹರಿಪಂತ ಪಟವರ್ಧನನ ಆಡಳಿತೆಯಲ್ಲಿತ್ತು. ಆದರೆ, ಈ ಪ್ರದೇಶವು ಅತ್ಯಂತ ದುರವಸ್ಥೆಯಲ್ಲಿತ್ತು. ಲಕ್ಷಾವಧಿ ರೂಪಾಯಿ ಉತ್ಪನ್ನ ಬರಬೇಕಿದ್ದ ಈ ಪ್ರದೇಶದಲ್ಲಿ ಬರುತ್ತಿದ್ದ ಉತ್ಪನ್ನವು ಅಬ್ದುಲ್ ಖೈರಖಾನ ನವಾಬನ ಉಪ್ಪು ಮತ್ತು ಮೆಣಸಿನಕಾಯಿಗೆ ಸಾಲುತ್ತಿರಲಿಲ್ಲ. ಈ ಪ್ರದೇಶದ ವ್ಯವಸ್ಥೆಯನ್ನು ನೋಡಿಕೊಳ್ಳಲು ಮತ್ತೆ ಅಬ್ದುಲ್ ಖೈರಖಾನ ನವಾಬನ ವಶಕ್ಕೆ ಒಪ್ಪಿಸಲಾಯಿತು.ಇದರ ಬಗ್ಗೆ ಒಂದು ಹೊಸ ಸನದನ್ನು ಹೊರಡಿಸಿ, ವಂಶಪರಂಪರವಾಗಿ ಬಂದ ಸವಣೂರಿನ ಇಪ್ಪತ್ತೆರಡೂ ಮಹಲುಗಳನ್ನು ಪುನಃ ಆಡಳಿತಕ್ಕೆ ದಿಲೇರಜಂಗ ದಿಲೇರಬಹದ್ದೂರ ಅಬ್ದುಲ ಖೈರಖಾನ ನವಾಬನಿಗೆ ಒಪ್ಪಿಸಲಾಗಿದೆ ಎಂದು ತಿಳಿಸಲಾಯಿತು. ಆ ಮಹಲುಗಳ ವಿವರಗಳು ಹೀಗಿವೆ:

೦೧. ಬಂಕಾಪುರ ಕೋಟೆ
೦೨. ಕಾರಡಗಿ ಪರಗಣಾ
೦೩. ಆಡೂರು ಪರಗಣಾ
೦೪. ಕಾಗಿನೆಲ್ಲಿ ಮತ್ತು ಹಾವೇರಿ ಪರಗಣಾ
೦೫. ರಟ್ಟೀಹಳ್ಳಿ ಪರಗಣಾ
೦೬. ಕೋಡ ಪರಗಣಾ
೦೭. ಹಿರೇಕೆರೂರ ಪರಗಣಾ
೦೮. ನಿಡಸಂಗಿ ಸಮತ್
೦೯. ಸಿಗ್ಗಾಂವ ಸಮತ್
೧೦. ಗುತ್ತಲ ಪರಗಣಾ
೧೧. ರಾಣೇಬೆನ್ನೂರು ಪರಗಣಾ

೧೨. ತಿಳವಳ್ಳಿ ಪರಗಣಾ

೧೩. ಹಾವನೂರು, ಹೊಸಕೋಟೆ

೧೪. ಮಾಸೂರು

೧೫. ಕೆರೂರು (ಖುರ್ದ) ಪರಗಣಾ

"ಪೇಶ್ವೆಯವರ ಪ್ರತಿನಿಧಿಯಾಗಿ ಈಗ ಈ ಇಪ್ಪತ್ತೆರಡು ಪರಗಣಾಗಳ ವ್ಯವಸ್ಥೆ ನೋಡುತ್ತಿರುವ ಹಕೀಮಖಾನ ನವಾಬರ ಹಳೆಯ ಸೇವಕನಾದ ಕಾರಕೂನ ಕೃಷ್ಣಾಜಿ ವೆಂಕಾಜಿ ದೇಶಪಾಂಡೆ ಇನ್ನು ಮುಂದೆ ನೇರವಾಗಿ ಅಬ್ದುಲ್ ಖೈರಖಾನ ನವಾಬನ ಆಜ್ಞೆಗಳನ್ನು ಪಾಲಿಸಬೇಕು. ಅವನು, ನವಾಬ ಖೈರಖಾನನಿಂದ ಲಿಖಿತ ಆಜ್ಞೆಗಳನ್ನು ಪಡೆದು ಸಂಬಂಧಿಸಿದವರಿಗೆ ಕಳಿಸಬೇಕು"ಎಂದು ಸನದಿನಲ್ಲಿ ತಿಳಿಸಲಾಗಿತ್ತು.

ಇದೇ ಕಾಲಕ್ಕೆ ಕೊಲ್ಲಾಪುರದದ ಛತ್ರಪತಿ ಎರಡನೇ ಶಿವಾಜಿಯು ಕರ್ನಾಟಕದ ಸುಬಾದಲ್ಲಿದ್ದ ಬಹುಭಾಗ ಭೂಮಿಗಳನ್ನು ವಶಪಡಿಸಿಕೊಂಡು ಅದರ ಆಡಳಿತಕ್ಕೆ ತನ್ನ ಸರದಾರ ರತ್ನಾಕರಪಂತ ರಾಜಾಜ್ಞೆಯನ್ನು ನಿಯಮಿಸಿದನು. ಈ ರತ್ನಾಕರ ಪಂತನು ತಾನೇ ರಾಜನೆಂಬ ಭಾವನೆಯಿಂದ ರಾಜಾಜ್ಞೆಗಳನ್ನು ಹೊರಡಿಸಿದನು. ನಂತರ ಹುಬ್ಬಳ್ಳಿಯಲ್ಲಿ ತಳವೂರಿದನು.

ಕರ್ನಾಟಕದಲ್ಲಿ ನಡೆದ ರತ್ನಾಕರಪಂತನ ಪುಂಡಾಟಿಕೆ ಕೇಳಿ,ಪುಣೆಯ ಪೇಶ್ವೆಯವರು ಧೊಂಡೋಪಂತನಿಗೆ ಇವನನ್ನು ಸೋಲಿಸಿ, ರತ್ನಾಕರಪಂತನು ವಶಪಡಿಸಿಕೊಂಡು ಎಲ್ಲ ನಮ್ಮ ಠಾಣೆಗಳನ್ನು ಮರಳಿ ಪಡೆದು, ನಮ್ಮ ಹಳೆಯ ಅಧಿಕಾರಿಗಳನ್ನೇ ಪುನಃ ನಿಯಮಿಸಬೇಕು ಎಂದು ತಿಳಿಸಿದರು.

ಈ ಅಜ್ಞೆಗಳನ್ನು ನೋಡಿದ ಧೊಂಡೋಪಂತನು ಕರ್ನಾಟಕ ಸುಬಾದ ಅಸ್ತವ್ಯಸ್ತತೆಯನ್ನು ಸರಿಪಡಿಸಲು ಮತ್ತೆ ಯುದ್ಧದ ಸಿದ್ಧತೆಗಳನ್ನು ನಡೆಸಿದನು.ಆಗ ಧೊಂಡೋಪಂತನು ನವಾಬ ಖೈರಖಾನನನ್ನು ಕೆಲ ದಿವಸ ಶಿರಹಟ್ಟಿಗೆ ಕಳಿಸಿದನು. ಧೊಂಡೋಪಂತನಿಗೆ ನವಾಬನು ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ಸವಣೂರಲ್ಲಿ ಇರುವುದು ಕ್ಷೇಮವಲ್ಲವೆನಿಸಿತು. ಖೈರಖಾನನು ತನ್ನ ನಂಬಿಗೆಯ ಅಫಘಾನೀ ಸರದಾರ ಅರೀಫ್ ಖಾನ್ , ಬ್ರಾಹ್ಮಣನಾದ ಲಾಗೂ ಮನೆತನದ ಶಿವಾರಾಮಪಂತ ಕಾರಕೂನ, ನರಸಿಂಗರಾವ್ ಘೋರ್ಪಡೆ ಮತ್ತು ಚೌಕೀದಾರ ಬಾಬಾ ನಾಯಕನನ್ನು ಕರೆದುಕೊಂಡು ಶಿರಹಟ್ಟಿಗೆ ಹೋದನು. ಇತ್ತ ಧೊಂಡೋಪಂತನು, ರತ್ನಾಕರಪಂತನನ್ನು ಕೊಲ್ಲಾಪುರಕ್ಕೆ ಹೋಗುವವರೆಗೂ ಬೆನ್ನಟ್ಟಿ ಹೋದನು. ಧೊಂಡೋಪಂತನು ಅಸ್ಥಿರ ಸ್ಥಿತಿಯನ್ನು ಸರಿಪಡಿಸುವವರೆಗೂ ಅಬ್ದುಲ್ ಖೈರಖಾನನು ಕೆಲಕಾಲ ಶಿರಹಟ್ಟಿ, ಕೆಲಕಾಲ ಕರ್ಜಗಿ ಮತ್ತು ಕೆಲಕಾಲ ಪಾಳಾದಲ್ಲಿ ಕಳೆದನು.

ಧೊಂಡೋಪಂತನು ಪುನಃ ಶಾಂತಿಯನ್ನು ಸ್ಥಾಪಿಸಿ ಅಬ್ದುಲ್ ಖೈರಖಾನ ನವಾಬನಿಗೆ ಸವಣೂರಿಗೆ ಬರಬೇಕೆಂದು ಹೇಳಿದನು. ಖೈರಖಾನನು ಸವಣೂರಿಗೆ ಬಂದ ಮೇಲೆ ಧೊಂಡೋಪಂತನು ಸೈನ್ಯದೊಂದಿಗೆ ಧಾರವಾಡಕ್ಕೆ ಹೋಗಿ ತಳವೂರಿದನು.

ಈ ಘಟನೆ ನಡೆದ ಕೆಲವೇ ದಿವಸಗಳಲ್ಲಿ ಛತ್ರಪತಿ ಮತ್ತು ಪರಶುರಾಮ ಭಾವೂ ಪಟವರ್ಧನರ ಮಧ್ಯೆ ಸಂಘರ್ಷವಾಗಿ, ಪರಶುರಾಮ ಭಾವೂ ಗದಗದಲ್ಲಿ ವಾಸ್ತವ್ಯ ಮಾಡಿದ್ದ ಧೊಂಡೋಪಂತ ಗೋಖಲೆಯನ್ನು ಭೇಟಿಯಾಗಿ ತಾನು ಮೊಗಲಾಯಿ ಪ್ರದೇಶದಲ್ಲಿ ಸುವ್ಯವಸ್ಥೆಗೊಳಿಸುವುದಾಗಿ ತಿಳಿಸಿದನು. ಅಲ್ಲದೆ, ತನ್ನೊಡನೆ ಕರೆತಂದಿದ್ದ, ತನ್ನ ಮಗನಾದ ರಾಮಚಂದ್ರ ಅಪ್ಪಾಸಾಹೇಬ ಪಟವರ್ಧನನನ್ನು ಕೆಲಸೈನ್ಯದೊಂದಿಗೆ ಅಸ್ತವ್ಯಸ್ತವಾಗಿ ಹೋಗಿದ್ದ ಸವಣೂರಿನ ಎಲ್ಲ ತಾಲೂಕುಗಳಲ್ಲಿ ವ್ಯವಸ್ಥೆಯನ್ನು ನಿರ್ಮಿಸಲು ಕಳಿಸಿದನು.

ಈ ವ್ಯವಸ್ಥೆ ನೋಡುತ್ತಿದ್ದ ಪರಶುರಾಮ ಭಾವೂ ತನ್ನನ್ನು ಕಾಣಬೇಕೆಂದು ನವಾಬ ಖೈರಖಾನನಿಗೆ ಹೇಳಿಕಳಿಸಿದನು. ನವಾಬ ಖೈರಖಾನನು ಪರಶುರಾಮ ಭಾವೂನನ್ನು ಗೋಕಾಕಕ್ಕೆ ಹೋಗಿ ಭೇಟಿಯಾದನು. ಪರಶುರಾಮ ಭಾವೂ ನವಾಬನಿಗೆ "ನೀನು ಕೆಲಕಾಲ ನನ್ನೊಂದಿಗೆ ಇದ್ದರೆ, ನಿನ್ನ ರಾಜ್ಯದ ಉತ್ಪನ್ನವನ್ನು ಸರಿಪಡಿಸಿ, ನಿನ್ನ ವೆಚ್ಚಕ್ಕೆ ವ್ಯವಸ್ಥೆ ಮಾಡಿಕೊಡುವೆ"ಎಂದು ಹೇಳಿದನು. ಪರಶುರಾಮ ಭಾವೂನ ಆಶ್ವಾಸನೆಯ ಮೇರೆಗೆ ಖೈರಖಾನ ನವಾಬನು ಕೆಲಕಾಲ ಗೋಕಾಕದಲ್ಲಿ ಇದ್ದನು. ಮುಂದೆ,ಕೆಲವೇ ದಿವಸಗಳಲ್ಲಿ, ಕೊಲ್ಹಾಪುರದ ಛತ್ರಪತಿಯ ಮತ್ತು ಪರಶುರಾಮ ಭಾವೂನ ಮಧ್ಯೆ ಯುದ್ಧವಾಗಿ ಪರಶುರಾಮ ಭಾವೂ ತನ್ನ ತಲೆಯನ್ನೇ ಕಳೆದುಕೊಂಡನು. ಈ ಭೀಕರ ಕೊಲೆಯಾದ ಮೇಲೆ ಅಪ್ಪಾಸಾಹೇಬ ಮತ್ತು ದಾಜೀಸಾಹೇಬ ಪಟವರ್ಧನರು ಸೇರಿ ಅಬ್ದುಲ್ ಖೈರಖಾಸ ನವಾಬನನ್ನು ಪುನಃ ಸವಣೂರಿಗೆ ಕಳಿಸಿದರು.

## ಟಿಪ್ಪುವಿನ ಮರಣ

೧೭೮೭ಕ್ಕೂ ಮೊದಲೇ ಕಾರ್ನ್‌ವಾಲೀಸನು ಒಂದು ಮಿತ್ರಕೂಟವನ್ನು ರಚಿಸಿ, ಟಿಪ್ಪುವನ್ನು ಬಗ್ಗು ಬಡಿಯುವ ಪ್ರಸ್ತಾವನೆಯನ್ನು ಪುಣೆಯ ನಾನಾಸಾಹೇಬ ಫಡ್ನವೀಸನ ಮುಂದೆ ಇರಿಸಿದ್ದನು. ಮುತ್ಸದ್ದಿಯಾಗಿದ್ದ ಪೇಶ್ವೆಯವರ ಕಾರಭಾರಿ ನಾನಾಸಾಹೇಬ ಫಡ್ನವೀಸನು ಒಳ್ಳೇ ಪ್ರತಿಕ್ರಿಯೆಯನ್ನು ವ್ಯಕ್ತಪಡಿಸಿದ್ದನು. ಆದರೆ ಪೇಶ್ವೆಯವರ ಆಡಳಿತೆಯಲ್ಲಿ ನಾನಾಸಾಹೇಬನಷ್ಟೇ ಪ್ರಭಾವಶಾಲಿಯಾಗಿದ್ದ ಮಹಾರಾಜ ಸಿಂಧ್ಯೆ ಸರದಾರನ ರಾಜತಾಂತ್ರಿಕ ನೈಪುಣ್ಯತೆ ಮತ್ತು ಸೈನಿಕ ಚಾತುರ್ಯಗಳಿಂದ ನಾನಾ ಫಡಣವೀಸನ ಯೋಜನೆಗಳೆಲ್ಲ ಬುಡಮೇಲಾದವು. ಪುಣೆಯ ಪೇಶ್ವೆಯವರು ಇಂಗ್ಲೀಷರ ಒಕ್ಕೂಟವನ್ನು ಸೇರಬಾರದೆಂದು ಮನ ಒಲಿಸಲು ಟಿಪ್ಪು ಚಿನ್ನದ ಚೀಲಗಳನ್ನು ಪುಣೆಗೆ

ಕಳಿಸಿದ್ದನು. ಆದರೆ ಪೇಶ್ವೆಗಳು ಅದಕ್ಕೆ ಬಲಿಯಾಗಲಿಲ್ಲ. ಇಂಗ್ಲೀಷರು ತಮ್ಮ ಬಲವನ್ನೆಲ್ಲ ಒಂದೆಡೆ ಸೇರಿಸಿ, ೧೭೯೯ರಲ್ಲಿ ಶ್ರೀರಂಗಪಟ್ಟಣವನ್ನು ಮುತ್ತಿ ವಶಪಡಿಸಿಕೊಂಡರು. ಈ ಯುದ್ಧದಲ್ಲಿ ಪೇಶ್ವೆಯವರು ತಟಸ್ಥರಾಗಿ ಉಳಿದರು. ಈ ಯುದ್ಧದಲ್ಲಿ ೧೭೯೯, ಮೇ ನಾಲ್ಕರಂದು ಟಿಪು ಸುಲ್ತಾನನು ಮಡಿದನು. ಅದರೊಂದಿಗೆ ಅವನ ಮಹತ್ವಾಕಾಂಕ್ಷೆಯೂ ಗೋರಿ ಕಂಡಿತು. ಮೈಸೂರು ಮಹಾರಾಜರ ರಾಜ್ಯವನ್ನು ಕಬಳಿಸಿದ ಹೈದರ ಅಲಿ ರಾಜ್ಯ ಅಸ್ತಂಗತವಾಯಿತು. ಟಿಪು ಸತ್ತೊಡನೆ ಅವನ ಸೆರೆಯಿಂದ ಮರಾಠ ಸರದಾರನಾಗಿದ್ದ ಧೊಂಡಿಯಾ ವಾಘನು ತಪ್ಪಿಸಿಕೊಂಡು ಹೊರಬಂದು ಸೈನ್ಯವನ್ನು ಸೇರಿಸಿ, ಕರ್ನಾಟಕದ ಹಲವಾರು ಕೋಟೆಗಳನ್ನು ಗೆದ್ದನು. ಟಿಪು , ಧೊಂಡಿಯಾ ವಾಘನು ಧರ್ಮಾಂತರಗೊಳ್ಳಲು ನಿರಾಕರಿಸಿದ್ದರಿಂದ, ಅವನನ್ನು ಒತ್ತಾಯದಿಂದ ಮುಸಲ್ಮಾನನನ್ನಾಗಿ ಮಾಡಿ ಅವನಿಗೆ ಮಲೀಕ ಜಹಾನಖಾನ ಎಂಬ ಹೊಸ ಹೆಸರಿಟ್ಟನು. ಧೊಂಡೀಯಾ ವಾಘನ ನಿಜ ಹೆಸರು ಧೊಂಡಿಯಾ ಪವಾರ. ಆದರೆ ಇವರ ಮನೆತನದವರು ಹಿಂದೆ ವಿಜಾಪುರದ ಆದಿಲ್ ಶಾಹಿಗೆ ಹುಲಿಹಾಲು ತಂದು ಕೊಟ್ಟಿದ್ದರಿಂದ ಇವರ ಮನೆತನಕ್ಕೆ ಅದಿಲ್ ಶಹಾನು ವಾಘ ಅಂದರೆ ಹುಲಿ ಅನ್ನುವ ಬಿರುದನ್ನಿತ್ತನು. ವಾಘನು ೧೭೯೯, ಆಗಸ್ಟ್ ಹದಿನೇಳರಂದು ೧೨೦೦ ಅಶ್ವದಳ, ೩೦೦ ಕಾಲ್ದಳವನ್ನು ಕಲೆಹಾಕಿ ಶಿಕಾರಪುದ ಮೇಲೆ ದಾಳಿ ಮಾಡಿ, ತಾನೇ ಅದರ ರಾಜನೆಂದು ಸಾರಿದನು. ನಂತರ ಅವನು ಗೋಕಾಕ, ಸವಣೂರು, ಕುಂದಗೋಳ, ಶಿರಹಟ್ಟಿ, ಗದಗ, ಅಣ್ಣಿಗೇರಿ, ಮೊದಲಾದ ಕೋಟೆಗಳ್ನನು ವಶಪಡಿಸಿಕೊಂಡನು. ಉತ್ತರ ಕರ್ನಾಟಕದ ದೇಸಾಯಿ, ದೇಶಪಾಂಡೆ, ದೇಶಮುಖರು ಧೋಂಡಿಯಾನಿಗೆ ಸಹಾನುಭೂತಿಪರರಾಗಿದ್ದರು. ಕಾರಣ, ಪೇಶ್ವೆಯವರಿಂದ ಮತ್ತು ಬ್ರಿಟೀಶರಿಂದ ತೊಂದರೆಗೊಳಗಾದ ಈ ದೇಸಾಯಿ, ದೇಶಪಾಂಡೆ ಅವರಿಗೆ ಧೋಂಡಿಯಾ ಸಹಾಯ ಮಾಡಿದ್ದನು.

ಸುಂಟರಗಾಳಿಯಂತೆ ಧೋಂಡಿಯಾನು ಪೇಶ್ವೆಯವರ ಕರ್ನಾಟಕ ಸುಬಾ ಸುಲಿಯುವುದನ್ನು ನೋಡಿದ ಎರಡನೇ ಬಾಜೀರಾವ ಪೇಶ್ವೆ ಧೋಂಡೋಪಂತ ಗೋಖಲೆಗೆ ತನ್ನೆಲ್ಲ ಸೈನಿಕ ಠಾಣೆಗಳನ್ನು ಬ್ರಿಟೀಷರಿಗೆ ಒಪ್ಪಿಸಿ, ಸವಣೂರಿಗೆ ಹೋಗಿ ಧೋಂಡಿಯಾ ವಾಘನನ್ನು ನಿರ್ಮೂಲನ ಮಾಡಬೇಕೆಂದು ಆಜ್ಞಾಪಿಸಿದನು. ಧೋಂಡೋಪಂತನು ತನ್ನೊಡನೆ ಹರಿಪಂತ ಭಾವೂನನ್ನು ಕರೆದುಕೊಂಡು, ಧೋಂಡಿಯಾ ವಾಘನನ್ನು ಅಟ್ಟಿಸಿಕೊಂಡು ಹೋಗಿ ಹಳ್ಯಾಳದ ಹತ್ತಿರ ಸಂಧಿಸಿದನು. ಆದರೆ ವಾಘನು ಮಣಿಯಲಿಲ್ಲ. ಇಷ್ಟೇ ಅಲ್ಲ, ಇಬ್ಬರ ಮಧ್ಯೆ ಲೋಂಡಾದಲ್ಲಿ ಯುದ್ಧವಾಗಿ, ಧೋಂಡಿಯಾ ವಾಘನು ಪೇಶ್ವೆಯವರ ಸೇನಾಪತಿ ಧೊಂಡೋಪಂತ ಗೋಖಲೇನ ತಲೆಯನ್ನು ಕತ್ತರಿಸಿ ಹಾಕಿದನು. ಈ ಯುದ್ಧದಲ್ಲಿ ಧೋಂಡೋಪಂತನ ಸಹಾಯಕ್ಕೆ ಹೋಗಿದ್ದ ಚಿಂತಾಮಣರಾವ ಪಟವರ್ಧನನ ಮುಖಕ್ಕೆ ಗಾಯವಾಯಿತು. ಧೋಂಡೋಪಂತ ನೊಂದಿಗಿದ್ದ ಅವನ ಮಗನಾದ

ಬಾಬಾಸಾಹೇಬ ಗೋಖಲೆ ಕೂಡ ಜಖಮಗೊಂಡನು. ಈ ಯುದ್ಧದಲ್ಲಿ ಧೋಂಡಿಯಾನ ೭೫ ಹತ್ತು ಸಾವಿರ ಅಶ್ವದಳ, ಐದುಸಾವಿರ ಕಾಲ್ಬಳವಿತ್ತು. ಜೊತೆಗೆ ಎಂಟು ತೋಪುಗಳಿದ್ದವು. ಈ ಯುದ್ಧದಲ್ಲಿ ಧೋಂಡಿಯಾ ವಾಘನು ಧೋಂಡೋಪಂತ ಗೋಖಲೆಯನ್ನು ಕೊಂದು, ಅವನ ರಕ್ತದಲ್ಲಿ ತನ್ನ ಮೀಸೆಯನ್ನು ತೊಳೆದುಕೊಂಡನು.

ಧೋಂಡಿಯಾ ವಾಘನ ಪುಂಡಾಟವನ್ನು ಸಹಿಸದ ಬ್ರಿಟಿಶರು ಪೇಶ್ವೆಯವರ ಸಹಾಯಕ್ಕೆ ನುರಿತ ಸೇನಾಪತಿಯಾಗಿದ್ದ ಕರ್ನಲ್ ವೆಲ್ಲೆಸ್ಲಿಯನ್ನು ಕಳಿಸಿದರು. ವೆಲ್ಲೆಸ್ಲಿಯು ದೇವಗಿರಿಯ ಹತ್ತಿರ ವರದಾ ನದಿಯನ್ನು ದಾಟಿ ಸವಣೂರಿಗೆ ಬಂದನು. ಅವನು ಭಾರವಾದ ತೋಪುಗಳನ್ನು ಸವಣೂರಲ್ಲಿ ಬಿಟ್ಟು, ಸಣ್ಣ ಸೈನ್ಯದ ತುಕಡಿಯೊಂದಿಗೆ ಕುಂದಗೋಳಕ್ಕೆ ಹೋದನು. ಆದರೆ ಧೋಂಡಿಯಾ ವಾಘ ಅಷ್ಟರಲ್ಲಿ ಡಂಬಳಕ್ಕೆ ಹೋಗಿದ್ದನು. ವೆಲ್ಲೆಸ್ಲಿಗೆ ಧೋಂಡಿಯಾ ವಾಘನನ್ನು ಹಿಡಿಯುವದೇ ದುಸ್ತರವಾಯಿತು. ಧೋಂಡಿಯಾ ಗೆದ್ದಕೋಟೆ, ಪ್ರದೇಶಗಳನ್ನು ವೆಲ್ಲೆಸ್ಲಿ ಮರಳಿ ಪಡೆದನು. ಕರ್ನಲ್ ವೆಲ್ಲೆಸ್ಲಿ ಕೊನೆಗೆ ಪೇಶ್ವೆ ಮತ್ತು ನಿಜಾಮನ ಸಹಾಯ ಪಡೆದು ಕೋಣಗಲ್ಲಿನಲ್ಲಿ ಧೋಂಡಿಯಾ ವಾಘನನ್ನು ಸಂಧಿಸಿ, ೧೮೦೦ ಸೆಪ್ಟೆಂಬರ್ ೧೦ ರಂದು ಯುದ್ಧದಲ್ಲಿ ಕೊಂದು ಹಾಕಿದನು. ಇಲ್ಲಿಗೆ ಕ್ರಾಂತಿವೀರ ವಾಘನ ಬಂಡು ನಿಂತಂತಾಯಿತು.

ಧೋಂಡಿಯಾ ವಾಘನ ದಾಳಿಗಳು ಕರ್ನಾಟಕದಲ್ಲಿ ಅಲ್ಲೋಲ ಕಲ್ಲೋಲ ಮಾಡುತ್ತಿದ್ದಾಗ, ಪೇಶ್ವೆಯವರು ಅಬ್ದುಲ್ ಖೈರಖಾನ ನವಾಬನನ್ನು ಆಂಗ್ಲ ಸೈನಿಕರ ರಕ್ಷಣೆಯಲ್ಲಿ ಸೋಂದಾಕ್ಕೆ ಕಳಿಸಿದ್ದರು. ಅವನು ಸವಣೂರಲ್ಲಿ ಇರುವುದು ಸೂಕ್ತವಲ್ಲವೆಂದು ಬ್ರಿಟಿಶರು ಈ ಯೋಜನೆ ಮಾಡಿದರು. ವೆಲ್ಲೆಸ್ಲಿಯು ನವಾಬ ಖೈರಖಾನ ಆರ್ಥಿಕ ಸ್ಥಿತಿ ಚಿಂತಾಜನಕವಾಗಿದೆಯೆಂದು ಅರಿತು ತಾತ್ಪೂರ್ತಿಕವಾಗಿ ಪಿಂಚಣಿಯ ಬಗ್ಗೆ ಸ್ವಲ್ಪ ಹಣವು ಬರುವಂತೆ ವ್ಯವಸ್ಥೆ ಮಾಡಿ, ಧೋಂಡಿಯಾ ವಾಘನೊಡನೆ ಹೋರಾಡಲು ಹೋದನು.ಆದರೆ ಧೋಂಡಿಯಾನ ಗದ್ದಲದಲ್ಲಿ ಆ ವ್ಯವಸ್ಥೆ ಸರಿಯಾಗಿ ನಡೆಯಲಿಲ್ಲ. ಇದರಿಂದ ನವಾಬ ಖೈರಖಾನನ ಆರ್ಥಿಕ ಸ್ಥಿತಿ ಸುಧಾರಿಸಲಿಲ್ಲ.

ಧೋಂಡಿಯಾ ವಾಘನು ತೀರಿಕೊಂಡೊಡನೆ, ಕರ್ನಲ್ ವೆಲ್ಲೆಸ್ಲಿ ತನಗೆ ಯುದ್ಧದಲ್ಲಿ ಸಹಾಯ ಮಾಡಿದ ಚಿಂತಾಮಣರಾವ್ ಅಪ್ಪಾಸಾಹೇಬ ಪಟವರ್ಧನ, ಹರಿಪಂತ ಭಾವೂ ಹಾಗೂ ಬಾಬಾ ಸಾಹೇಬ ಗೋಖಲೆಗೆ ಸತ್ಕಾರ ಮಾಡಿದನು. ಮರಳಿ ಪುಣೆಗೆ ಹೋಗಿ ಅಬ್ದುಲ್ ಖೈರಖಾನ ನವಾಬನನ್ನು ಸೋಂದಾದಿಂದ ಪುಣೆಗೆ ಕರೆಸಿಕೊಂಡನು. ಖೈರಖಾನನು ಸಾಂಪತ್ತಿಕ ಸ್ಥಿತಿ ಶೋಚನೀಯವಾಗುತ್ತ ನಡೆಯಿತು. ವೆಲ್ಲೆಸ್ಲಿಯು ನವಾಬನ ಸಮ್ಮುಖದಲ್ಲಿ ಬಾಪೂ ಗೋಖಲೆಯನ್ನು ಕರೆಸಿ "ನವಾಬ ಖೈರಖಾನ ಬಹದ್ದೂರರು ತಮ್ಮ ಅಂತಸ್ತಿಗೆ ತಕ್ಕ ಉಪಜೀವಿಸಿ, ಗೌರವದಿಂದ ಇರುವಂತೆ ಮಾಡಲು, ಅವರಿಗೆ

ಸಲ್ಲತಕ್ಕ ಪಿಂಚಣಿಯನ್ನು ಸರಿಯಾಗಿ ಕೊಡುವ ವ್ಯವಸ್ಥೆ ಮಾಡು''ಎಂದು ಒತ್ತಾಯಿಸಿದನು. ಖೈರಖಾನನು ಈ ಮೊದಲೇ ಕರ್ನಲ್ ವೆಲ್ಲೆಸ್ಲಿಗೆ ಗೋಖಲೆಯನ್ನು ಒತ್ತಾಯಿಸುಲು ಹೇಳಿದ್ದನು. ಆದರೆ ಯುದ್ಧಕ್ಕೆ ಹಣವು ವ್ಯಯವಾಗಿದ್ದರಿಂದ ಬಾಪೂ ಗೋಖಲೇನ ಸಾಂಪತ್ತಿಕ ಸ್ಥಿತಿ ಅಷ್ಟು ಸರಿಯಾಗಿ ಇರಲಿಲ್ಲ. ಅವನ ಕೈ ಬರಿದಾಗಿತ್ತು. ವೆಲ್ಲೆಸ್ಲಿ ಗೋಖಲೆಗೆ ಆದ ಅನಿವಾರ್ಯತೆಯನ್ನು ನೋಡಿ, ತಾನೇ ಪ್ರಯತ್ನ ಮಾಡಿ, ಕಂಪನಿ ಸರಕಾರದ ಕಡೆಯಿಂದ ಖೈರಖಾನನಿಗೆ ಐದು ಸಾವಿರ ರೂಪಾಯಿಗಳನ್ನು ಕೊಡಿಸಿದನು. ರಾವಣನ ಹೊಟ್ಟೆಗೆ ಇದು ಸಾಲದಾಯಿತು. ಖೈರಖಾನನು ತನ್ನ ಐಷಾರಾಮಿ ಜೀವನದಲ್ಲಿ ಯಾವ ಬದಲಾವಣೆಯನ್ನೂ ಮಾಡಿಕೊಂಡಿರಲಿಲ್ಲ. ಅಂದು ಪ್ರಾರಂಭವಾಗಿದ್ದ ಅಬ್ದುಲ್ ಖೈರಖಾನನ ಆರ್ಥಿಕ ದುಃಸ್ಥಿತಿ ಮುಂದೆ ೧೮೦೬ರವರೆಗೂ ಮುಂದುವರೆಯಿತು.

೧೮೦೬ರಲ್ಲಿ ಇಬ್ಬರು ಪೇಶ್ವೇ ಸರದಾರರು ಸವಣೂರು ಸುಬಾ ತನಗೆ ಸೇರಿದ್ದು, ತನಗೆ ಸೇರಿದ್ದು ಎಂದು ಕಚ್ಚಾಡಿ ಖೈರಖಾನನಿಗೆ ತೊಂದರೆ ಕೊಡಹತ್ತಿದರು. ಅವರನ್ನು ತಡೆಯುವಷ್ಟು ಆರ್ಥಿಕ ಸ್ಥಿತಿ ಖೈರಖಾನನಿಗೆ ಇಲ್ಲದ್ದರಿಂದ ಮೆತ್ತಗಿದ್ದನು. ಇದನ್ನು ನೋಡಿದ ಕರ್ನಲ್ ವೆಲ್ಲೆಸ್ಲಿ ಆ ಸರದಾರರನ್ನು ಕರೆಸಿ ''ನೀವು ಪುಣೆಗೆ ಹೋಗಿ ಎರಡನೇ ಬಾಜೀರಾವನಿಗೆ, ಅಬ್ದುಲ್ ಖೈರಖಾನನು ಮನೆತನದ ಘನತೆಗೆ ತಕ್ಕಂತೆ ಜೀವಿಸಲು, ಅವನ ಪಿಂಚಣಿಯನ್ನು ತಕ್ಷಣ ಬಿಡುಗಡೆ ಮಾಡುವಂತೆ ತಿಳಿಸಿರಿ. ಅಬ್ದುಲ್ ಖೈರಖಾನನಿಗೆ ಅವನ ಪಿಂಚಣಿ ತಲುಪುವವರೆಗೆ ನನಗೆ ಸಮಾಧಾನವಿಲ್ಲ''ಎಂದು ಹೇಳಿದನು.

### ಇಪ್ಪತ್ತೆರಡು ಮಹಲುಗಳಿಗೆ ಬದಲಾಗಿ ಇಪ್ಪತ್ತೈದು ಹಳ್ಳಿಗಳು ಬಂದವು

ವೆಲ್ಲೆಸ್ಲಿಯ ಮಾತು ಕೇಳಿ ಬಾಜೀರಾವನು, ನವಾಬ ಖೈರಖಾನನಿಗೆ ತಿಂಗಳಿಗೆ ನಾಲ್ಕು ಸಾವಿರ ರೂಪಾಯಿ ಎತ್ತಿ ಕೊಡುವ ಬದಲು ವರ್ಷಕ್ಕೆ ನಲವತ್ತೆಂಟು ಸಾವಿರ ರೂಪಾಯಿ ಉತ್ಪನ್ನ ಬರುವ ಇಪ್ಪತ್ತೈದು ಹಳ್ಳಿಗಳನ್ನು ಜಹಗೀರಾಗಿ ಕೊಡಲು ಒಪ್ಪಿದನು.

ಯಾವ ಹಳ್ಳಿಗಳನ್ನು ನವಾಬನು ಪಡೆಯಬೇಕೆಂದು ಚರ್ಚಿಸಲು ಅಬ್ದುಲ್ ಖೈರಖಾನ ನವಾಬನಿಗೆ ಅವನ ಪ್ರತಿನಿಧಿಯನ್ನು ಪುಣೆಗೆ ಕಳಿಸಲು ಹೇಳಿದರು.ಅಬ್ದುಲ್ ಖೈರಖಾನನು ವೆಂಕಟರಾವ್ ಶ್ಯಾಮಜಿ ಅನ್ನುವ ವಕೀಲನನ್ನು ಪೇಶ್ವೆಯವರ ಪ್ರತಿನಿಧಿಯಾದ ಬಾಬಾಸಾಹೇಬ ಪಟವರ್ಧನನ ಕಡೆಗೆ ಕಳಿಸಿದನು. ವೆಂಕಟರಾವನು ಪಟವರ್ಧನನನ್ನು ಭೇಟಿಯಾದಾಗ ಅವನು ''ನಾವು ವೆಲ್ಲೆಸ್ಲಿಯ ಶಿಫಾರಸ್ಸಿನಂತೆ, ನಿಮ್ಮ ನವಾಬರಿಗೆ ನಲವತ್ತೆಂಟು ಸಾವಿರ ರೂಪಾಯಿ ವಾರ್ಷಿಕ ಉತ್ಪನ್ನ ಬರುವ ಇಪ್ಪತ್ತೈದು ಹಳ್ಳಿಗಳನ್ನು ಬಿಟ್ಟು ಕೊಡುತ್ತೇವೆ. ಅದರಿಂದ ನೀನು ನಮ್ಮ ಪ್ರತಿನಿಧಿಯಾದ ಸರ್ ಸುಬಾ ಬಾಳಕೃಷ್ಣಪಂತ ಲಾಗೂನ ಜೊತೆ ವಿಚಾರ ವಿನಿಯಮ ಮಾಡಿ ಯಾವ ಹಳ್ಳಿಗಳು ನಿಮ್ಮ ನವಾಬರಿಗೆ ಬೇಕು ಅನ್ನುವುದನ್ನು ನಿರ್ಧರಿಸಬೇಕು. ಅಲ್ಲದೇ, ಈ ಕೆಲಸದಲ್ಲಿ

ನಿಮಗಿಬ್ಬರಿಗೂ ನೆರವಾಗಲು ವಾಸುದೇವ್ ಲಕ್ಷ್ಮಣ ಅನ್ನುವ ಫಡನವೀಸನನ್ನು (ದಸ್ತಾವೇಜು ಬರೆಯುವ ಕಾರಕೂನ) ನಿಯಮಿಸಲಾಗಿದೆ'' ಎಂದು ಹೇಳಿ ಲಿಖಿತ ಆಜ್ಞೆಯನ್ನು ಹೊರಡಿಸಿದನು.

ಈ ವಾಸುದೇವ ಲಕ್ಷ್ಮಣನು ಅತ್ಯಂತ ದುಷ್ಟನಿದ್ದು ನೀಚ ಕುಲದ ಬ್ರಾಹ್ಮಣನು ಎಂದು ದಿಲೇರಜಂಗ ಕಾವ್ಯದ ರಚನಾಕಾರನು ವಾಚಾಮಗೋಚರವಾಗಿ ಬಯ್ದಿದ್ದಾನೆ. ಇತಿಹಾಸಕಾರನು "ಈ ಫಡನವೀಸ್ ವಾಸುದೇವನು ನೀಚ ಪ್ರವೃತ್ತಿಯವನಿದ್ದು ವಿಷಪೂರಿತ ಚೇಳಿನಂತೆ ವರ್ತಿಸಿದನು. ಇವನ ಹುಟ್ಟು ಕೂಡ ಪ್ರಶ್ನಾರ್ಹವಿದೆ''ಎಂದು ಉಗ್ರವಾಗಿ ಟೀಕಿಸಿದ್ದಾನೆ. ಕಾರಣ ಇವನೇ ತನ್ನ ಸರ್ ಸುಬಾ ಬಾಳಕೃಷ್ಣನ ತಲೆಯಲ್ಲಿ ಕೆಟ್ಟ ವಿಚಾರಗಳನ್ನು ತುಂಬಿ, ನಿಷ್ಪ್ರಯೋಜಕ ಮತ್ತು ಅತ್ಯಂತ ಕೆಟ್ಟ ಹಳ್ಳಿಗಳನ್ನು ನವಾಬನಿಗೆ ಕೊಡಬೇಕೆಂದು ಬೋಧಿಸಿದನು. ಇವನು ಸರ್ ಸುಬಾ ಬಾಳಕೃಷ್ಣ ಲಾಗೂನಿಗೆ ಸವಣೂರಿನಿಂದ ಕೈ ಮುಂದೆ ಮಾಡಿದರೆ ದೊರೆಯುವಂತಹ ಹಳ್ಳಿಗಳು ಒಳ್ಳೆಯವಿದ್ದು ಅವುಗಳನ್ನು ಕೊಡದೆ, ವರ್ತುಲಾಕಾರದಲ್ಲಿರುವ ಹಳ್ಳಿಗಳನ್ನು ಕೊಟ್ಟರೆ, ಅವು ತೀರ ಕೆಟ್ಟ ಹಳ್ಳಿಗಳಿದ್ದು, ನಮ್ಮ ಪೇಶ್ವೆ ರಾಜ್ಯಕ್ಕೆ ಹಾನಿಯಾಗುವುದಿಲ್ಲವೆಂದು ದುರ್ಬೋಧನೆ ಮಾಡಿದನು. ಬಾಳಕೃಷ್ಣ ಲಾಗೂನನ್ನು ಇದಕ್ಕೆ ಒಪ್ಪಿಸಿ, ಸವಣೂರ ವಕೀಲ ವೆಂಕಾಜಿ ಕೃಷ್ಣಾಜಿಗೆ ಮೋಸ ಮಾಡಿದನು. ಪ್ರಾಯಶಃ ಈ ವಾಸುದೇವ ಲಕ್ಷ್ಮಣನು ಲಂಚವನ್ನು ಕೇಳಿರುವ ಸಾಧ್ಯತೆ ಇದೆ. ಅವನು ಕೇಳಿದ್ದನ್ನು ಕೊಟ್ಟಿದ್ದರೆ, ಅವನು ಅಭಿವೃದ್ಧಿಶೀಲ ಹಳ್ಳಿಗಳನ್ನು ಕೊಡಲು ಶಿಫಾರಸ್ಸನ್ನು ಮಾಡುತ್ತಿದ್ದನೇನೋ! ಅಂತೂ ಕೆಳಗಿನ ಕಾರಕೂನರು ಮಾಡಿದ್ದೇ ಅಂದೂಕೂಡ ಮೇಲಿನವರು ಒಪ್ಪುತ್ತಿದ್ದರೇನೊ! ಅಂತಿಮವಾಗಿ ಇಪ್ಪತ್ತೈದು ಹಳ್ಳಿಗಳ ಯಾದಿ ಸಿದ್ಧವಾಯಿತು.

| ಗ್ರಾಮದ ಹೆಸರು | | ಕಂದಾಯ (ಹೊನ್ನು-ಆಣೆಗಳಲ್ಲಿ) |
|---|---|---|
| ೦೧. ಸವಣೂರು ಮತ್ತು ಪೇಟೆ ಭಾಗ | | ೪,೫೪೨-೦೦ |
| ೦೨. ಬಸವನಕೊಪ್ಪ | ನಾಲ್ಕು | |
| ೦೩. ಒಡ್ಡಿನಕೊಪ್ಪ | ಹಳ್ಳಿಗಳ | |
| ೦೪. ನಾಯಿಕೆರೂರು | ಉತ್ಪನ್ನ | ೭೦೬-೧೧ |
| ೦೫. ಹೊನ್ನಿಕೊಪ್ಪ | | |
| ೦೬. ಕಬನೂರು | | |
| ೦೭. ಚಿಕಮನಕಟ್ಟೆ | | |

| | | |
|---|---|---|
| ೦೮. ಸುರಾಕಟ್ಟೆ | ಒಟ್ಟು ಉತ್ಪನ್ನ | ೧,೯೬೦-೦೦ |
| ೦೯. ಸಿದ್ದಾಪುರ | | ೭೩೧-೧೧ |
| ೧೦. ಕಲಿವಾಳ | | ೩೬೮-೧೧ |
| ೧೧. ಮಾದಾಪುರ | | ೫೨೦-೦೧ |
| ೧೨. ಹೋತನಹಳ್ಳಿ | | ೩೯೬-೦೦ |
| ೧೩. ಡೊಂಬರಮತ್ತೂರು | | ೪೨೭-೧೧ |
| ೧೪. ತೊರೂರು | | ೪೩೬-೧೧ |
| ೧೫. ನೀರಲಕಟ್ಟೆ | | ೧೪೭-೦೦ |
| ೧೬. ಹುಲೀಕಟ್ಟೆ | | ೧೮೭-೧೧ |
| ೧೭. ತೊಂಡೂರು | | ೯೯೧-೧೧ |
| ೧೮. ಚಿಲ್ಲೂರು | | ೪೪೪-೦೧ |
| ೧೯. ಗಬ್ಬೂರು | | ೨೯೫-೦೧ |
| ೨೦. ಮಣ್ಣೂರು | | ೧೭೪-೦೦ |
| ೨೧. ನಂದೀಹಳ್ಳಿ | | ೩೧೧-೦೦ |
| ೨೨. ಜೇಕಿನಕಟ್ಟೆ | | ೨೬೦-೧೧ |
| ೨೩. ಮುಳಕೇರಿ | | ೨೭೦-೦೦ |
| ೨೪. ಚೆಂದಾಪುರ | | ೫೯-೧೧ |
| ೨೫. ಯಕ್ಕೀಕೊಪ್ಪ | | ೧೦-೦೦ |
| | | ಹೊನ್ನು ೧೩,೨೪೦.೧೦ |

(ಈ ಕಂದಾಯದ ಉತ್ಪನ್ನಗಳನ್ನು ಲೆಕ್ಕ ಹಾಕಿದರೆ ನಾಲ್ಕು ನೂರಾ ನಲವತ್ತು ಹೊನ್ನುಗಳು ಹೆಚ್ಚು ಬರುತ್ತವೆ. ಮೂಲದಲ್ಲಿಯೇ ಈ ರೀತಿ ಇದೆ)

ಈ ಪಟ್ಟಿಯ ಮೇರೆಗೆ ಸವಣೂರ ನವಾಬನಿಗೆ ಒಟ್ಟು ಹನ್ನೆರಡು ಸಾವಿರದಾ ಎಂಟುನೂರು ಹೊನ್ನು, ನಾಲ್ಕಾಣೆ ಉತ್ಪನ್ನದ ಹಳ್ಳಿಗಳನ್ನು ಕೊಡಲಾಯಿತು. ಈ

೧೨,೮೦೦ ಹೊನ್ನು ೪ ಆಣೆ ಹಣವನ್ನು ರೂಪಾಯಿಗೆ ಪರಿವರ್ತಿಸಿದರೆ ಒಟ್ಟು ೪೮,೦೦೦ ರೂಪಾಯಿಗಳಾಗುವುವು. ಒಂದು ಹೊನ್ನಿನ (ವರಾಹ) ಬೆಲೆ ಅಂದರೆ ರೂ ೩-೧೨-೦ (ಮೂರು ರೂಪಾಯಿ ಹನ್ನೆರಡಾಣೆ) ಆಗುತ್ತಿತ್ತು. ನವಾಬ ಹಕೀಮಖಾನನ ಕಾಲದಲ್ಲಿಯೇ ಚಕ್ರೀ ಮೋತಿ (ಚಕ್ರಾಕಾರದ ಮುತ್ತು) ಅನ್ನುವ ಸವಣೂರು ನಾಣ್ಯಗಳಿದ್ದವು. ಇವು ಚಲಾವಣೆಯಲ್ಲಿದ್ದು ಎಲ್ಲರೂ ಸ್ವೀಕರಿಸುತ್ತಿದ್ದರು. ಸವಣೂರಲ್ಲಿ ಆಗ ನಾಣ್ಯಗಳನ್ನು ಟಂಕಿಸುವ ಮುದ್ರಣಾಲಯವಿತ್ತು. ಹೀಗೆ ತನ್ನ ನಾಣ್ಯಗಳನ್ನು ಬಳಕೆಯಲ್ಲಿ ತಂದ ಶ್ರೇಯಸ್ಸು ಸವಣೂರು ನವಾಬನೊಬ್ಬನದೇ ಏನೋ!

ಸವಣೂರ ನವಾಬನಿಗೆ ಕೊಡಮಾಡಿದ ೪೮,೦೦೦ ರೂಪಾಯಿ ಪಿಂಚಾಣಿಯನ್ನು ಪೇಶ್ವೆಯವರ ಪ್ರತಿನಿಧಿಯೇ ವಸೂಲು ಮಾಡಿ ಖೈರಖಾನನಿಗೆ ಕೊಡುತ್ತಿದ್ದನು. ಪೇಶ್ವೆಯವರ ಪ್ರತಿನಿಧಿಯು ನವಾಬನಿಗೆ ಕೊಡಬೇಕಾದ ಹಣದಲ್ಲಿ ಇನಾಮು, ದೇವರ ದತ್ತಿ ಎಂದು ಹೇಳಿ ೨,೦೨೨ ರೂಪಾಯಿ ಹಿಡಿದುಕೊಂಡು ಉಳಿದ ೪೫,೭೭೮.೪.೦ ರೂಪಾಯಿಗಳನ್ನು ಕೊಡುತ್ತಿದ್ದನು. ನವಾಬನಿಗೆ ಒದಗಿದ ಈ ದುಃಸ್ಥಿತಿಯನ್ನು ನೋಡಿದರೆ ಹಕೀಮಖಾನನಿಂದಲೇ ನವಾಬರು ಪೇಶ್ವೆಯವರ ಅಂಜಿಕೆಲ್ಲಿದ್ದಂತೆ ಇದ್ದರು. ಪೇಶ್ವೆಯವರ ಸರ್ ಸುಬಾಧಿಕಾರಿ ನವಾಬನ ಮೇಲೆ ಮೆಣಸು ಅರೆಯುತ್ತಿರಬೇಕು.

ಸವಣೂರು ನವಾಬ ಅಬ್ದುಲ್ ಖೈರಖಾನನಿಗೆ ಬಿಟ್ಟುಕೊಡಬೇಕಾದ ಇಪ್ಪತ್ತೈದು ಹಳ್ಳಿಗಳ ಪಟ್ಟಿ ಸಿದ್ಧವಾದೊಡನೆ, ಎರಡನೇ ಬಾಜೀರಾವ ಪೇಶ್ವೆಯು ಹರಿಪಂತ ಬಾಬಾಸಾಹೇಬನಿಗೆ ಒಂದು ರಾಜಾಜ್ಞೆಯನ್ನು ಕಳಿಸಿ "ಪಟ್ಟಿಯಲ್ಲಿರುವ ಇಪ್ಪತ್ತೈದು ಹಳ್ಳಿಗಳನ್ನು ಸವಣೂರು ನವಾಬನ ವೆಚ್ಚಕ್ಕೆಂದು ಬಿಟ್ಟುಕೊಡಲಾಗಿದೆ. ಅದರಿಂದ ಅವುಗಳನ್ನು ನವಾಬ ಸಾಹೇಬನಿಗೆ ಒಪ್ಪಿಸು"ಎಂದು ತಿಳಿಸಿದನು. ಪ್ರಾಯಶಃ ೧೮೦೬ರ ಸುಮಾರಿಗೆ ಈ ಹಳ್ಳಿಗಳು ಸವಣೂರು ನವಾಬನಿಗೆ ಬಂದಿರಬೇಕು. ಅಬ್ದುಲ್ ಹಕೀಮಖಾನನ ದುಡುಕಿನಿಂದ ವಿಶಾಲ ಸವಣೂರು ರಾಜ್ಯವು ಮಣ್ಣುಪಾಲಾಯಿತೇನೋ!.

## ಬಿತ್ತಿದ್ದನ್ನು ಬೆಳೆ

ಖೈರಖಾನ ನವಾಬನ ಎರಡನೇ ತಮ್ಮನಾದ ಹುಸೇನಖಾನನು ಖೈರಖಾನನು ಶ್ರೀರಂಗಪಟ್ಟಣದಲ್ಲಿರುವಾಗ, ಆಡಳಿತೆಯನ್ನು ನೋಡಿಕೊಳ್ಳುತ್ತಿದ್ದುದು ಈ ಹಿಂದೆ ಹೇಳಿದೆ. ಅಧಿಕಾರದ ರುಚಿ ಕಂಡ ಈ ಅಬ್ದುಲ್ ಹುಸೇನಖಾನನು, ಸವಣೂರಲ್ಲಿ ಅಬ್ದುಲ್ ಖೈರಖಾನನಿಗೆ ತಲೆಬೇನೆಯಾದನು. ಅಧಿಕಾರವನ್ನು ಕಳಕೊಂಡ ಈ ಹುಸೇನಖಾನನು ಅರೆಜೀವವಾದ ಸರ್ಪದಂತೆ ಭುಸುಗುಡುತ್ತ ಆಡಳಿತೆಯಲ್ಲಿ ಅನವಶ್ಯಕವಾಗಿ ತನ್ನ ಮೂಗನ್ನು ಚಾಚುತ್ತಿದ್ದನು. ಇದನ್ನು ನೋಡಿ ಬೇಸತ್ತ ಅಬ್ದುಲ್ ಖೈರಖಾನನು ಹುಸೇನಖಾನನನ್ನು ಸವಣೂರಿನಿಂದ ಹೊರಗೆ ಹಾಕಿ 'ಬಸವನಕೊಪ್ಪ' ಅನ್ನುವ ಹಳ್ಳಿಯಲ್ಲಿ

ಪಾಸಿಸಬೇಕೆಂದು ಅಜ್ಞಾಪಿಸಿದನು. ಈ ಬಸವನಕೊಪ್ಪದ ಜಹಗೀರನ್ನು ಅವನಿಗೆ ಕೊಟ್ಟನಲ್ಲದೆ, ಅವನ ವೆಚ್ಚಕ್ಕೆಂದು ಪ್ರತಿ ವರುಷ ೨,೮೦೦ ರೂಪಾಯಿಗಳನ್ನು ಸವಣೂರು ರಾಜಭಂಡಾರದಿಂದ ಕೊಡಹತ್ತಿದನು. ಹುಸೇನಖಾನನ ಕುಟುಂಬವು ಸವಣೂರನ್ನು ತ್ಯಜಿಸಿ ಬಸವನಕೊಪ್ಪ ಹಳ್ಳಿಗೆ ಬಂದಿತು. ಆ ಬಸವನಕೊಪ್ಪದ ಜಹಗೀರು ತನ್ನದೇ ಎಂದು ಹುಸೇನಖಾನನು ಸಾಧಿಸಿದನು. ಇವನ ನಂತರ ಇವನ ಮನೆತನದವರು ಬಸವನಕೊಪ್ಪವು ತಮಗೇ ಬಂದಿತೆಂದು ಅಲ್ಲಿಯ ಪ್ರಜೆಗಳನ್ನು ಪೀಡಿಸಿ ಹಣವನ್ನು ಸುಲಿಯಹತ್ತಿದರು. ೧೮೦೬ರಲ್ಲಿ ಹುಸೇನಖಾನನು ಪಡೆದ ಈ ಬಸವನಕೊಪ್ಪವು ೧೮೪೬ರಲ್ಲಿ ಇವನ ಮೊಮ್ಮಗ ಅಬ್ದುಲ್ ದಲೇಲಖಾನ ಉರ್ಫ್ ದಿಲೇರಖಾನನ ಕಾಲಕ್ಕೆ ಮರಳಿ ಅವನಿಗೆ ಬಂದಿತು.

**ಬಸವನಕೊಪ್ಪ**

ಬಸವನಕೊಪ್ಪ ಒಂದು ಪ್ರತ್ಯೇಕ ರಾಜ್ಯವೇ ಇದ್ದಿತೆಂದು ನವಾಬ ವಂಶದ ಕೆಲವರು ತಪ್ಪು ಗ್ರಹಿಸಿದ್ದಾರೆ. ಇದರ ಬಗ್ಗೆ ಬರೆಯುತ್ತ ಶ್ರೀ ಎ.ಬಿ.ಕೆ. ನವಾಬ ಅನ್ನುವವರು ಒಂದೆಡೆ "ಹಕೀಮಖಾನರಿಗೆ ಇದ್ದ ಅನೇಕ ಮಕ್ಕಳಲ್ಲಿ ಹುಸೇನಖಾನ ಮತ್ತು ಖೈರಖಾನ ಪ್ರಮುಖರು, ಹಕೀಮಖಾನ ನಂತರ ಹುಸೇನಖಾನರು ಸವಣೂರಲ್ಲಿ ಪಟ್ಟಕ್ಕೆ ಬಂದರು. ಹುಸೇನಖಾನರು ನಮ್ರ ಮತ್ತು ಒಳ್ಳೆಯ ಸ್ವಭಾವದವರಿದ್ದರು. ಆದರೆ ಖೈರಖಾನನ ಮೇಲೆ ವಕ್ರ ದೃಷ್ಟಿಯುಳ್ಳವರಾಗಿದ್ದರು. ಈಗ ಇದರ ಸರಿಯಾದ ಉಪಯೋಗವನ್ನು ತೆಗೆದುಕೊಳ್ಳಲು ನವಾಬರ ಕೆಳಗೆ ಇರುವ ಸರದಾರರು ಖೈರಖಾನರ ಕಿವಿ ಚುಚ್ಚಿದರು. "ನೀವೂ ಅಣ್ಣನಿಂದ ಹಿಸೆಯನ್ನು ಪಡೆದು ಸ್ವತಂತ್ರರಾಗಿ ರಾಜ್ಯವಾಳಬಹುದು. ಸಹಾಯ ಮಾಡಲು ನಾವಿರುವೆವು"ಎಂದರು. ಈ ಸರದಾರರಲ್ಲಿ ಖೈರಖಾನರ ಅಳಿಯಂದಿರೂ ಇದ್ದರು.

ಅಣ್ಣನ ಜೊತೆಗೆ ಕಲಹ ಪ್ರಾರಂಭವಾಯಿತು. ಹುಸೇನಖಾನರು ೧೩ ಹಳ್ಳಿಗಳನ್ನಿಟ್ಟುಕೊಂಡು ಖೈರಖಾನರಿಗೆ ಸವಣೂರು ಮತ್ತು ೧೨ ಹಳ್ಳಿಗಳನ್ನು ಕೊಟ್ಟರು. ಹುಸೇನಖಾನರು ಬಸವನಕೊಪ್ಪವನ್ನು ರಾಜಧಾನಿಯನ್ನಾಗಿ ಮಾಡಿಕೊಂಡರು. ಮುಂದೆ ಕೆಲವೇ ದಿವಸಗಳಲ್ಲಿ ಹುಸೇನಖಾನರು ತೀರಿಕೊಂಡರು. ಆಗ ಅವರ ಏಳು ಮಕ್ಕಳು ಚಿಕ್ಕವಯಸ್ಸಿನವರಿದ್ದರು. ಈ ಹುಡುಗರು ವಯಸ್ಸಿಗೆ ಬರುವ ತನಕ ಬೇರ್ಪಟ್ಟಿದ್ದ ೧೩ ಹಳ್ಳಿಗಳು ಪುನಃ ಸವಣೂರಿಗೆ ಸೇರ್ಪಡೆಯಾದವು. ಖೈರಖಾನರು ಹುಸೇನಖಾನರ ಅಲ್ಪವಯಿ ಮಕ್ಕಳಿಗೆ ಆಡಳಿತವನ್ನು ಹೊರತಪಡಿಸಿ ಉಳಿದೆಲ್ಲ ರಾಜಸೌಲಭ್ಯಗಳನ್ನು ಪೂರೈಸಿದರು. ನವಾಬ ಹುಸೇನಖಾನರು ಸತ್ತ ನಂತರ ಬ್ರಿಟಿಶ ಸರಕಾರವು ವಿಚಾರಣೆ ಮಾಡಿ ಪ್ರಚಲಿತದಲ್ಲಿದ್ದ 'ಮೋಡೀ'(ಮರಾಠಿ ಭಾಷೆ) ಲಿಪಿಯಲ್ಲಿ ಒಂದು ಠರಾವನ್ನು ಪಾಸುಮಾಡಿ "ಹುಸೇನಖಾನರ ಮಕ್ಕಳು ವಯಸ್ಕರಾದೊಡನೆ ಅಲ್ಪವಯಿ ಸುರಕ್ಷಣಾದಾರ

ಖೈರಖಾನ ನವಾಬರು ಅವರ ಹಕ್ಕನ್ನು ಬಿನ್ -ತಕರಾರಿ ಬಿಟ್ಟುಕೊಡಬೇಕು'' ಎಂದು ದಾಖಲಿಸಲಾಗಿತ್ತು. ಈ ಠರಾವಿನ ಮೇಲೆ ಬ್ರಿಟಿಶ ಗೌರ್ನರ್ ಜನರಲ್ ಹಾಗೂ ಆಗ ಇದ್ದ ರಾಣಿಯ ಸಹಿಯಿತ್ತು. ಆದರೆ ಖೈರಖಾನರು ಹುಸೇನಖಾನರ ಮಕ್ಕಳಿಗೆ ಮರಳಿ ರಾಜ್ಯವನ್ನೀಯಲಿಲ್ಲ'' ಎಂದು ಹೇಳುತ್ತಾರೆ. ಆ ಠರಾವಿನ ಪ್ರತಿ ಲಭ್ಯವಿಲ್ಲವೆಂದು ಅವರೇ ಹೇಳುತ್ತಾರೆ. ಪ್ರಾಯಶಃ ಇದು ಊಹೆ ಇದ್ದಿರಬೇಕು.

ಶ್ರೀ ಎ.ಕೆ.ಬಿ. ನವಾಬರ ವಾದವೇ ವಿಚಿತ್ರವಿದೆ. ಬ್ರಿಟಿಶರು ವಿಚಾರಣೆ ನಡೆಸಿ, ಠರಾವಿಗೆ ಗೌರ್ನರ ಜನರಲ್‌ರು ಸಹಿ ಮಾಡಿ ರಾಣಿಯ ಅನುಮತಿ ಬಿದ್ದಿದೆ ಅನ್ನುವದು ಅಸಂಗತವಾಗಿ ಕಾಣುತ್ತದೆ. ರಾಣಿ ಅಂದರೆ ಕ್ವೀನ್ ವಿಕ್ಟೋರಿಯಾ ಇದ್ದಿರಬೇಕು!. ಅವಳು ಭಾರತದ ಅಧಿಕಾರವನ್ನು ವಹಿಸಿಕೊಂಡಿದ್ದು ಅಬ್ದುಲ್ ಹಕೀಮಖಾನನ ಮರಣಾನಂತರ ಅಂದರೆ ೧೭೯೫. ಸವಣೂರು ನವಾಬರ ವಂಶಾವಳಿಯಂತೆ ಅಬ್ದುಲ್ ಹಕೀಮಖಾನನಿಗೆ ಖೈರಖಾನನು ಜ್ಯೇಷ್ಠ ಪುತ್ರನೇ ವಿನಃ ಹುಸೇನಖಾನನಲ್ಲ. ಖೈರಖಾನನು ಹಕೀಮಖಾನನ ನಂತರ ನೇರವಾಗಿ ಪಟ್ಟವೇರಲಿಕ್ಕೆ ಸಾಧ್ಯವಾಗದ್ದು ಅವನು ಆಗ ಶ್ರೀರಂಗಪಟ್ಟಣದಲ್ಲಿ ಇದ್ದುದರಿಂದ. ತಂದೆ ಸತ್ತ ಹತ್ತು ತಿಂಗಳ ಮೇಲೆ ಖೈರಖಾನ ಸವಣೂರಿಗೆ ಬಂದನು. ಅಷ್ಟರಲ್ಲಿ ಹುಸೇನಖಾನನ ಕೈಗೆ ಆಡಳಿತವು ಬಂದಿತ್ತು. ಹಕೀಮಖಾನನಿಗೆ ಖೈರಖಾನ ಜ್ಯೇಷ್ಠಪುತ್ರನಾಗಿದಿದ್ದರೆ, ಹೈದರ ಅಲಿ ಅವನಿಗೇಕೆ ತನ್ನ ಮಗಳನ್ನು ಕೊಡುತ್ತಿದ್ದನು? ಖೈರಖಾನನು ತಂದೆಯ ನಂತರ ಸವಣೂರು ಸಿಂಹಾಸನವನ್ನೇರಿ ನವಾಬ ಆಗುವನೆಂದೇ ಮಗಳನ್ನಿತ್ತಿರಬೇಕು. ಖೈರಖಾನ ಪುಣೆಯವರೆಗೂ ಹೋಗಿ ಪೇಶ್ವೆಯವರ ಬಳಿ ತನಗೆ ಸಿಂಹಾಸನವನ್ನು ಕೊಡಬೇಕು ಎಂದು ಹೇಳಿದಾಗ, ಅವರು ಖೈರಖಾನನ ಹಕ್ಕನ್ನು ಮನ್ನಿಸಿ, ಬಾಪೂ ಗೋಖಲೆ ಸರದಾರನನ್ನು ಕಳಿಸಿ ಹುಸೇನಖಾನನನ್ನು ಕೆಳಗಿಳಿಸಿ ಖೈರಖಾನನಿಗೆ ಸಿಂಹಾಸನವನ್ನೇಕೆ ಕೊಡಿಸುತ್ತಿದ್ದರು? ಖೈರಖಾನನೇ ಹುಸೇನಖಾನನನ್ನು ಬಸವನಕೊಪ್ಪಕ್ಕೆ ಕಳಿಸಿ, ಜೀವನಾಂಶಕ್ಕೆ ಪ್ರತಿ ವರುಷ ೨,೮೦೦ ರೂಪಾಯಿಗಳನ್ನೇಕೆ ಕೊಡುತ್ತಿದ್ದ? ಶ್ರೀ ಎ.ಕೆ.ಬಿ. ನವಾಬರ ತಂದೆ ೧೯೫೪-೫೫ರಲ್ಲಿ ಸಂಸ್ಥಾನದ ಪಿಂಚಣಿ ನಿಂತಾಗ, ತಮ್ಮ ಬಳಿ ಇದ್ದ ಈ ಸನದನ್ನು ತೋರಿಸಿ ಇಪ್ಪತ್ತು ವರುಷ ಪಿಂಚಣಿ ಪಡೆದರು ಎಂದು ಹೇಳುತ್ತಾರೆ. ಬೇರಾವುದಾದರೂ ಸನದು ಇದ್ದಿರಬೇಕು. ಸವಣೂರು ೧೨ ಮತ್ತು ೧೩ ಹಳ್ಳಿಗಳಲ್ಲಿ ವಿಭಜನೆಯಾಗಿ ಎರಡು ನವಾಬರಿಂದ ಒಂದೇ ಕಾಲಕ್ಕೆ ಆಳಲ್ಪಡುವ ಸಂಭವವೇ ಇಲ್ಲ. ಪ್ರಾಯಶಃ ಅಬ್ದುಲ್ ಖೈರಖಾನನು ಹುಸೇನಖಾನನಿಗೆ ಬಸವನಕೊಪ್ಪ ಊರಿನ ಜಹಗೀರು ಸನದೇ ಇದಾಗಿರುವ ಸಂಭವವಿದೆ. ಸಂಸ್ಥಾನದ ಉತ್ತರಾಧಿಕಾರತ್ವ ಜ್ಯೇಷ್ಠ ಪುತ್ರನಿಗಷ್ಟೇ ಬರುತ್ತದೆ ವಿನಃ ಉಳಿದ ಆಸ್ತಿಯಂತೆ ಅಣ್ಣ ತಮ್ಮಂದಿರಲ್ಲಿ ಹಂಚಿಕೆಯಾಗುವುದಿಲ್ಲ. ಹೀಗಿರುವಾಗ ಖೈರಖಾನನು ಅರ್ಧರಾಜ್ಯವನ್ನು ಏಕೆ ಕೇಳುತ್ತಾನೆ? ತಾತ್ಪೂರ್ತಿಕವಾಗಿ ಸವಣೂರಿನ ಆಡಳಿತವನ್ನು ವಹಿಸಿಕೊಂಡು ಹುಸೇನಖಾನನು ಅಣ್ಣ

ಖೈರಖಾನನು ಬಂದಾಗ ಬಿಟ್ಟುಕೊಡಬೇಕಾಯಿತಲ್ಲ ಅನ್ನುವ ವ್ಯಥೆಯಿಂದ ಸವಣೂರಿನ ಮೇಲೆ ವೃಥಾ ದ್ವೇಷವನ್ನು ಸಾಧಿಸಿರಬೇಕು.

**ಪೇಶ್ವೆ ಎರಡನೇ ಬಾಜೀರಾವನ ಭೇಟಿ**

ಶ್ರೀಮಂತ ಬಾಜೀರಾವ ಪೇಶ್ವೆ ಸೊಂಡೂರಲ್ಲಿರುವ ಕಾರ್ತಿಕಸ್ವಾಮಿ ದರ್ಶನಕ್ಕೆಂದು ಪುಣೆಯಿಂದ ನವಲಗುಂದ ಮಾರ್ಗವಾಗಿ ಕರ್ನಾಟಕಕ್ಕೆ ಬಂದನು. ಬಾಜೀರಾವನು ಸವಣೂರು ನವಾಬನಿಗೆ ಪತ್ರ ಬರೆದು ತನ್ನನ್ನು ನವಲಗುಂದ ಮುಕ್ಕಾಮಿನಲ್ಲಿ ಭೇಟಿಯಾಗಬೇಕೆಂದು ಕೇಳಿದ್ದನು.

ಅಬ್ದುಲ ಖೈರಖಾನ ನವಾಬನು ತನ್ನೊಂದಿಗೆ ಕಾಶೀರಾವ, ಕೃಷ್ಣರಾವ (ಇವರು ದಿವಾಣರಿದ್ದಿರಬೇಕು), ಖಂಡೋಪಂತ ಡಬೀರ ಹಾಗೂ ಬೇರೆ ಕೆಲವು ಸರದಾರರೊಂದಿಗೆ ನವಲಗುಂದಕ್ಕೆ ಹೋಗಿ ಬಾಜೀರಾಯನನ್ನು ಭೆಟ್ಟಿಯಾದನು. ಅವನು ಖೈರಖಾನನ ವಾಸ್ತವ್ಯಕ್ಕೆ ಡೇರೆ ಹಾಕಿಸಿ ಎಲ್ಲ ಅನುಕೂಲತೆಗಳನ್ನೂ ಕಲ್ಪಿಸಿಕೊಟ್ಟಿದ್ದನು. ಇಬ್ಬರೂ ಭೆಟ್ಟಿಯಾಗಿ ಕ್ಷೇಮಸಮಾಚಾರದ ಮಾತುಗಳನ್ನಾಡಿದರು. ಖೈರಖಾನನು ಬಾಜೀರಾಯನ ಡೇರೆಗೆ ಹೋದಾಗ ಬಾಜೀರಾಯನು ನವಾಬನನ್ನು ತನ್ನೊಡನೆ ಗಾದೆಯ ಮೇಲೆ ಕುಳ್ಳಿರಿಸಿಕೊಂಡನು. ನಂತರ ಭೆಟ್ಟಿಯ ಗೌರವಾರ್ಥ ಇಬ್ಬರ ಮಧ್ಯೆ ಮುತ್ತುರತ್ನಗಳ ವಿನಿಮಯವಾಯಿತು. ಖೈರಖಾನ ನವಾಬನ ಆತಿಥ್ಯಕ್ಕೆ ಸುಪ್ರೀತನಾದ ಬಾಜೀರಾಯನು ಹೊರಡುವ ಮುಂದೆ "ನೀನು ನಿನ್ನ ತಮ್ಮನೊಬ್ಬನನ್ನು ಪುಣೆಗೆ ಕಳಿಸಿದರೆ, ನಾನು ದರ್ಬಾರದಲ್ಲಿಟ್ಟುಕೊಂಡು ನನ್ನ ತಮ್ಮನಂತೆ ಪೋಷಿಸುವೆ. ಅವನಿಗೆ ರಾಜನೀತಿ ಕಲಿಸುವೆ" ಎಂದು, ಹೇಳಿದನು.

ಶ್ರೀಮಂತ ಬಾಜೀರಾಯನು ಪುಣೆಗೆ ಹೋದ ಮೇಲೆ ನವಾಬ ಖೈರಖಾನನು ತನ್ನ ತಮ್ಮನಾದ ಅಬ್ದುಲ್ ಫಿರೋಜಖಾನನನ್ನು ಪುಣೆಗೆ ಕಳಿಸಿದನು. ಅವನ ಜೊತೆ ಜರೀ ಮತ್ತು ರೇಶಿಮೆಗಳಿಂದ ಅಲಂಕೃತವಾದ ಎರಡು ಮೇಣೆಗಳನ್ನು ಪುಣೆಗೆ ಕಳಿಸಿದನು. ಅಬ್ದುಲ್ ಫಿರೋಜಖಾನನು ಪುಣೆಗೆ ಹೋಗಿ ಒಂದು ಮೇಣೆಯನ್ನು ಬಾಜೀರಾಯನಿಗೂ ಇನ್ನೊಂದನ್ನು ಸದಾಶಿವರಾವ ಮಾಣಕೇಶ್ವರನಿಗೂ ಕೊಟ್ಟನು. ಬಾಜೀರಾಯನು ಫಿರೋಜಖಾನನನ್ನು ಪುಣೆಯಲ್ಲಿ ಇರಿಸಿಕೊಂಡು, ದರ್ಬಾರದಲ್ಲಿ ಒಂದು ಗೌರವಾದ ಸ್ಥಾನವನ್ನು ಒದಗಿಸಿದನು. ಇವನು ತನ್ನ ಕುಟುಂಬ ಸಹಿತ ಪುಣೆಯಲ್ಲಿಯೇ ಸ್ಥಾಯೀ ಆದನು. ಇವನ ಮಕ್ಕಳಾದ ಹಕೀಮಖಾನ ಮತ್ತು ಅಕಬರಖಾನನಿಗೆ ಮುಂದೆ ಕಂಪನಿ ಸರಕಾರವು ಎರಡೆರಡು ನೂರು ರೂಪಾಯಿ ಪಿಂಚಣಿಯನ್ನು ಕೊಟ್ಟಿತು. ಫಿರೋಜಖಾನನು ಖೈರಖಾನನಿಗೆ ಹತ್ತನೇ ತಮ್ಮನಿದ್ದನು.

ಬಸವನಕೊಪ್ಪಕ್ಕೆ ಹೋಗಿದ್ದ ಖೈರಖಾನನ ತಮ್ಮನಾದ ಹುಸೇನಖಾನನು

ಖೈರಖಾನನಿಗೆ ಆಗೀಗ ತೊಂದರೆಯನ್ನು ಕೊಡುತ್ತಿದ್ದನು. ನೀರಲಗಿಯ ಕುಲಕರ್ಣಿಯಾಗಿದ್ದ ಅಬಾದುಲ್ಲಾಖಾನ ಮತ್ತು ಕಂದಾಯವನ್ನು ಸಂಗ್ರಹಿಸುತ್ತಿದ್ದ ಕೋಣನತಂಬಿಗೆ ಕೃಷ್ಣರಾಯನಿಗೂ ವೈಮನಸ್ಸಿತ್ತು. ಅಬಾದುಲ್ಲಾಖಾನನು ಹುಸೇನಖಾನನಿಂದ ಪ್ರಚೋದಿತನಾಗಿ ಸವಣೂರು ರಾಜ್ಯದಲ್ಲಿ ಪುಂಡಾಟಿಕೆ ನಡೆಸಿದನು. ಈ ಅಬಾದುಲ್ಲಾ ಖಾನನನ್ನು ಎಲ್ಲರೂ ಅದ್ರೂಖಾನನೆಂದು ಕರೆಯುತ್ತಿದ್ದರು. ಕೃಷ್ಣರಾಯನು ಸುಬೇದಾರನ ಸಹಾಯ ಪಡೆದು ಈ ಅದ್ರೂಖಾನನಿಂದ ಎರಡು ನೂರು ರೂಪಾಯಿ ಕಂದಾಯದ ದಂಡವೆಂದು ವಸೂಲು ಮಾಡಿದನು. ಇದರಿಂದ ಕೆರಳಿದ ಅದ್ರೂಖಾನ ಕೆಲ ಘಟಂಗರನ್ನು ಕಲೆಹಾಕಿ ಕೋಣನತಂಬಿಗೆಗೆ ಬಂದು, ಕೃಷ್ಣರಾಯನ ಮನೆಯ ಬಾಗಿಲನ್ನುಮುರಿದು, ಒಳಹೊಕ್ಕು ರಾತ್ರಿಯಲ್ಲಿ ಅವನ ಮನೆಯನ್ನು ಲೂಟಿ ಮಾಡಿದನು. ನಂತರ ಅವನನ್ನು ಮತ್ತು ಅವನ ಹೆಂಡತಿ ಮತ್ತು ಮಕ್ಕಳನ್ನು ಕೊಂದು ಹಾಕಿದನು. ಕೃಷ್ಣರಾಯನ ಒಬ್ಬನೇ ಮಗನು ಆಗ ಮನೆಯಲ್ಲಿ ಇಲ್ಲದ್ದರಿಂದ ಬದುಕಿ ಉಳಿದನು. ಇವನು ತನ್ನ ಮನೆತನಕ್ಕಾದ ಅವಸ್ಥೆಯನ್ನು ನೋಡಿ ಕರ್ನಾಟಕದ ಸುಬೇದಾರನಾಗಿದ್ದ ರಾಮಚಂದ್ರಪಂತನಿಗೆ ಅದ್ರೂಖಾನ ಮಾಡಿದ ಅಮಾನುಷ ಕೃತ್ಯವನ್ನು ವಿವರಿಸಿ ತನಗೆ ನ್ಯಾಯವನ್ನು ಒದಗಿಸಬೇಕೆಂದು ಪ್ರಾರ್ಥಿಸಿದನು. ರಾಮಚಂದ್ರಪಂತನು ಕೂಡ ಆಗ ಸವಣೂರಿನಲ್ಲಿಯೇ ವಾಸಿಸುತ್ತಿದ್ದನು. ಆದರೆ ಈ ರಾಮಚಂದ್ರಪಂತನು ತನಗೇಕೆ ಈ ಗೊಡವೆ ಬೇಕೆಂದು, ಅದ್ರೂಖಾನನ ಮೇಲೆ ಯಾವ ಕ್ರಮವನ್ನೂ ತೆಗೆದುಕೊಳ್ಳದೆ ಮೆತ್ತಗಿದ್ದನು. ಇದರಿಂದ ಅದ್ರೂಖಾನನು ಮತ್ತಷ್ಟು ಮದಾಂಧನಾದನು. ಮುಂದೆ ಕೆಲವು ಸೈನಿಕರನ್ನು ಕಲೆಹಾಕಿ ಸವಣೂರಿಗೆ ಲಗ್ಗೆ ಹಾಕಿದನು. ಸವಣೂರಿಗೆ ಹೋಗಿ ಸುಬೇದಾರ ರಾಮಚಂದ್ರಪಂತನ ಮನೆಯ ಮೇಲೆಯೇ ದಾಳಿಯನ್ನು ಮಾಡಿದನು. ಅದನ್ನು ನೋಡಿ ರಾಮಚಂದ್ರಪಂತನು ತನ್ನ ರಕ್ಷಕರಿಗೆ ಅದ್ರೂಖಾನ ಮತ್ತು ಅವನ ಹಿಂಬಾಲಿಗರ ಮೇಲೆ ಗುಂಡು ಹಾಕಲು ಹೇಳಿದನು. ಎರಡೂ ಪಕ್ಷದ ಸೈನಿಕರಲ್ಲಿ ಘರ್ಷಣೆಯಾಯಿತು. ರಾಮಚಂದ್ರಪಂತನು ತನ್ನ ರಕ್ಷಕರು ಎನು ಮಾಡುತ್ತಾರೆಂದು ನೋಡಲು ಹೊರಗೆ ಬಂದರೆ, ಅದ್ರೂಖಾನನ ಆಳುಗಳಿಂದ ಸುಬೇದಾರನೇ ಜಖಮಗೊಂಡನು. ಇದರ ದುರ್ಲಾಭ ಪಡೆದ ಅದ್ರೂಖಾನನು ರಾಮಚಂದ್ರ ಪಂತನ ಮನೆಯಲ್ಲಿ ಇದ್ದುದನ್ನೆಲ್ಲ ದೋಚಿಕೊಂಡು ಕೇಕೆ ಹಾಕುತ್ತಾ ಸವಣೂರಲ್ಲಿ ಅಲ್ಲಲ್ಲಿ ಪುಂಡಾಟಿಕೆಗಳನ್ನು ನಡೆಸಿದನು. ಆದ್ರೂಖಾನನು ನಂತರ, ನೇರವಾಗಿ ಖೈರಖಾನನ ಹತ್ತಿರ ಹೋದನು. ಖೈರಖಾನ ಬಹದ್ದೂರನು ಅದ್ರೂಖಾನನು ಮಾಡುತ್ತಿರುವದು ಉಚಿತವಲ್ಲವೆಂದು ಬೋಧಿಸಿದನು. ನಂತರ "ಪೇಶ್ವೆಯವರ ರಾಜ್ಯದಲ್ಲಿ ನೀನು ಈ ರೀತಿ ಪುಂಡಾಟಿಕೆ ನಡೆಸಿದರೆ ನಿನಗೆ ಒಳ್ಳೆಯದಾಗುವುದಿಲ್ಲ" ಎಂದು ಎಚ್ಚರಿಸಿದನು. ಅದ್ರೂಖಾನನು ಇದರಿಂದ ಕೋಪಾವಿಷ್ಟನಾಗಿ ಹಳ್ಳಿಗಳನ್ನು ಸುಲಿಯಹತ್ತಿದನು. ಇಂತಹ ಗೊಂದಲಮಯ ಸ್ಥಿತಿಯಲ್ಲಿ ಖೈರಖಾನನ 'ಎಳನೇ ತಮ್ಮನಾದ ಅಬ್ದುಲ ಲತೀಫಖಾನನು ತನ್ನಣ್ಣನನ್ನು ಸವಣೂರು ಗಾದೆಯಿಂದ ಕೆಳಗಿಳಿಸಿ ತಾನು ನವಾಬನಾಗಬೇಕೆಂದು ದುರಾಲೋಚಿಸಿ, ಈ

ಅದ್ರೂಖಾನನೊಡನೆ ಸ್ನೇಹವನ್ನು ಬೆಳೆಸಿದನು. ತನ್ನನ್ನು ಸವಣೂರು ಸಿಂಹಾಸನದ ಮೇಲೆ ಕೂಡಿಸಿದರೆ ಐವತ್ತು ಸಾವಿರ ರೂಪಾಯಿ ಮತ್ತು ಬೆಲೆಬಾಳುವ ವಜ್ರ ವೈಢೂರ್ಯಗಳನ್ನು ಕೊಡುವ ಆಮಿಷವನ್ನು ಲತೀಫಖಾನನು ಒಡ್ಡಿದನು. ಇದರಿಂದ ಉತ್ಸಾಹಗೊಂಡ ಅದ್ರೂಖಾನನು ಅಬ್ದುಲ ಖೈರಖಾನನನ್ನು ಕೊಲ್ಲುವ ಒಳಸಂಚಿಗೆ ಸಿದ್ಧನಾದನು. ಅದ್ರೂಖಾನ ಮತ್ತು ಲತೀಫಖಾನನ ಅಪವಿತ್ರ ಸಂಬಂಧದ ಸುಳಿವನ್ನು ಕಂಡು ಹಿಡಿದ ಖೈರಖಾನನು ಸಂತನಾದ ಸೈಯ್ಯದ ಮೊಹಿದ್ದೀನ ಬಾದಶಹಾನನ್ನು ಭೇಟ್ಟಿಯಾಗಿ "ಅದ್ರೂಖಾನನಿಗೆ ನಾನೇ ಐವತ್ತು ಸಾವಿರ ರೂಪಾಯಿಗಳನ್ನು ಕೊಡುತ್ತೇನೆ. ಅದಕ್ಕೆ ನೀವು ಅವನಿಗೆ ಇಂತಹ ಸಾಹಸಕ್ಕೆ ಇಳಿಯಬಾರದೆಂದು ಉಪದೇಶಿಸಿರಿ" ಎಂದು ಪ್ರಾರ್ಥಿಸಿದನು. ಸೈಯ್ಯದ ಮೊಹಿದ್ದೀನ ಬಾದಶಹಾನು ಖೈರಖಾನನ ಮೇಲೆ ಕೃಪೆ ಮಾಡಿದನು. ಖೈರಖಾನನಿಗೆ ಸಿಂಹಾಸನವನ್ನು ಉಳಿಸಿಕೊಳ್ಳಲು ಬಾದಶಹಾನ ಮಧ್ಯಸ್ಥಿಕೆಯೊಂದೇ ಉಳಿದ ಮಾರ್ಗವಾಗಿತ್ತು. ಖೈರಖಾನನು ಬಾದಶಹಾನನ್ನು ಭೇಟ್ಟಿಯಾದೊಡನೆ, ಬಾದಶಹಾನು ಅದ್ರೂಖಾನನ ಬಲಗೈ ಸಿಪ್ರಾನಿಗೆ ಬರಹೇಳಿದನು. ಈ ಸಿಪ್ರಾ, ಅದ್ರೂಖಾನನ ಸೈನ್ಯವನ್ನು ಸೇರಿ, ಖೈರಖಾನನಿಗೆ ಮತ್ತು ಸಾಮಾನ್ಯ ಜನರಿಗೆ ವಿಪರೀತ ತೊಂದರೆಯನ್ನು ಕೊಡುತ್ತಿದ್ದನು. ಈ ಸಿಪ್ರಾ, ಸಂತ ಸೈಯ್ಯದ ಮೊಹಿದ್ದೀನ ಬಾದಶಹಾನ ಶಿಷ್ಯನಿದ್ದನು. ಬಾದಶಹಾನು ಸಿಪ್ರಾನಿಗೆ ಹೇಳಿದ ಮೇಲೆ, ಸಿಪ್ರಾ, ಅದ್ರೂಖಾನನ ಮನಸ್ಸನ್ನು ಒಲಿಸಿ, ಅವನು ಕ್ರೂರ ಕೃತ್ಯಗಳನ್ನು ಎಸಗದಂತೆ ಮಾಡಿದನು. ನಂತರ, ನವಾಬ ಖೈರಖಾನನು ಅದ್ರೂಖಾನನೊಂದಿಗೆ ಸೇರಿ ತನ್ನ ಸಿಂಹಾಸನವನ್ನು ಉರುಳಿಸಲು ಪ್ರಯತ್ನಿಸಿದ ತನ್ನ ತಮ್ಮನಾದ ಲತೀಫಖಾನನನ್ನು ಶಿಕ್ಷಿಸಬೇಕೆಂದು ಸಿದ್ಧತೆಗಳನ್ನು ಮಾಡಿದನು. ಆದರೆ ಒಂದು ದಿವಸ ಲತೀಫಖಾನನು ಸವಣೂರಿಂದ ಮರೆಯಾದನು. ಪುನಃ ಕಾಣಿಸಿಕೊಳ್ಳಲಿಲ್ಲ. ನವಾಬ ಖೈರಖಾನನು ಆತನಿಗೆ 'ಏನಾದರೂ ಮಾಡಿಸಿದನೋ ಅಥವಾ ಅವನೇ ಏನಾದರೂಮಾಡಿಕೊಂಡನೋ ಕೊನೆಗೂ ತಿಳಿಯಲಿಲ್ಲ.

ಅದ್ರೂಖಾನನ ಪುಂಡಾಟಿಕೆ ನಿಂತಂತಾದರೂ, ಖೈರಖಾನನಿಗೆ ಅವನ ಭಯ ಇದ್ದೇ ಇತ್ತು. ಪ್ರಾಯಶಃ ಅದ್ರೂಖಾನನನ್ನು ಹದ್ದುಬಸ್ತಿಯಲ್ಲಿ ಇಡುವಷ್ಟು ಸೈನ್ಯವು ಅವನ ಬಳಿ ಇದ್ದಿರಲಿಲ್ಲವೇನೋ. ಅವನು ಈ ವಿಷಯವನ್ನು ಪುಣೆಗೆ ತಿಳಿಸಿದೊಡನೆ ಪೇಶ್ವೆಯವರು ಚಿಂತಾಮಣರಾವ ಪಟವರ್ಧನ, ದಾಜೀಸಾಹೇಬ ಪಟವರ್ಧನ ಮತ್ತು ಸರಲಷ್ಕರ ಸಿಧ್ಧೋಜಿರಾವ ನಿಪ್ಪಾಣಿಕರನನ್ನು ಸೈನ್ಯದೊಂದಿಗೆ ಸವಣೂರಿಗೆ ಕಳಿಸಿದರು. ಅವರು ಜಾಲವನ್ನು ಬೀಸಿ, ಅದ್ರೂಖಾನನನ್ನು ಬಂಧಿಸಿ, ಚಿತ್ರಹಿಂಸೆ ಕೊಟ್ಟರು. ನಂತರ ಪುಣೆಗೆ ಒಯ್ದು ತೋಪಿನ ಬಾಯಿಗೆ ಕೊಟ್ಟು ಕೊಂದು ಹಾಕಿದರು. ಅಬ್ದುಲ್ ಖೈರಖಾನನು ತನ್ನ ಹಾದಿಯಲ್ಲಿ ಬಂದ ಮುಳ್ಳನ್ನು ಪೇಶ್ವೆಯವರಿಂದ ತೆಗೆಯಿಸಿ ನಿಶ್ಚಿಂತನಾದನು.

## ಕೃಷ್ಣರಾವ ದಿವಾಣನಾದದ್ದು

ಅದ್ರೂಖಾನನನ್ನು ಕೊಂದು ಹಾಕಿದ ಸುದ್ದಿ ಸವಣೂರನ್ನು ತಲುಪಿತ್ತೋ ಇಲ್ಲವೋ, ಶ್ರೀಮಂತ ಬಾಜೀರಾಯನು ಪುಣೆಯಿಂದ ಕಳಿಸಿದ ಕೃಷ್ಣರಾವನು ನವಾಬನನ್ನು ನೋಡಲು ಬರವಾಗ ಸವಣೂರಿನ ಒಂದು ಹಳ್ಳಿಯಿಂದ ತಪ್ಪಿ ತಾನು ವಸೂಲಿ ಮಾಡಿದ ಹದಿನೈದು ಸಾವಿರ ರೂಪಾಯಿಗಳನ್ನು ತಂದು ನವಾಬನಿಗೆ ಒಪ್ಪಿಸಿದನು. ಇದರಿಂದ ಅಬ್ದುಲ ಖೈರಖಾನನಿಗೆ ಕೃಷ್ಣರಾವನ ಮೇಲೆ ವಿಶ್ವಾಸ ಮೂಡಿತು. ಅಲ್ಲದೇ ಸರಲಷ್ಕರ ಸಿಧ್ದೋಜಿರಾವ ನಿಪ್ಪಾಣಿಕರನು ಖೈರಖಾನನ ಮೇಲಿನ ದ್ವೇಷದಿಂದ ಸುಲಿಗೆ ಮಾಡಿಕೊಂಡು ಹೋಗಿದ್ದ ಬಂಗಾರದ ವಸ್ತುಗಳನ್ನು ಮತ್ತು ಬೆಲೆಬಾಳುವ ಸಂಪತ್ತನ್ನು ಕೃಷ್ಣರಾವ ತಂದು ನವಾಬನಿಗೆ ಒಪ್ಪಿಸಿದನು. ಸಿದ್ದೋಜಿರಾವ ಸರಲಷ್ಕರನು ಅದ್ರೂಖಾನನನ್ನು ಸೆದೆಬಡಿಯಲು ಹಿಂದೆ ಕರ್ನಾಟಕ ಸುಬಾಕ್ಕೆ ಬಂದಾಗ ಈ ಕೃತ್ಯವನ್ನೆಸಗಿದ್ದನು.

ಕೃಷ್ಣರಾವ ಮಾಡಿದ ಈ ಸೇವೆಯನ್ನು ಅಬ್ದುಲ ಖೈರಖಾನನು ತುಂಬಾ ಮೆಚ್ಚಿಕೊಂಡು, ಅವನ ಪ್ರಾಮಾಣಿಕತೆಯನ್ನು ಪ್ರಶಂಸಿಸಿದನು. ನಂತರ ಅಬ್ದುಲ ಖೈರಖಾನನು ಅವನಿಗೆ ಬಡತಿ ಕೊಟ್ಟು ಅವನನ್ನು ಸವಣೂರು ರಾಜ್ಯದ ದಿವಾಣನೆಂದು ನಿಯಮಿಸಿದನು. ಕೃಷ್ಣರಾವ ಸವಣೂರಿನ ನಾಲ್ಕನೇ ಬ್ರಾಹ್ಮಣ ದಿವಾಣನಿರಬೇಕು. ಇವನು ೧೮೨೦ ಅಥವಾ ೧೮೨೨ ರ ಮಧ್ಯೆ ಸವಣೂರು ದಿವಾಣನಾಗಿರಬೇಕು. ಕೃಷ್ಣರಾಯನನ್ನು ದಿವಾಣನೆಂದು ನಿಯಮಿಸಲು ದೊಡ್ಡ ವ್ಯಾಪಾರಿಯಾಗಿದ್ದ ಝಕೀರಖಾನ ಬಂಗಸಹಿ ಕೂಡ ಶಿಫಾರಸ್ಸು ಮಾಡಿದ್ದನು. ಝಕೀರಖಾನನು ಸವಣೂರಿನವನೇ ಇದ್ದು ನವಾಬನಿಗೆ ರೇಶ್ಮೆ, ಉಣ್ಣೆ, ಹತ್ತಿ ಬಟ್ಟೆಗಳನ್ನು ಒದಗಿಸುತ್ತಿದ್ದನಲ್ಲದೆ, ಅಂತಃಪುರದ ಝನಾನಾದಲ್ಲಿ ಅತ್ಯಂತ ಪ್ರಸಿದ್ಧನಾಗಿದ್ದನು. ಇವನು ತನ್ನ ಬುದ್ಧಿ ಮತ್ತು ವ್ಯವಹಾರ ಕುಶಲತೆ, ಮಧುರ ಮಾತುಗಳಿಂದ ಖೈರಖಾನನ ಆಪ್ತ ಸ್ನೇಹಿತನಂತಿದ್ದನು. ಚಿನ್ನವನ್ನು ಪರೀಕ್ಷಿಸುವ ಒರೆಗಲ್ಲ ಮೇಲೆ ಪಾರಜವನ್ನು ಹಾಕಿದರೆ, ಪಾರಜವು ಒರೆಗಲ್ಲಿಗೆ ಹತ್ತಿದ ಬಂಗಾರವನ್ನು ಪರಿಶುದ್ಧ ಬಂಗಾರವನ್ನಾಗಿ ಪರಿವರ್ತಿಸುವಂತೆ, ಝಕೀರಖಾನನು ದೃಷ್ಟಿ ಬೀಸಿದಲ್ಲೆಲ್ಲ ಲಾಭದಾಯಕವಾಗುತ್ತಿತ್ತೆಂದು ಖೈರಖಾನನ ಪರಿವಾರದವರು ಹೇಳುತ್ತಿದ್ದರು. ಹೀಗಾಗಿ ಝಕೀರಖಾನನನ್ನು ಅಬ್ದುಲ ಖೈರಖಾನನು ಪೇಶಕಾರ ಅಥವಾ ಶಿರಸ್ತೇದಾರನೆಂದು ನಿಯಮಿಸಿದನು.

## ಸವಣೂರು ಕೋಟೆಯನ್ನು ಕೆದಪಿಸಿದ್ದು

ಬ್ರಿಟಿಶರ ವಕೀಲನಾಗಿದ್ದ ಖರ್ಷೆದಜಿ ಮೋದಿ, ಸದಾಶಿವಪಂತ ಕೊಲ್ಹಟಕರ ಅನ್ನುವವನನ್ನು ಕರ್ನಾಟಕದ ಸರಸುಬಾ (ಉಪಪ್ರಾಂತಾಧಿಕಾರಿ) ಎಂದು ನಿಯಮಿಸಿ

ಸವಣೂರಿಗೆ ಕಳಿಸಿದನು. ಇವನು ಅತ್ಯಂತ ದುಷ್ಟನಿದ್ದು ವಿಚ್ಛಿದ್ರಮನೋಕಾರಿಯವನಿದ್ದನು. ಇವನು ಪೇಶ್ವೆಯವರು ತನಗೆ ಆಜ್ಞೆಯನ್ನಿತ್ತಿರುವರೆಂದು ಹೇಳಿ, ಸವಣೂರು ಕೋಟೆಯ ಹೊರ ಗೋಡೆಗಳನ್ನೆಲ್ಲ ಕೆಡವಿಸಿ ಹಾಕಿದನು. ಅಪಾರ ಹಣವನ್ನು ವ್ಯಯಿಸಿ ಜನರ ಸುರಕ್ಷತೆಗಾಗಿ ಕಟ್ಟಿಸಿದ ಕೋಟೆ ಈಗ ದುರ್ಬಲವಾಗಿ ನೆಲಸಮವಾದಂತಾಯಿತು. ಯಾವ ಆಸ್ತಿಯೂ ಶಾಶ್ವತವಲ್ಲ ಅನ್ನುವುದಕ್ಕೆ ಸವಣೂರ ಕೋಟೆಯ ಹೊರಗಿನಗೋಡೆ ಭಿನ್ನವಾಯಿತು. ಖೈರಖಾನ ಮತ್ತು ಸವಣೂರಿನವರು ಇದರಿಂದ ದುಃಖಿತಪ್ತರಾದರು. ನಂತರ ಪೇಶ್ವೆಯವರು ಇದನ್ನು ಕೇಳಿ ಈ ಖರ್ಷಿದಜಿಯನ್ನು ಸೇವೆಯಿಂದ ಅಮಾನತ್ತಿನಲ್ಲಿಟ್ಟರು.

ಪೇಶ್ವೆಯವರು ಸದಾಶಿವಪಂತನ ಬದಲು ತ್ರಯಂಬಕಜಿ ಡೇಂಗಲೆ ಅನ್ನುವವನನ್ನು ಸದಾಶಿವಪಂತನ ಸ್ಥಾನದಲ್ಲಿ ಸರಸುಬಾ ಎಂದು ನಿಯಮಿಸಿದರು. ಇವನು ತನ್ನ ಪ್ರತಿನಿಧಿಯೆಂದು ಹೈಬತರಾವನನ್ನು ಸವಣೂರಿಗೆ ಕಳಿಸಿದನು. ಇವನೊಬ್ಬ ಜಂಬದ ಕೋಳಿ. ಖೈರಖಾನನು ತನಗೆ ಮಾನಮರ್ಯಾದೆಯನ್ನು ಕೊಡಬೇಕೆಂಬ ಆಪೇಕ್ಷೆಯಿಂದಲೇ ಸವಣೂರಿಗೆ ಕಾಲಿಟ್ಟನು. ಖೈರಖಾನನು ಈ ಸಾಮಾನ್ಯ ಅಧಿಕಾರಿಯನ್ನು ಗಮನಿಸದಾಗಲು ಹೈಬತರಾವ ಖೈರಖಾನನಿಗೆ ವಿಪರೀತ ತೊಂದರೆಗಳನ್ನು ಕೊಡಹತ್ತಿದನು. ಇದನ್ನು ಸಹಿಸಲಾರದ ಅಬ್ದುಲ ಖೈರಖಾನನು ಮೌಜೀಬ ಖಾತೂನ ಅಮ್ಮಾಸಾಹೇಬ, ಖಂಡೋಪಂತ ಡಬೀರ, ನರಸಿಂಗರಾವ, ಅವಲಖಾನ ದರೇಸಾ ಅವರನ್ನು ಪುಣೆಗೆ ಕಳಿಸಿ ಬಾಜೀರಾವ ಪೇಶ್ವೆ ಅವರಿಗೆ ದೂರು ಸಲ್ಲಿಸಿದನು. ಇವರ ಜೊತೆ ತನ್ನ ಮಗನಾದ ಅಬ್ದುಲ ಫಯಜಖಾನನನ್ನು ಪುಣೆಗೆ ಕಳಿಸಿದನು. ಪೇಶ್ವೆಯವರಿಗೆ ನಜರಾಣೆ ಕೊಡಲು ಖೈರಖಾನನು ತನ್ನ ಮಗನ ಕಡೆ ಬಂಗಾರದ ಸರಪಳಿ ಕಟ್ಟಿ, ಅಂಬಾರಿಂಯನ್ನೆರಿಸಿದ ಆನೆ, ಬಂಗಾರದ ಥಡಿ ಹಾಕಿದ ಅಲಂಕೃತ ಇರಾಣಿ ಕುದುರೆ, ಭಾರಿ ಕಿಮ್ಮತ್ತಿನ ಖಡ್ಗವನ್ನು ಕೊಟ್ಟು ಕಳಿಸಿದ್ದನು.

ಅಬ್ದುಲ ಫಯಾಜಖಾನ ಯುವರಾಜನು ಪುಣೆಗೆ ಹೋಗಿ ಸವಣೂರಿನ ಎಲ್ಲ ವಿದ್ಯಮಾನಗಳನ್ನು ಎರಡನೇ ಬಾಜೀರಾವ ಪೇಶ್ವೆಗೆ ವಿವರಿಸುತ್ತ, ಅವರ ಪ್ರತಿನಿಧಿ ಹೈಬತರಾವನ ಅಹಮಿಕೆಯಿಂದ ರಾಜ್ಯಕ್ಕೆ ಅದೆಷ್ಟು ತೊಂದರೆಯಾಗುತ್ತಿದೆಯೆಂದು ನಿವೇದಿಸಿದನು. ಸರಿ, ಬಾಜೀರಾವನು ತಕ್ಷಣ ಸವಣೂರಿಗೊಂದು ಪತ್ರ ಬರೆದು ಹೈಬತರಾವನಿಗೆ "ನೀನು ನಿನ್ನ ಕಂಬಳಿಯಿದ್ದಷ್ಟೇ ಕಾಲು ಚಾಚು. ಶಿಷ್ಟಾಚಾರವನ್ನು ಬಿಟ್ಟು ನವಾಬ ಅಬ್ದುಲ ಖೈರಖಾನರೊಂದಿಗೆ ಸರಿಯಾಗಿ ವರ್ತಿಸು. ಇಲ್ಲದಿದ್ದರೆ ಪರಿಣಾಮ ನೆಟ್ಟಗಾಗಲಿಕ್ಕಿಲ್ಲ" ಎಂದು ಎಚ್ಚರಿಕೆಯನ್ನಿತ್ತನು. ಶ್ರೀಮಂತ ಬಾಜೀರಾವ ಪೇಶ್ವೆಯವರ ಪತ್ರವನ್ನು ನೋಡಿ ಹೈಬತರಾವನು ಮೆತ್ತಗಾಗಿ ಧಣಿಯ ಕಾಲು ನೆಕ್ಕುವ ನಾಯಿಯಂತಾದನು. ಬಾಜೀರಾವನು ಸವಣೂರು ಯುವರಾಜ ಫಯಾಜಖಾನನನ್ನು

ಸತ್ಕರಿಸಿ, ಸವಣೂರು ರಾಜ್ಯದ ಸುರಕ್ಷತೆಯ ಬಗ್ಗೆ ತಮ್ಮಿಂದ ಎಲ್ಲ ಸಹಾಯವೂ ದೊರೆಯುವದೆಂದು ತಂದೆ ಅಬ್ದುಲ ಖೈರಖಾನನಿಗೆ ತಿಳಿಸಲು ಹೇಳಿ ಬೀಳ್ಕೊಟ್ಟನು.

**ಈದಗಾ ನಿರ್ಮಾಣ**

ಅಬ್ದುಲ ಖೈರಖಾನನು ಸವಣೂರಿನ ಶಿಲ್ಪಿಗಳಿಗೆ ಮತ್ತು ಕೆಲಸಗಾರರಿಗೆ ಉದ್ಯೋಗಗಳನ್ನು ಕಲ್ಪಿಸಲು, ಹಳೆಯದೊಂದು ಈದಗಾ ಇದ್ದರೂ, ಹೊಸದೊಂದನ್ನು ಕಟ್ಟಿಸಲು ೧೮೧೭ ರಲ್ಲಿ ಪ್ರಾರಂಭಿಸಿದನು. ಏಳು ವರುಷಗಳ ಕಾಲ ನವಾಬನು ಈ ಈದಗಾ ಕಟ್ಟಿ ಅಪಾರ ಹಣವನ್ನು ವ್ಯಯಿಸಿದನು. ೧೮೨೪ರಲ್ಲಿ ಈ ಕಟ್ಟಡವು ಪೂರ್ತಿಯಾದಾಗ, ಸವಣೂರಿನ ಪ್ರಜೆಗಳು ಸಂತೃಪ್ತರಾಗಿ ಈ ಈದಗಾದ ಮೇಲೆ ಕೂಡಿಸಲು ಒಂದು ದೊಡ್ಡ ಗುಮ್ಮಟವನ್ನು ನಿರ್ಮಿಸಿದರು. ಇದಕ್ಕೆ ಬಂದ ಒಂದು ಸಾವಿರ ರೂಪಾಯಿ ವೆಚ್ಚವನ್ನು ಪ್ರಜೆಗಳೇ ಸ್ವಯಂ ಸ್ಫೂರ್ತಿಯಿಂದ ಕೊಟ್ಟರು. ಈ ಗುಮ್ಮಟಕ್ಕೆ ಬಂಗಾರದ ನೀರನ್ನು ಕೂಡಿಸಿ ಒಂದು ಸುಮುಹೂರ್ತದಲ್ಲಿ ಗುಮ್ಮಟವನ್ನು ಈದಗಾದ ಮೇಲೆ ಇಟ್ಟರು, ಈ ಗುಮ್ಮಟದ ಮೇಲೆ ನವಾಬ ಖೈರಖಾನನ ಹೆಸರನ್ನು ಕೆತ್ತಲಾಗಿದೆ. ಅದು ಈಗಲೂ ಸವಣೂರಲ್ಲಿ ಇದೆ.

**ಪೇಶ್ವೆಯವರ ಪತನ**

ಅಬ್ದುಲ ಖೈರಖಾನನ ಕೊನೆಯ ದಿವಸಗಳಲ್ಲಿ, ಪೇಶ್ವೆಯವರು ಕಟ್ಟಿದ್ದ ಸಾಮ್ರಾಜ್ಯವು ಕುಸಿಯ ಹತ್ತಿತು. ಅಧಿಕಾರ ಮದದಿಂದ ಪೇಶ್ವೆಯವರಲ್ಲಿ ಲಂಚ, ಉದ್ಧಟತನ, ಆಲಸ್ಯ, ಭೋಗ, ಲಾಲಸೆ, ಅಸಮರ್ಥತೆ ಹೆಚ್ಚಾಗಿ ಸಾಮ್ರಾಜ್ಯದ ವಿಶಾಲ ವೃಕ್ಷವು ಬೀಳುವ ಲಕ್ಷಣಗಳು ಕಾಣಸಹತ್ತಿದವು.

ಅಧಿಕಾರಿಗಳಲ್ಲಿ ಕೆಲವರೇ ದಕ್ಷರಿದ್ದರೂ, ಉಳಿದವರು ವಶೀಲಿಯಿಂದ ನೌಕರಿಗಳನ್ನು ಗಿಟ್ಟಿಸಿದ್ದರಿಂದ ಅದಕ್ಷತೆಯು ಆಡಳಿತೆಯಲ್ಲಿ ಕಂಡು ಬರಹತ್ತಿತು. ಹೀಗಾಗಿ ಜನರು ರೊಚ್ಚಿಗೆದ್ದು, ಪೇಶ್ವೆಯವರನ್ನು ದೂಷಿಸಹತ್ತಿದರು. ಸೈನ್ಯದಲ್ಲಿ ಕೂಡ ಶಿಥಿಲತೆ ಕಂಡು ಬಂದಿತು. ಪೇಶ್ವೆಯಪರಲ್ಲಿ ಮೂರು ಲಕ್ಷ ಅಶ್ವಸವಾರರು ಮತ್ತು ಅಸಂಖ್ಯ ಕಾಲ್ದಳದ ಸೈನಿಕರಿದ್ದರು.ಆದರೆ ಬ್ರಿಟಿಶರ ವಿರುದ್ಧ ಪೇಶ್ವೆಯವರು ತತ್ತರಿಸಬೇಕಾಯಿತು. ಬ್ರಿಟಿಶರನ್ನು ಎದುರಿಸಲಾರದ ಬಾಜೀರಾವ ರಘುನಾಥಪಂತನು ಯುದ್ಧವನ್ನು ಮಾಡದೆ, ಬ್ರಹ್ಮಾವರ್ತಕ್ಕೆ ಒಡಿಹೋಗಿ ದೇವರಪೂಜೆ ಮಾಡುತ್ತಕುಳಿತನು. ಇದರಿಂದ ಪೇಶ್ವೆಯವರ ಹೆಣ್ಣುಮಕ್ಕಳಿಗೆ ಅವಮಾನವಾದಂತಾಯಿತು. ಪೇಶ್ವೆಯವರ ಸಾಮ್ರಾಜ್ಯ ಎಂದು ಹಾಳಾಯಿತು ಎಂದು ವಿಜಾಪುರದ ಹಜರತ್ ಸಾಹೇಬ ಸೈಯ್ಯದ ಅನ್ನುವ ಇತಿಹಾಸ ಕಾರನು 'ಥೂ ಥೂ' ಎಂಬ ವರ್ಣಮಾಲೆಯಿಂದ ವಿವರಿಸಿ ಅವುಗಳ ಸ್ಥಾನಗಳನ್ನು ಲೆಕ್ಕ ಹಾಕಿದರೆ ಅದು ಹಿಜರಾ ಶಕೆಯ ಮೇರೆಗೆ ೧೨೩೩ ಆಗುತ್ತದೆ ಅಂದರೆ, ೧೮೧೮ನೇ ಇಸ್ವಿ.

ಕೊನೆಯವನಾದ ಶ್ರೀಮಂತ ಎರಡನೇ ಬಾಜೀರಾಯನು ಬ್ರಿಟಿಶರಿಗೆ ಸೋತೊಡನೆ, ಜೂನ್ ೩, ೧೮೧೮ ರಂದು ಬ್ರಿಟಿಶರು ಅವನನ್ನು ಪದಚ್ಯುತಗೊಳಿಸಿದರು. ಎರಡನೇ ಬಾಜೀರಾವನ ತಲೆಗೆ, ಪೇಶ್ವೆಯವರ ಪುಣ್ಯದೀಪ ನಂದಿದಾಗ, ಅಬ್ದುಲ ಖೈರಖಾನನಿಗೆ ಒಂದು ರೀತಿ ಆನಂದವಾಯಿತು. ಹಾಗೆ ನೋಡಿದರೆ, ಸವಣೂರಿಗೆ ಈ ಅನವಸ್ಥೆ ಬರಲು ಮತ್ತು ಸವಣೂರು ಸಣ್ಣ ರಾಜ್ಯವಾಗಿ ಪರಿವರ್ತನೆಗೊಳ್ಳಲು ಪೇಶ್ವೆಯವರೇ ಕಾರಣರಾದರು. ಟಿಪ್ಪು ಸುಲ್ತಾನನು ಸವಣೂರನ್ನು ಉಧ್ವಸ್ತಗೊಳಿಸುತ್ತೇನೆಂದು ಹೇಳಿದನೇ ವಿನಃ ಅವನು ಉಧ್ವಸ್ತಗೊಳಿಸಲಿಲ್ಲ. ಅವನಿಗೆ, ಅಬ್ದುಲ ಹಕೀಮಖಾನನು ತನಗೆ ಮಾಡಿದ ಅಗೌರವದ ಸೇಡನ್ನು ತೀರಿಸಿಕೊಳ್ಳಬೇಕಾಗಿತ್ತೇ ವಿನಃ ಬೇರಾವ ದುರದ್ದೇಶವೂ ಇರಲಿಲ್ಲ. ಹಕೀಮಖಾನನು ಟಿಪ್ಪುವಿನಿಂದತಪ್ಪಿಸಿಕೊಂಡು ಪುಣೆಗೆ ಪಲಾಯನ ಬೆಳೆಸಿದನೆಂಬ ಸುದ್ದಿಯನ್ನು ಕೇಳಿ ಅವನ ಮಗನಾದ ಖೈರಖಾನನಿಗೆ "ನಿಮ್ಮ ತಂದೆ ಏಕೆ ಓಡಿ ಹೋದರು? ನಾನೇನೂ ಅವರ ರಾಜ್ಯವನ್ನು ಕಸಿದುಕೊಂಡಿಲ್ಲ" ಎಂದು ಉದ್ಗಾರ ತೆಗೆದುದನ್ನು ನೋಡಿದರೆ, ಟಿಪ್ಪು, ಹಕೀಮಖಾನನು ಶರಣಾಗತನಾಗಿದ್ದರೆ, ಕ್ಷಮಿಸುತ್ತಿದ್ದನೋ ಏನೋ. ಪೇಶ್ವೆಯವರು ಹಕೀಮಖಾನನಿಗಾಗಲೀ ಅಥವಾ ಖೈರಖಾನನಿಗಾಗಲಿ ಸರಿಯಾಗಿ ಪಿಂಚಣಿ ಕೊಡದೆ ಗೋಳುಹೊಯ್ದುಕೊಂಡರು. ಅವನ ಇಪ್ಪತ್ತೆರಡು ಮಹಲುಗಳನ್ನು ಆಕ್ರಮಿಸಿ "ಇವುಗಳನ್ನು ಯುದ್ಧದ ವೆಚ್ಚಕ್ಕೆ ಒತ್ತೆ ಹಾಕಿದ್ದೇವೆ. ಈ ಸಾಲದ ಹಣವು ಮುಟ್ಟಿದೊಡನೆ ನಿನಗೆ ಮರಳಿ ಕೊಡುತ್ತೇವೆ" ಎಂದು ಸುಳ್ಳು ಹೇಳುತ್ತಲೇ ಬಂದರೇ ವಿನಃ ಅವನ ರಾಜ್ಯವನ್ನು ಅವನಿಗೆ ಕೊಡದೆ, ಅವನನ್ನು ಒಬ್ಬ ಯಃಕಶ್ಚಿತ ಸೇವಕನಂತೆ ನಡೆಸಿಕೊಂಡರು. ಹಕೀಮಖಾನನ ಕೊನೆಯ ಅರೇಳು ವರ್ಷಗಳಿಂದ ಅವನ ಕರ್ನಾಟಕ ಸುಬಾವನ್ನು ತೆಗೆದುಕೊಂಡವರು ಪುನಃ ಅವನಿಗೆ ಕೊಡಲಿಲ್ಲ. ಸವಣೂರು ಸಂಸ್ಥಾನವು ಹಕೀಮಖಾನನ ಕಾಲದ ಕೊನೆಯ ಕೆಲ ವರುಷಗಳಲ್ಲಿ ಅತ್ಯಂತ ದುರ್ಬಲವಾಯಿತು. ಈ ಹಕೀಮಖಾನನಿಗೆ ತನ್ನ ಸುಖಲೋಲುಪತೆಯಲ್ಲಿ ಆಸಕ್ತಿಯಿತ್ತೇ ವಿನಃ ರಾಜ್ಯದ ಆಡಳಿತೆಯಲ್ಲಿರಲಿಲ್ಲ. ಅನ್ನುವುದು ಇದರಿಂದ ಪ್ರಕಟವಾಗುತ್ತದೆ. ಆದರೆ ಈ ದಿಲೇರಜಂಗ ಇತಿಹಾಸ ಕಾವ್ಯ ಅವನನ್ನು ಅನವಶ್ಯಕವಾಗಿ ಹೊಗಳಿದೆ.

## ಥಾಮಸ ಮನ್ರೋ ಸವಣೂರಿಗೆ ಬಂದದ್ದು

ಪೇಶ್ವೆಯವರ ಪತನಾನಂತರ ಕರ್ನಾಟಕ ಸುಬಾ ಹೆಚ್ಚು ಕಡಿಮೆ ಬ್ರಿಟಿಶರಿಗೆ ಸೇರಿತು. ಆದರೆ ಸುಬಾದಲ್ಲಿದ್ದ ಹಳೆಯ ಮರಾಠಿ ಸರದಾರರು ಅಲ್ಲಲ್ಲಿ ಗಲಭೆಗಳನ್ನು ಮಾಡಿ ಸುಬಾದ ಸ್ವಾಸ್ಥ್ಯವನ್ನು ಹಾಳುಮಾಡಹತ್ತಿದ್ದರು. ಇವರನ್ನು ಸದೆಬಡೆದು ಕರ್ನಾಟಕ ಸುಬಾದಲ್ಲಿ ಶಾಂತಿ ಸಮಾಧಾನಗಳನ್ನು ಪ್ರತಿಷ್ಠಾಪಿಸಲು ಮದ್ರಾಸದ ಗವ್ಹರ್ನರ ಆಗಿದ್ದ ಥಾಮಸ ಮನ್ರೋನನ್ನು ಬ್ರಿಟಿಶರು ಸವಣೂರಿಗೆ ಕಳಿಸಿದರು. ಅವನು ಮದ್ರಾಸದಿಂದ ಹೊರಟು ಸವಣೂರಿಗೆ ಬಂದನು. ಖೈರಖಾನನು ಬ್ರಿಟಿಶರ ವಿಶ್ವಾಸಿಕ ಸ್ನೇಹಿತನೆಂದು

ಅವನಿಗೆ ತಿಳಿದಿತ್ತು. ಮಂಗಳಪೇಟೆಯಲ್ಲಿ ಡೇರೆ ಹಾಕಿಸಿ, ತಾನೇ ತಂಗಲು ವ್ಯವಸ್ಥೆ ಮಾಡಿಕೊಂಡು, ಖೈರಖಾನನಿಗೆ ತಾನು ಬಂದುದನ್ನು ಹೇಳಿಕಳಿಸಿದನು. ಅಬ್ದುಲ್ ಖೈರಖಾನನಿಗೆ ಇದನ್ನು ಕೇಳಿ ಅತ್ಯಂತ ಸಂತೋಷವಾಯಿತು. ಅವನು ಥಾಮಸ ಮನ್ರೋನೊಂದಿಗೆ ಭೆಟ್ಟಿಯ ಸಮಯವನ್ನು ಗೊತ್ತುಪಡಿಸಿ ಅವನಿಳಿದ ಡೇರೆಗೆ ಬಂದನು. ಉಭಯತ್ರರು ತಮ್ಮ ಯೋಗಕ್ಷೇಮವನ್ನು ವಿಚಾರಿಸಿಕೊಂಡು, ಸವಣೂರಿನ ಹಿಂದಿನ ಮತ್ತು ಪ್ರಕೃತ ವಿದ್ಯಮಾನಗಳನ್ನು ಕುರಿತು ಬಹುಕಾಲ ಚರ್ಚಿಸಿದರು. ಖೈರಖಾನನು ಮಾತನಾಡುತ್ತ ಆನುಷಾಂಗಿಕವಾಗಿ ತನಗೊದಗಿಬಂದ ಆರ್ಥಿಕ ತೊಂದರೆಗಳನ್ನು ಮನ್ರೋನಿಗೆ ತಿಳಿಸಿದನು. ಇದನ್ನು ಕೇಳಿ ಥಾಮಸ್ ಮನ್ರೋ ತನ್ನ ಸಹಾನುಭೂತಿಯನ್ನು ವ್ಯಕ್ತಪಡಿಸಿದನು. ನವಾಬ ಖೈರಖಾನನು ಆಕಾಶದತ್ತ ಮುಖಮಾಡಿ "ನಾನು ಈಗ ಅಲ್ಲಾನ ಮೇಲೆ ವಿಶ್ವಾಸವಿಟ್ಟು, ನನ್ನೆಲ್ಲ ಸುಖದುಃಖಗಳನ್ನೂ ಅವನಿಗೆ ಒಪ್ಪಿಸಿದ್ದೇನೆ" ಎಂದು ಸಂತಪ್ತನಾಗಿ ಹೇಳಿದನು. ಥಾಮಸ ಮನ್ರೋ ಅಬ್ದುಲ್ ಖೈರಖಾನನ ಆತಿಥ್ಯವನ್ನು ಸ್ವೀಕರಿಸಿ, ಮುಂದೆ ಧಾರವಾಡಕ್ಕೆ ಹೋದನು. ಈ ಭೆಟ್ಟಿ ೧೮೨೦ರ ಹೊತ್ತಿಗೆ ನಡೆದಂತಿದೆ.

ಥಾಮಸ ಮನ್ರೋ ಸೋಲ್ಲಾಪುರಕ್ಕೆ ಹೋಗಿ, ಅಲ್ಲಿಯ ದಂಗೆಗಳನ್ನು ಹತ್ತಿಕ್ಕಲು ಖೈರಖಾನನಿಗೆ ಸೈನಿಕ ಸಹಾಯವನ್ನು ಒದಗಿಸಬೇಕೆಂದು ಕೇಳಿಕೊಂಡನು. ಅಬ್ದುಲ್ ಖೈರಖಾನನು ಅದೀನಖಾನ ಜಮಾದಾರನ ನೇತೃತ್ವದಲ್ಲಿ ಸೊಲ್ಲಾಪುರಕ್ಕೆ ಎರಡು ನೂರು ಅಶ್ವಸವಾರರನ್ನು ಕಳಿಸಿದನು. ಈ ಸೈನ್ಯದ ವ್ಯವಸ್ಥೆಗೆಂದು ಸವಣೂರಿನಿಂದ ಕೋನೇರಿ ರಾವ ಎಂಬ ಬ್ರಾಹ್ಮಣನು ಹೋಗಿದ್ದನು. ಥಾಮಸ್ ಮನ್ರೋನು ಅಬ್ದುಲ್ ಖೈರಖಾನನು ಮಾಡಿದ ಸಕಾಲಿಕ ಸೈನಿಕ ಸಹಾಯವನ್ನು ಕೊಂಡಾಡಿದನು. ಇದೇ ಸಮಯಕ್ಕೆ ಸವಣೂರಿನ ಸರಸುಬಾ (ಉಪಪ್ರಾಂತಾಧಿಕಾರಿ) ಸಂಬಂಧಿಕರಾದ ಸದಾಶಿವಪಂತ ಮತ್ತು ಅಣ್ಣಾಜಿಪಂತ ಜೋಗಳೆಕರ ಅನ್ನುವ ಇಬ್ಬರು ಸರದಾರರು ಸಣ್ಣ ಸೈನ್ಯವನ್ನು ಕಟ್ಟಿ ಕೊಂಡು ಸವಣೂರು ಮತ್ತು ಅದರ ಸುತ್ತಲಿನ ಜನರಿಗೆ ಉಪದ್ರವಗಳನ್ನು ಕೊಡಹತ್ತಿದರು. ಅಬ್ದುಲ ಖೈರಖಾನನು ಈ ವಿಷಯವನ್ನು ಥಾಮಸ್ ಮನ್ರೋನ ಗಮನಕ್ಕೆ ತಂದಾಗ ಅವನು ನವಾಬನಿಗೊಂದು ಪತ್ರ ಬರೆದು, "ನೀನು ಬರೆದ ಡಿಸೆಂಬರ ೨೭ ರ ಪತ್ರ ಬಂದಿತು. ನನ್ನ ಯೋಗಕ್ಷೇಮವನ್ನು ವಿಚಾರಿಸಿದ್ದಕ್ಕೆ ಧನ್ಯವಾದಗಳು. ನೀನು ತಕ್ಷಣ ಸದಾಶಿವಪಂತ ಮತ್ತು ಅಣ್ಣಾಜಿಪಂತನನ್ನು ಬಂಧಿಸಿ, ನಮ್ಮ ಕಡೆ ಕಳಿಸಬೇಕು. ನಾವು ಚಾಪಲಿನ್ ಅನ್ನುವವನನ್ನು ಕಾರಡಗಿ ಮಹಲಿನ ಆಡಳಿತಾಧಿಕಾರಿಯೆಂದು ನಿಯಮಿಸಿದ್ದೇವೆ. ನೀನು ಅವನಿಂದ ನಿನಗೆ ಬೇಕಾದ ಸಹಾಯವನ್ನು ಪಡೆಯಬಹುದು" ಎಂದು ತಿಳಿಸಿದನು. ಹೀಗೆ ಅಬ್ದುಲ್ ಖೈರಖಾನನ ಮತ್ತು ಥಾಮಸ್ ಮನ್ರೋನ ಸ್ನೇಹವು ಗಾಢವಾಯಿತು. ಇದರ ಮೂಲಕ ಅಬ್ದುಲ್ ಖೈರಖಾನ ನವಾಬನು ಬ್ರಿಟಿಶ ಸರಕಾರದಿಂದ

ತನ್ನ ಎಲ್ಲ ಕೆಲಸಗಳನ್ನು ಶೀಘ್ರವಾಗಿ ಮಾಡಿಸಕೊಳ್ಳಲು ಅನುಕೂಲವಾಯಿತು. ಥಾಮಸ ಮನ್ರೋ ನವಾಬನಿಗೆ ಸಹಾಯ ಮಾಡುತ್ತಿದ್ದನು.

## ನವಾಬನ ಪಿಂಚಣಿಯಲ್ಲಿ ಹೆಚ್ಚಳ

ಈ ಹೊತ್ತಿಗೆ ಎಲಫಿನ್‌ಸ್ಟನ್ ಅನ್ನುವವನು ಮುಂಬೈ ಗವ್ಹರ್ನರ ಆಗಿಯೂ, ಸರ ಚಾಪಲಿನ್ ಅನ್ನುವವನು ಕರ್ನಾಟಕ ಸುಬೇದಾರ ಮತ್ತು ಧಾರವಾಡದ ಕಲೆಕ್ಟರನಾಗಿಯೂ ಅಧಿಕಾರವನ್ನು ವಹಿಸಿಕೊಂಡರು. ಥಾಮಸ್ ಮನ್ರೋ ಇಂಗ್ಲೆಂಡಕ್ಕೆ ಮರಳಿ ಹೋದನು. ಸರ ಎಲಫಿನ್‌ಸ್ಟನ್ ಸವಣೂರು ಸಂಸ್ಥಾನದ ಪೊಲಿಟಿಕಲ್ ಏಜೆಂಟ್ (ಬ್ರಿಟಿಶ ರಾಜಪ್ರತಿನಿಧಿ) ಎಂದು ಕೂಡ ನಿಯಮಿಸಲ್ಪಟ್ಟನು.

ಅಬ್ದುಲ್ ಖೈರಖಾನನು ತನ್ನ ಪಿಂಚಣಿಯನ್ನು ಹೆಚ್ಚಿಸಬೇಕೆಂದು ೧೮೨೦ ರಿಂದಲೇ ಬ್ರಿಟಿಶ್ ಸರಕಾರಕ್ಕೆ ಮನವಿಗಳನ್ನು ಸಲ್ಲಿಸುತ್ತಿದ್ದನು. ಈ ಸಲ ಸರಕಾರಕ್ಕೆ ಮತ್ತೊಂದು ಮನವಿ ಪತ್ರವನ್ನು ಬರೆದು, ಆದವಾನಿ, ಅಸಫರಖಾಹೀ ಆಡಳಿತೆಯಲ್ಲಿ ತಜ್ಞನಾಗಿದ್ದ ಮೀರ ರುಕಸುದ್ದೀನ ಹುಸೇನಖಾನ ಅನ್ನುವವನನ್ನು ತನ್ನ ಪ್ರತಿನಿಧಿಯೆಂದು ಮೊದಲು ಧಾರವಾಡದ ಕಲೆಕ್ಟರನ ಕಡೆ ಕಳಿಸಿದನು. ನಂತರ ಕಲೆಕ್ಟರ ಸರ್ ಚಾಪಲಿನ್‌ನು ಮೊದಲು ಶಿಫಾರಸ್ಸಿನೊಂದಿಗೆ ಮೀರ ರುಕುನುದ್ದೀನನನ್ನು ಪುಣೆಯಲ್ಲಿದ್ದ ಗೌರ್ನರ ಏಲ್‌ಫಿನಸ್ಟನ್ನನ ಕಡೆ ಕಳಿಸಿದನು. ಮೀರ ರುಕನುದ್ದೀನನು ಮೂರು ವರುಷ ಪುಣೆಯಲ್ಲಿ ತಳವೂರಿ ಕೊನೆಗೆ, ೧೮೨೫ ರ ಹೊತ್ತಿಗೆ ಪಿಂಚಣಿಯನ್ನು ನಾಲ್ಕು ಸಾವಿರ ರೂಪಾಯಿಗಳಿಂದ ಆರುಸಾವಿರ ರೂಪಾಯಿ ಮಾಡಿಸಿಕೊಂಡು ಸವಣೂರಿಗೆ ಮರಳಿ ಬಂದನು.

ಅಬ್ದುಲ್ ಖೈರಖಾನನು ಇದರಿಂದ ಸಂಪ್ರೀತನಾಗಿ ಸರಕಾರಕ್ಕೆ ಕೃತಜ್ಞತೆಗಳನ್ನು ವ್ಯಕ್ತಪಡಿಸಿ, ಒಂದು ಪತ್ರವನ್ನು ಬರೆದು ಗವ್ಹರ್ನರ ಅಂತಸ್ತಿಗೆ ಒಪ್ಪುವಂತಹ ಅಹೇರೊಂದನ್ನು ಕೊಟ್ಟು ಪೀರ ಮಹಮ್ಮದ ಗಯಾರ್ಖು ಅನ್ನುವ ವಿಶೇಷ ದೂತನನ್ನು ಮುಂಬೈಗೆ ಕಳಿಸಿದನು.

ಗವ್ಹರ್ನರ ಏಲ್‌ಫಿನ್‌ಸ್ಟನ್ನು ನವಾಬನ ಪತ್ರಕ್ಕೆ ಮರಾಠಿಯಲ್ಲಿ ಒಂದು ಉತ್ತರವನ್ನಿತ್ತು "ಮುಂಬೈ ನಡುಗಡ್ಡೆಯ ಗವ್ಹರ್ನರ ಆದ ಏಲ್‌ಫಿನ್‌ಸ್ಟನ್‌ರ ನಮಸ್ಕಾರಗಳು. ನೀವು ನಿಮ್ಮ ಯೋಗಕ್ಷೇಮವನ್ನು ತಿಳಿಸಿ ನಮ್ಮ ಹೃದಯಗಳಿಗೆ ಆನಂದವನ್ನು ನೀಡಿದ್ದೀರಿ. ನೀವು ಕಳುಹಿಸಿದ ಪತ್ರದಿಂದ ನಮಗೆ ಅತ್ಯಂತ ಸಂತೋಷವಾಗಿದೆ. ಸಕಾಲಕ್ಕೆ ಬಂದ ನಿಮ್ಮ ಪತ್ರದಲ್ಲಿ, ನೀವು ಇಲ್ಲಿಗೆ ಬಂದು ನಮ್ಮನ್ನು ಕಾಣಬಯಸಿರುವುದಾಗಿ ತಿಳಿಸಿದ್ದೀರಿ. ನೀವು ಅಷ್ಟು ಶ್ರಮವನ್ನು ವಹಿಸಿ ಇಲ್ಲಿಗೆ ಬರುವುದು ಬೇಡ. ಸರಕಾರದ ಕಡೆಯಿಂದ ನಿಮಗೇನಾದರೂ ಸಹಾಯವು ಬೇಕಿದ್ದರೆ, ಧಾರವಾಡ ಕಲೆಕ್ಟರ ಚಾಪಲಿನ್ ಬಹದ್ದೂರರಿಗೆ ತಿಳಿಸಿದರೆ, ಖಂಡಿತ ಅವರು ನಿಮ್ಮ ನೆರವಿಗೆ

ಬರುತ್ತಾರೆ. ನಿಮ್ಮ ವೆಚ್ಚಕ್ಕೆ ನಿಮ್ಮ ಪಿಂಚಣಿಯನ್ನು ಏರಿಸಿದ್ದೇವೆ - ಫೆಬ್ರವರಿ ೧೧, ೧೮೨೨'' ಎಂದು ತಿಳಿಸಿದನು.

## ಮೈಸೂರು ಕೃಷ್ಣರಾಜ ಒಡೆಯರಿಗೆ ಮೇಣೆ ಕಳಿಸಿದ್ದು

ಅಬ್ದುಲ್ ಖೈರಖಾನನಿಗೆ ಸ್ನೇಹಿತರು ಬೇಕು. ಹೊಸ ಹೊಸ ಸ್ನೇಹಿತರನ್ನು ಮಾಡಿಕೊಳ್ಳುವಲ್ಲಿ ಅವನಗೆ ಅತ್ಯಂತ ಉತ್ಸಾಹ. ಅವನು ಒಂದು ಮೇಣೆಯನ್ನು ಮಾಡಿಸಿ ಅದಕ್ಕೆ ರೇಶಿಮೆ ಛತ್ತು ಹೊಲಿಸಿ, ರೇಶಿಮೆ ಗೊಂಡೆ ಹಾಕಿಸಿ, ಮೇಲೆ ಹೊಳೆಯುವ ಗಿಲೀಟಿನ ಕಳಶಗಳನ್ನು ಕೂಡಿಸಿದನು. ಈ ಮೇಣೆಯೊಂದಿಗೆ ಒಂದು ಲಾಹೋರಿ ಬಿಲ್ಲು ಹಾಗೂ ಒಂದು ಸಾವಿರ ಇಸ್ಪಹಾನ್ ಬಾಣಗಳನ್ನು ಕಳಿಸಿದನು. ವರ್ಣವರ್ಣದ ಒಂದು ರಾಜಛತ್ರವನ್ನು ಪೂರ್ಣಯ್ಯನವರ ಕಡೆಗೆ ಕಳಿಸಿದನು. ಈ ಆಹೇರುಗಳ ಜೊತೆ ಒಂದು ಪತ್ರವನ್ನುಬರೆದು "ನಿಮಗೆ ನಿಮ್ಮ ಸಂಸ್ಥಾನವು ಮರಳಿ ಬಂದುದಕ್ಕೆ ಧನ್ಯವಾದಗಳು'' ಎಂದು ತನಗಾದ ಸಂತೋಷವನ್ನು ವ್ಯಕ್ತಪಡಿಸಿದನು. ಮೈಸೂರು ಮಹಾರಾಜ ಕೃಷ್ಣರಾಜ ಒಡೆಯರು ಇದಕ್ಕೆ ಪ್ರತಿಯಾಗಿ ಖೈರಖಾನ ನವಾಬನಿಗೆ ಒಂದು ಅಲಂಕೃತವಾದ ಆನೆ, ಸುಂದರವಾದ ಅಂಬಾರಿಯನ್ನು ಕಳುಹಿಸಿಕೊಟ್ಟರು.ಹಾಗೆ ನೋಡಿದರೆ, ಮೈಸೂರು ಸಾಮ್ರಾಜ್ಯವನ್ನು ಮೈಸೂರು ಒಡೆಯರಿಂದ ಕಸಿದುಕೊಂಡವನು ಬೇರಾರೂ ಆಗಿರದೇ ಇವನ ಮಾವನಾದ ಹೈದರ ಅಲೀಖಾನ. ಅವನ ಮರಣಾನಂತರ ಅದನ್ನು ಕಪಿಮುಷ್ಠಿಯಲ್ಲಿ ಹಿಡಿದುಕೊಂಡವನು ಇವನ ಭಾವ ಟಿಪು ಸುಲ್ತಾನ. ಆದರೆ ನ್ಯಾಯಬದ್ಧವಾಗಿ ಯಾರಿಗೆ ಸಿಂಹಾಸನವು ಸೇರಬೇಕೋ ಅದು ಸೇರಿದ್ದಕ್ಕೆ ಖೈರಖಾನ ನವಾಬನಿಗೆ ಸಮಾಧಾನವಾಗಿತ್ತು. ಅವನ ಹೃದಯ ವಿಶಾಲವಿತ್ತು.

## ಧಾರವಾಡ ಕಲೆಕ್ಟರ ಡಬ್ಲ್ಯೂ ಚಾಪಲಿನ್ನ ಭೆಟ್ಟಿ

ಜಮಾಬಂದಿ ಕಾರ್ಯವನ್ನು ವೀಕ್ಷಿಸಲು ಕಲೆಕ್ಟರ ಡಬ್ಲ್ಯೂ ಚಾಪಲಿನ್ ಮಜೀದಪುರ (ಹುಬ್ಬಳ್ಳಿ)ದಲ್ಲಿ ವಾಸ್ತವ್ಯ ಮಾಡಿದ್ದನು. ಈ ವಿಷಯವನ್ನು ಪತ್ರಮುಖೇನ ನವಾಬ ಖೈರಖಾನನಿಗೆ ತಿಳಿದೊಡನೆ ಅವನು ಚಾಪಲಿನ ಅನುಮತಿ ಪಡೆದು ಅವನ ಭೈಟ್ಟಿಗೆಂದು ಹುಬ್ಬಳ್ಳಿಗೆ ಬಂದನು. ಹಿಂದೂಸ್ತಾನದಲ್ಲಿ ಗೌರವಾನ್ವಿತವ್ಯಕ್ತಿ ಭೆಟ್ಟಿಯಾದರೆ, ಅವನನ್ನು ಹೇಗೆ ಸ್ವಾಗತಿಸಬೇಕು ಅನ್ನುವುದನ್ನು ಚಾಪಲಿನ್ ದಾಖಲೆಗಳಿಂದ ಓದಿಕೊಂಡು, ನವಾಬ ಖೈರಖಾನನು ತನ್ನ ಡೇರೆಗೆ ಬರುವ ದಾರಿಯಲ್ಲಿ ಹುಬ್ಬಳ್ಳಿಯ ಪ್ರತಿಷ್ಠಿತರನ್ನು, ಶ್ರೀಮಂತರನ್ನು, ಅಧಿಕಾರಿಗಳನ್ನು ಸಾಲಾಗಿ ನಿಲ್ಲಿಸಿದ್ದನು. ಖೈರಖಾನನು ಆನೆಯ ಮೇಲಿನ ಅಂಬಾರಿಯಿಂದ ಇಳಿದೊಡನೆ, ಚಾಪಲಿನ್ ಅವನ ಕೈಕುಲುಕಿ ಒಳಗೆ ಕರೆದುಕೊಂಡು ಹೋದನು. ಖೈರಖಾನನು ಡೇರೆಯೊಳಗೆ ಹೋಗುವ ಮುನ್ನ, ಸೈನಿಕರು ಗಾಳಿಯಲ್ಲಿ ಹುಸಿಗುಂಡುಗಳನ್ನು ಹಾರಿಸಿ ಅವನಿಗೆ ಸ್ವಾಗತವನ್ನು ಕೋರಿದರು. ನಂತರ, ಇಬ್ಬರೂ

ಪರಸ್ಪರ ಯೋಗಕ್ಷೇಮವನ್ನು ವಿಚಾರಿಸಿ, ಕರ್ನಾಟಕ ಸುಬಾದ ಅನೇಕ ವಿಷಯಗಳನ್ನು ಚರ್ಚಿಸಿದರು. ನವಾಬನು ಮರಳಿ ಹೊರಟಾಗ, ಅವನಿಗೆ ಗುಲಾಬ ಸಿಂಪಡಿಸಿ, ಮುಂಗೈಗೆ ಅತ್ತರ ಹಚ್ಚಿದನು. ಅವನಿಗೆ ಚಾಪಲಿನ್ ತಾಂಬೂಲದ ತಟ್ಟೆಯೊಂದನ್ನು ಕೊಡಲು ಮರೆಯಲಿಲ್ಲ. ಆ ತಟ್ಟೆಯಲ್ಲಿ ಖೈರಖಾನನಿಗೆ ಒಂದು ಅಹೇರನ್ನು ಇಟ್ಟಿದ್ದನು. ಚಾಪಲಿನ್ ಮುಂದೆ ಖೈರಖಾನನ ಡೇರೆಗೆ ಹೋಗಿ ಅವನ ಆದರಾತಿಥ್ಯವನ್ನು ಸ್ವೀಕರಿಸಿದನು. ನವಾಬ ಖೈರಖಾನನ ಸುಂದರವಾದ ಡೇರೆ, ಡೇರೆಯ ಎಲ್ಲೆಡೆಯಲ್ಲಿಯೂ ಹರಡಿದ್ದ ಸುವಾಸನೆಯನ್ನು ಆಘ್ರಾಣಿಸಿ, ಚಾಪಲಿನ್ ಸಂತೋಷಭರಿತನಾದನು. ಕಲೆಕ್ಟರ ಚಾಪಲಿನ್ನನಿಗೆ ಕೊಡಲು ನವಾಬ ಖೈರಖಾನನು ಬೆಳ್ಳಿ ಖುರ್ಚಿಯೊಂದನ್ನು ಸವಣೂರಿಂದ ತಂದಿದ್ದನು. ಒಂದು ಕಾಲಕ್ಕೆ ಇಡೀ ಕರ್ನಾಟಕ ಸುಬಾ ಆಳಿದ ಇವನ ತಂದೆ ಮತ್ತು ಇವನ ಅಜ್ಜಂದಿರು ಹಾಕಿಕೊಟ್ಟ ಸಂಪ್ರದಾಯವನ್ನು, ಇವನು ಇನ್ನೂ ನಡೆಸಿಕೊಂಡು ಬಂದಿರುವುದನ್ನು ನೋಡಿ ಚಾಪಲಿನ್ನನಿಗೆ ಆನಂದಾಶ್ಚರ್ಯಗಳಾದವು. ನವಾಬ ಖೈರಖಾನನು ಅಂದು ರಾತ್ರಿ ಹುಬ್ಬಳ್ಳಿಯಲ್ಲಿ ವಾಸ್ತವ್ಯ ಮಾಡಿ, ಮರುದಿವಸ ರಾಜಧಾನಿ ಸವಣೂರಿಗೆ ಬಂದನು.

ಚಾಪಲಿನ್ ಮತ್ತು ಖೈರಖಾನನ ಸ್ನೇಹವು ಆತ್ಮೀಯವಾಗಿ ಬೆಳೆಯಿತು. ಈ ಭೆಟ್ಟಿಯು ಸುಸ್ಮರಣೀಯವಾಗಲೆಂದು ಡಬ್ಲ್ಯೂ ಚಾಪಲಿನ್ ಅಕ್ಟೋಬರ್ ೨೮, ೧೮೧೮ ರಂದು ಒಂದು ಆಜ್ಞೆಯನ್ನುಹೊರಡಿಸಿ, "ಸವಣೂರು ರಾಜ್ಯದಲ್ಲಿರುವ ಹತ್ತೀಮತ್ತೂರು, ಕರ್ಜಗಿ, ನರೇಗಲ್, ಬೆಳವತ್ತಿಗಳಲ್ಲಿರುವ (ಇವು ಸವಣೂರಿಗೆ ಸಮೀಪದಲ್ಲಿವೆ) ತೋಟಗಳನ್ನು ನವಾಬ ಖೈರಖಾನನಿಗೆ ಕೊಟ್ಟಿರುವುದರಿಂದ ಅಲ್ಲಿಯ ದೇಸಾಯಿ ಹಾಗೂ ದೇಶಪಾಂಡೆಯವರು ಈ ತೋಟಗಳ ಮೇಲಿನ ತಮ್ಮ ಹಕ್ಕನ್ನು ಸವಣೂರು ನವಾಬ ಅಬ್ದುಲ್ ಖೈರಖಾನನಿಗೆ ವಹಿಸಿಕೊಡಬೇಕು" ಎಂದು ತಿಳಿಸಿದನು. ಈ ಎಲ್ಲ ಹಳ್ಳಿಗಳೂ ಬಂಕಾಪುರ ತಾಲೂಕಿಗೆ ಸೇರಿದ್ದವು. ನಂತರ ಕೋನೇರಿ ರಾಯನನ್ನು ಕರೆದು "ಅಡೂರು ತಾಲ್ಲೂಕಿನಲ್ಲಿರುವ ನರೇಗಲ್ ತೋಟವನ್ನು ಬ್ರಿಟಿಶ ಸರಕಾರವು ಖೈರಖಾನನಿಗೆ ಕೊಟ್ಟಿದೆ. ಈಗ ಖೈರಖಾನನ ಮತ್ತು ಕಂಪನಿ ಸರಕಾರದ ಸಂಬಂಧಗಳು ಸುಮಧುರವಾಗಿರುವುದರಿಂದ ಈ ತೋಟವನ್ನು ಅವರು ತೆಗೆದುಕೊಂಡು ತಮ್ಮ ಇಚ್ಛೆಗೆ ಬಂದಂತೆ ಅದರ ಉಪಯೋಗವನ್ನು ಪಡೆಯಬೇಕು" ಎಂದು ಹೇಳಿ ಕಳುಹಿಸಿದನು. ಚಾಪಲಿನ್ ತನ್ನ ಮತ್ತು ಖೈರಖಾನನ ಈ ಸ್ನೇಹ ತಮ್ಮ ಜೀವನದ ಕೊನೆಯವರೆಗೂ ನೆನಪಿರಬೇಕೆಂದು, ಈ ತೋಟಗಳನ್ನು ಕೊಟ್ಟನು. ಮುಂದೆ ೧೮೧೯ ರ ಅಂತ್ಯಕ್ಕೆ ಡಬ್ಲ್ಯೂ ಚಾಪಲಿನ್ ಕಮೀಷನರನಾಗಿ ಪುಣೆಗೆ ವರ್ಗವಾಗಿ ಹೋದನು. ಅವನ ಸ್ಥಾನಕ್ಕೆ ಜಾನ್ ಥ್ಯಾಕರೆ ಅನ್ನುವವನು ಧಾರವಾಡದ ಕಲೆಕ್ಟರನಾಗಿ ೧೮೨೦ರಲ್ಲಿ ಬಂದವನು ನಾಲ್ಕು ವರುಷ ಧಾರವಾಡದಲ್ಲಿದ್ದನು. ಇಷ್ಟೇ ಅಲ್ಲ, ಇವನು ಕಿತ್ತೂರಿನ ಯುದ್ಧದಲ್ಲಿ ಸೈನಿಕರ ಗುಂಡಿಗೆ ಹತನಾದನು. ಇವನ ಗೋರಿ

ಧಾರವಾಡದ ಸವದತ್ತಿ ರಸ್ತೆಗಿದೆ.

ಥ್ಯಾಕರೆ ತನ್ನ ಕೆಲಸಕ್ಕೆಂದು ಹಾವೇರಿಯಲ್ಲಿ ವಾಸ್ತವ್ಯ ಮಾಡಿರುವಾಗ, ಅಬ್ದುಲ್ ಖೈರಖಾನನು ಭೆಟ್ಟಿಯಾಗಿ ಅಹೇರು ಕೊಟ್ಟು, ಅವನ ಸ್ನೇಹವನ್ನು ಬೆಳೆಸಿಕೊಂಡನು. ಥ್ಯಾಕರೆ ಖೈರಖಾನನ ಹಳೇ ರೀತಿಯ ನವಾಬೀ ವೈಭವವನ್ನು ನೋಡಿ ದಂಗಾದನು. ಮೊಗಲ್ ಸಾಮ್ರಾಜ್ಯದ ರೀತಿರಿವಾಜುಗಳನ್ನು ಇವನುಉಳಿಸಿಕೊಂಡು ಬಂದಿರುವದು ಖುಷಿಕೊಟ್ಟಿತು. ಅವರಿಬ್ಬರೂ ಬಹುಕಾಲ ಹಿಂದೂಸ್ತಾನದ ವಿಷಯಗಳನ್ನು ಕುರಿತು ಚರ್ಚಿಸಿದರು.

ಥ್ಯಾಕರೆ ಹಾವೇರಿಯಲ್ಲಿ ವಾಸ್ತವ್ಯ ಮಾಡಿದಾಗ ಖೈರಖಾನನ ತಮ್ಮ ಹುಸೇನ ಮೀಯಾನ ಮಕ್ಕಳು ಥ್ಯಾಕರೆನನ್ನು ಭೆಟ್ಟಿಯಾಗಿ, ಬಸವನಕೊಪ್ಪದ ಕೆಲವು ಹಳ್ಳಿಗಳನ್ನು ತಮಗೆ ಖೈರಖಾನನಿಂದ ಕೊಡಿಸಬೇಕೆಂದು ಪುನಃ ಕೇಳಿದರು. ಹುಸೇನಖಾನನಿಗೆ ಏಳು ಗಂಡು ಮಕ್ಕಳಿದ್ದರು. ಸವಣೂರಿನ ಹಿಂದಿನ ಚರಿತ್ರೆ ದಾಖಲೆಗಳನ್ನೆಲ್ಲ ಸರಿಯಾಗಿ ಅಭ್ಯಾಸ ಮಾಡಿದ್ದ ಥ್ಯಾಕರೆ, ಹುಸೇನಖಾನನ ಮಕ್ಕಳಿಗೆ, ಪೇಶ್ವೆಯವರು ಅಬ್ದುಲ್ ಖೈರಖಾನ ನವಾಬನಿಗೆ ಕೊಟ್ಟ ಸನದನ್ನು ತೋರಿಸಿ ''ಈ ಹಳ್ಳಿಗಳು ಖೈರಖಾನನಿಗೆ ಸೇರಿವೆ, ನಿಮಗೆ ಇದರಲ್ಲಿ ಯಾವ ಹಕ್ಕುಗಳೂ ಇಲ್ಲ'' ಎಂದು ಖಡಾಖಂಡಿತವಾಗಿ ಹೇಳಿ ಕಳಿಸಿದನು.

ಮುಂದೆ ಥ್ಯಾಕರೆ ಬಿಡುವುಮಾಡಿಕೊಂಡು ಸವಣೂರಿಗೆ ಬೇಟೆಗೆಂದು ಬಂದು, ಅಬ್ದುಲ್ ಖೈರಖಾನನಿಗೆ ತನ್ನ ಜೊತೆ ಬೇಟೆಗೆ ಬರಕೇಂದು ಆಗ್ರಹಪಡಿಸಿದನು. ಖೈರಖಾನನು ಯಲವಗಿ ಅಡವಿಯಲ್ಲಿ ಬೇಟೆಯ ವ್ಯವಸ್ಥೆ ಮಾಡಿಸಿ, ತನ್ನ ಮಕ್ಕಳಾದ ಫಯಾಜಖಾನ ಮತ್ತು ಮುನವರಖಾನನನ್ನು ಅವನ ಸಂಗಡ ಕೊಟ್ಟುಕಳಿಸಿದನು. ಆ ಅಡವಿಯ ಸಮೀಪದ ಹಳ್ಳಿಯವರು ಬೇಟೆ ಎಬ್ಬಿಸುವುದರಲ್ಲಿ ಕಲೆಕ್ಟರನಿಗೆ ಸಹಾಯ ಮಾಡಿದರು. ಕಂಟಿಯ ಹಿಂದೆ ಅಡಗಿ ಕುಳಿತಿದ್ದ ಒಂದು ಹೆಣ್ಣು ಹುಲಿ ಕಂಡಿತು. ಅದರ ಸಮೀಪಕ್ಕೆ ಅದರ ಎರಡು ಮರಿಗಳಿದ್ದವು. ಥ್ಯಾಕರೆ ಗುಂಡಿಕ್ಕಿ ಆ ಹುಲಿಯನ್ನು ಕೊಂದನು. ನಂತರ ಆ ಎರಡೂಮರಿಗಳನ್ನು ಎತ್ತಿಕೊಂಡು ಬಂದನು. ಒಂದು ಹುಲಿಮರಿ ಮತ್ತು ಸತ್ತ ಹುಲಿ ಚರ್ಮವನ್ನು ಅವನು ಧಾರವಾಡಕ್ಕೆ ಒಯ್ದನು. ಇನ್ನೊಂದು ಹುಲಿಮರಿಯನ್ನು ನವಾಬನ ರಾಜಕುಮಾರರಿಗೆ ಕೊಟ್ಟನು. ಆ ಹುಲಿಮರಿ ಸವಣೂರು ಅರಮನೆಯಲ್ಲಿ ಬೆಳೆದು ಎಷ್ಟೋ ದಿವಸ ಎಲ್ಲರನ್ನೂ ರಂಜಿಸುತ್ತಿತ್ತು.

'ಸಂತರಿಗೆ ಸಾವಿಲ್ಲ ಸದಾ ಅವರು ನಮ್ಮೊಂದಿಗಿರುತ್ತಾರೆ'. ಎಂದು ಅಬ್ದುಲ್ ಖೈರಖಾನನು ನಂಬಿದ್ದನು. ಸಾಧು ಸಂತರು ಅಂದರೆ ಅವನಿಗೆ ಭಯಭಕ್ತಿ. ಖೈರಖಾನನು ಸಂತ ಶಹಾ ಅಬ್ದುಲ್ಲಾ ಹುಸೇನಿ ಶತ್ತರಿಯವರ ದರ್ಶನವನ್ನು ಪಡೆಯಲು ೧೮೩೩ರಲ್ಲಿ ಶಹಾಪುರ, ಬೆಳಗಾವಿ, ಬಾಗಿಲಕೋಟೆ ಮಾರ್ಗವಾಗಿ ವಿಜಾಪುರವನ್ನು ತಲುಪಿದನು.

ಸಂತರ ದರ್ಶನವನ್ನು ಪಡೆದು, ಅನುಗ್ರಹೀತನಾಗಿ ವಿಜಾಪುರದಸುತ್ತಮುತ್ತಲಿನ ಪವಿತ್ರ ಸ್ಥಳಗಳನ್ನು ಸಂದರ್ಶಿಸಿ ಬಂದನು. ಖೈರಖಾನ ನವಾಬನು ವಿಜಾಪುರದಲ್ಲಿ ಧಾರ್ಮಿಕರೊಬ್ಬರ ಮನೆಯಲ್ಲಿ ತಂಗಿದ್ದನು. ಮರುದಿವಸ ಶಹಾ ಮುರ್ತಝಾ ಖಾದ್ರಿ ಜಹಾರಿ ಆಜಾದಿಯವರ ಮನೆಯಲ್ಲಿ ವಾಸ್ತವ್ಯ ಮಾಡಿದಾಗ ರಾತ್ರಿ ಕಳ್ಳರು ಬಂದರು. ಖೈರಖಾನನ ಸೇವಕರು ಕಳ್ಳರೊಡನೆ ಸಂಘರ್ಷಣೆಗೆ ಇಳಿದರು. ಕಳ್ಳರು ಓಡಿ ಹೋಗುವಾಗ ನವಾಬನ ಒಂದು ಕುದುರೆಯನ್ನು ಕದ್ದುಕೊಂಡು ಹೋದರು. ನಂತರ ನವಾಬನು ಸವಣೂರಿಗೆ ಬಂದನು.

## ರಾಜಕುಮಾರರ ವಿವಾಹ

ಅಬ್ದುಲ್ ಖೈರಖಾನ ನವಾಬನು ಸಂತರನ್ನು ಕಂಡು ಬಂದ ಒಂದೇ ವರುಷದಲ್ಲಿ ತನ್ನ ಎಲ್ಲ ಗಂಡು ಮಕ್ಕಳ ವಿವಾಹಗಳನ್ನು ನೆರವೇರಿಸಿದನು. ತನ್ನ ಎರಡನೇ ಮಗ ಅಬ್ದುಲ್ ಮುನವರಖಾನನಿಗೆ ಬಸವನಕೊಪ್ಪದ ಹುಸೇನಖಾನನ ಮಗಳನ್ನು ಸ್ವೀಕರಿಸಿದನು. ಖೈರಖಾನನ ಏಳು ಗಂಡುಮಕ್ಕಳಲ್ಲಿ ಟಿಪೂಸುಲ್ತಾನನ ತಂಗಿ ಸುಲ್ತಾನ ಬೇಗಂಳ ಹೊಟ್ಟೆಯಿಂದ ಹುಟ್ಟಿದ ನಾಮವರಖಾನನು ಅಕಾಲಿಕವಾಗಿ ಸತ್ತನು. ಮುಂದೆ ಕೆಲವೇ ದಿವಸಗಳಲ್ಲಿ ೧೮೨೪ ರಲ್ಲಿ ಕಿತ್ತೂರು ಚೆನ್ನಮ್ಮ ರಾಣಿಯೊಡನೆ ನಡೆದ ಯುದ್ಧದಲ್ಲಿ ಧಾರವಾಡದ ಕಲೆಕ್ಟರ ಥ್ಯಾಕರೆ ಸತ್ತೊಡನೆ, ಥಾಮಸ್ ಹಾರ್ವೆ ಬೇಬರ ಅನ್ನುವವನು ಮರು ವರುಷ ಧಾರವಾಡದ ಕಲೆಕ್ಟರನಾಗಿ ಅಧಿಕಾರವನ್ನು ವಹಿಸಿಕೊಂಡನು. ಇವನು ಸಂಸ್ಥಾನಗಳ ಪೊಲಿಟಿಕಲ್ ಏಜಂಟನೂ ಆಗಿದ್ದನು. ಥಾಮಸ್ ಹಾರ್ವೆ ಜಮಾಬಂದಿ ಕೆಲಸಕ್ಕೆ ಬದಿಯ ಸಿಗ್ಗಾವಿಗೆ ಬಂದಾಗ, ಖೈರಖಾನ ನವಾಬನು ಅವನನ್ನು ಭೆಟ್ಟಿಯಾದನು. ಪರಸ್ಪರರು ಅವರವರ ಡೇರೆಗಳಲ್ಲಿ ಭೆಟ್ಟಿಯಾಗಿ ಕರ್ನಾಟಕ ಸುಬಾದ ಹಲವಾರು ವಿಷಯಗಳನ್ನು ಚರ್ಚಿಸಿದರು. ನವಾಬನ ಹತ್ತಿರ ಸುಂದರವಾಗಿ ಡೇರೆಗಳನ್ನು ಅಲಂಕರಿಸುವ ಕಲೆಯಲ್ಲಿ ಪರಿಣಿತನಾದ ಉಸ್ಮಾನಖಾನ ದರೋಗಾ ಅನ್ನುವ ಅಧಿಕಾರಿಯಿದ್ದನು. ಅವನು ಥಾಮಸ್ ಹಾರ್ವೆನಿಗೆ ಡೇರೆಯನ್ನು ಅಲಂಕರಿಸಲು ತಾನು ಬಳಸಿದ ವಸ್ತುಗಳ ವಿವರಣೆ ನೀಡಿದನು. ಕಸೂತಿಕಲೆಯನ್ನು ಬಳಸಿ ಅನೇಕ ವಸ್ತುಗಳನ್ನು ಸಿದ್ಧಗೊಳಿಸಲಾಗಿತ್ತು. ಥಾಮಸ್ ಹಾರ್ವೇಗೆ ಖೈರಖಾನನ ರುಚಿ ಅಭಿರುಚಿಗಳು ಹಿಡಿಸಿದವು.

ಈ ಭೆಟ್ಟಿಯ ಸಮಯದಲ್ಲಿ ಖೈರಖಾನನು ಥಾಮಸ್ ನಿಗೆ "ನಮ್ಮ ತಂದೆ ಅಬ್ದುಲ್ ಹಕೀಮಖಾನರು ಪುಣೆಗೆ ಹೋಗುವಾಗ ನಮ್ಮ ಯುದ್ಧದ ನಗಾರಿ 'ದಲ್ ಬದಲ್' ಹಾದಿಯಲ್ಲಿ ಮಿರಜದ ಪಟವರ್ಧನರಲ್ಲಿ ಬಿಟ್ಟು ಹೋಗಿದ್ದರು. ಈಗ ಆ ಮಿರಜದ ಸಂಸ್ಥಾನಿಕರನ್ನು ಕೇಳಿದರೆ ಅವರು ಮರಳಿ ನಮ್ಮ ನಗಾರಿಯನ್ನು ಕೊಡಲು ನಿರಾಕರಿಸ ಹತ್ತಿದ್ದಾರೆ. ತಾವೇನಾದರೂ ಮಧ್ಯಸ್ತಿಕೆ ವಹಿಸಿ ಅದನ್ನು ಕೊಡಿಸಬಹುದೇ?" ಎಂದು

ಕೇಳಿದನು. ಥಾಮಸ್ ಹಾರ್ವೆ ಈ ವಿಷಯವನ್ನು ಕೇಳಿ ಸಿಟ್ಟಿಗೆದ್ದು, ಮಿರಜದ ಪಟವರ್ಧನನಿಗೆ ಒಂದು ಪತ್ರ ಬರೆದು, ಮಿರಜಿಗೆ ಅದನ್ನು ಮುಟ್ಟಿಸಲು ಹೇಳಿದನು. ಈ ಪತ್ರವನ್ನು ಥಾಮಸ್ ೧೮೩೫ರಲ್ಲಿ ಬರೆದುಕೊಟ್ಟನು. ಮುಂದೆ ಖೈರಖಾನನು ರಹಮತ್ ಖಾನ ಮಹಮ್ಮದ ಝೂಹಿ ಮತ್ತು ಅಣ್ಣಾ ಸಂಶಿ ಅನ್ನುವ ಬ್ರಾಹ್ಮಣನನ್ನು ಈ ಪತ್ರದೊಂದಿಗೆ ಮಿರಜಕ್ಕೆ ಕಳಿಸಿದನು. ಈ ಪತ್ರವನ್ನು ನೋಡಿದೊಡನೆ ಪಟವರ್ಧನನು 'ದಲ್ ಬದಲ್ ' ರಣಭೇರಿಯನ್ನು ಮೆತ್ತಗೆ ಮರಳಿ ಕೊಟ್ಟನು. ಅದನ್ನು ಖೈರಖಾನನ ವಿಶೇಷ ದೂತರು ಸವಣೂರಿಗೆ ತಂದರು.

### ಬಸವನಕೊಪ್ಪದಲ್ಲಿ ಪುನಃ ದಂಗೆ

ಯಾರದೋ ಚಿತಾವಣೆಯಿಂದ ಅಬ್ದುಲ ಖೈರಖಾನನ ತಮ್ಮನ ಮಕ್ಕಳು ಅರ್ಥಾತ್ ಖಾನ್‌ಜಾದಾ ಮನೆತನದವರು ಪುನಃ ದಂಗೆಯೆದ್ದು ಸವಣೂರಿನ ಹಳ್ಳಿಗಳ ಕಂದಾಯವನ್ನು ಒತ್ತಾಯ ಪೂರ್ವಕವಾಗಿ ವಸೂಲು ಮಾಡಿ ತಾವೇ ಬಳಸಿಕೊಳ್ಳುತ್ತಿದ್ದರು. ಅಬ್ದುಲ್ ಖೈರಖಾನನು ಈ ವಿಷಯವನ್ನು ಕಲೆಕ್ಟರ ಥಾಮಸ್ ಹಾರ್ವೇ ಬೇಬರನ ಗಮನಕ್ಕೆ ತಂದಾಗ, ಅವನು ಬಸವನಕೊಪ್ಪದ ರೈತರು, ಪಾಟೀಲ ಹಾಗೂ ಕುಲಕರ್ಣಿಯವರಿಗೆ ಒಂದು ಲಿಖಿತ ಅಜ್ಞೆಯನ್ನು ಕಳಿಸಿ "ಬಸವನಕೊಪ್ಪದ ನೀವೆಲ್ಲರೂ ನವಾಬ ಖೈರಖಾನರಿಗೆ ವಿಧೇಯರಾಗಿರಬೇಕು. ಗನ್ನೂಮೀಯಾ,ಅಮೀನಖಾನ ಹಾಗೂ ಯೂಸೂಫಖಾನರು ರೈತರ ಕಡೆಯಿಂದ ಬಲವಂತವಾಗಿ ಕಂದಾಯವನ್ನು ವಸೂಲು ಮಾಡಹತ್ತಿದ್ದಾರೆಂಬ ಸುದ್ದಿ ನಮಗೆ ಬಂದಿದೆ. ಅದುದರಿಂದ ಈ ಆಜ್ಞೆಯನ್ನು ಹೊರಡಿಸಿ, ನಾವು ಸ್ಪಷ್ಟಪಡಿಸುವುದೇನೆಂದರೆ, ಈ ಮೊದಲೇ ಹೊರಡಿಸಿದ ಆಜ್ಞೆಯಿಂದ ಗನ್ನೂಮೀಯಾ ಮತ್ತು ಅವನ ಮಕ್ಕಳು ಸವಣೂರು ಸರಕಾರದ ಕಡೆಯಿಂದ ಪೋಟಿಗೆ ಪಡೆಯಬೇಕು. ಅವರಿಗೆ ಸವಣೂರು ರಾಜ್ಯದ ಕಂದಾಯವನ್ನು ವಸೂಲು ಮಾಡುವ ಹಕ್ಕಿಲ್ಲ. ಅವರು ತಕ್ಷಣ ಜನರಿಗೆ ಹಿಂಸೆ ಕೊಡುವುದನ್ನು ನಿಲ್ಲಿಸಬೇಕು. ಈಗ ಯಾರಾದರೂ ಅವರಿಗೆ ಕಂದಾಯವನ್ನು ಕೊಟ್ಟಿದ್ದರೆ, ಅವರು ಪುನಃ ಅಬ್ದುಲ್ ಖೈರಖಾನರಿಗೆ ಕಂದಾಯವನ್ನು ಕೊಡಬೇಕು. ಈ ರೀತಿ ಎರಡು ಸಲ ಕಂದಾಯವನ್ನು ಕೊಡುವುದು ತಪ್ಪಿಸಲು ಅವರು ಇನ್ನು ಮುಂದೆ ಸರಿಯಾದ ಅಧಿಕಾರಿಗಳಿಗೆ ತಲುಪಿಸ ಬೇಕು" ಎಂದು ೧೨ ಏಪ್ರಿಲ್ ೧೮೨೮ರಂದು ತಿಳಿಸಿದನು.

ಮುಂದೆ ಧಾರವಾಡದ ಅಸಿಸ್ಟೆಂಟ್ ಕಲೆಕ್ಟರ ವಾಲ್ಟರ ಇಲೀಯಟ್ ಬೇಲಿ ಸವಣೂರಿಗೆ ಬೇಟೆಗೆಂದು ಬಂದನು. ಇವನು ಅತ್ಯಂತ ಬುದ್ಧಿವಂತನೂ ಮತ್ತು ದಯಾಳುವೂ ಆಗಿದ್ದನು. ಇವನು ಅಲ್ಲಿಗೆ ಬಂದಾಗ, ಯಲವಗಿಯಲ್ಲಿ ಎರಡು ಹುಲಿ ಗಳು ಸುತ್ತಲಿನ ಪ್ರದೇಶದ ಪ್ರಾಣಿಗಳನ್ನು ತಿಂದು ಜೀವಿಸುತ್ತಿದ್ದವು. ರೈತರದನಕರುಗಳಿಗೆ ಅವೆರಡೂ ಹುಲಿಗಳು ಅತ್ಯಂತ ಕಂಟಕ ಪ್ರಾಯವಾಗಿದ್ದವು. ನವಾಬ ಖೈರಖಾನನು ಪರಿವಾರ ಸಹಿತ ರಾತ್ರಿ ವಾಲ್ಟರನೊಂದಿಗೆ ಹೋಗಿ, ತೆಂಗಿನ ಗಿಡದ ಮೇಲೆ ಕಟ್ಟಿದ ಅಟ್ಟದಲ್ಲಿ ರಾತ್ರಿ

ಊಟ ಮಾಡಿ ವಾಲ್ಟರ ಬೇಟೆ ಆಡುವುದನ್ನು ನಿರೀಕ್ಷಿಸುತ್ತಿದ್ದನು. ಹುಲಿಯ ಬೇಟೆಗೆಂದು ಪ್ರಾಣಿಯೊಂದನ್ನು ಒಯ್ದು ಹಲಿಗೆಗಳನ್ನು ಬಾರಿಸಿ, ಕಂಟೆಯ ಹಿಂದೆ ಅಡಗಿದ್ದ ಹುಲಿಗಳನ್ನು ಕೆರಳಿಸಿ ಹೊರಗೆ ಬರುವಂತೆ ಮಾಡಲಾಯಿತು. ವಾಲ್ಟೇರ ಧೈರ್ಯದಿಂದ ಗುಂಡುಗಳನ್ನು ಹಾರಿಸಿ, ಆ ಎರಡೂ ಹುಲಿಗಳನ್ನು ಕೊಂದನು. ಆಗ ಖೈರಖಾನನು ಗಿಡದ ಮೇಲೆ ಕಟ್ಟಿದ ಅಟ್ಟದಿಂದ ಕೆಳಗಿಳಿದು ಬಂದು ಸತ್ತ ಹುಲಿಗಳನ್ನು ನೋಡಿ ಆನಂದಪಟ್ಟನು. ಆ ಎರಡೂ ಹುಲಿಗಳ ಚರ್ಮಗಳನ್ನು ನೆನಪಿಗೆಂದು ಇಂಗ್ಲೆಂಡಿಗೆ ಕಳಿಸಲು, ವಾಲ್ಟರ ಇಲಿಯಟ್‌ನು ತನ್ನೊಂದಿಗೆ ಧಾರವಾಡಕ್ಕೆ ತೆಗೆದು ಕೊಂಡು ಹೋದನು.

## ಹೊಸ ಕಲೆಕ್ಟರ ವಿಲಿಯಮ್ ನಿಸಬತ್

ಥಾಮಸ್ ಹಾರ್ವೇ ಬೇಬರ ಕಲೆಕ್ಟರನು ಧಾರವಾಡದಿಂದ ಇಂಗ್ಲಂಡಿಗೆ ಹೋದನು. ಅವನ ಸ್ಥಾನದಲ್ಲಿ ವಿಲಿಯಮ್ ನಿಸಬತ್ ಎಂಬುವವನು ಧಾರವಾಡದ ಹೊಸ ಕಲೆಕ್ಟರನಾಗಿ ಬಂದನು. ೧೮೨೭ರಲ್ಲಿ ಬಂದ ಇವನು ಎಂಟು ವರುಷ ಧಾರವಾಡದ ಕಲೆಕ್ಟರನಾಗಿ ಕಾರ್ಯವನ್ನು ನಿರ್ವಹಿಸಿದನು.

ಅಬ್ದುಲ್ ಖೈರಖಾನನ ಅಂತ್ಯಕಾಲ ಸಮೀಪಿಸಿತು. ಅವನು ನೋಡಿದ ಕೊನೆಯ ಧಾರವಾಡ ಕಲೆಕ್ಟರ ಮತ್ತು ರಾಜಪ್ರತಿನಿಧಿಯೆಂದರೆ ಇವನೇ ಕೊನೆಯವನು. ಅಬ್ದುಲ್ ಖೈರಖಾನನಿಗೆ ಕಾವ್ಯ, ಸಂಗೀತ, ನೃತ್ಯಗಳಲ್ಲಿ ತುಂಬಾ ಆಸಕ್ತಿಯಿತ್ತು. ಅರಮನೆಯಲ್ಲಿ ನಡೆಯುತ್ತಿದ್ದ ಸಂಗೀತ ಸಭೆಗಳಲ್ಲಿ, ನೃತ್ಯಗಳಲ್ಲಿ ಖೈರಖಾನನು ಭಾಗವಹಿಸುತ್ತಿದ್ದನು. ತುಂಬಾ ರಸಿಕನಿದ್ದ ಖೈರಖಾನನು ತನ್ನ ಅಂತಃಪುರದ ನೆಲಗಳಿಗೆ ವಿವಿಧ ಪ್ರಾಣಿಗಳ ತುಪ್ಪಳಗಳ ಜಮಖಾನೆ ಮಾಡಿಸಿದ್ದನು. ಅವನು ಊಟಕ್ಕೆ ರೇಶಿಮೆ ಜಮಖಾನೆಯ ಮೇಲೆ ಕುಳಿತುಕೊಳ್ಳುತ್ತಿದ್ದನು. ತನ್ನ ಸೇವೆಗಿದ್ದ ಹಕೀಮರಿಗೆ, ಸೇವಕರಿಗೆ ಅವನು ಕೈತುಂಬಾ ಸಂಬಳವನ್ನು ಕೊಡುತ್ತಿದ್ದನು. ತನ್ನ ಆಯುಷ್ಯದ ಕೊನೆಯ ಹಂತದಲ್ಲಿ ಅವನು ಐಷಾರಾಮದಲ್ಲಿ ಕಾಲ ಕಳೆದನು.

ತನ್ನ ಹಳ್ಳಿಗಳ ಕಂದಾಯದ ಬಗ್ಗೆ ಸುಧಾರಣೆ ಮಾಡಲು ರಹಿಮತ್ ಉಲ್ಲಾಖಾನ್ ಮಹಮ್ಮದ ಜೈ ಮತ್ತು ನರಸಿಂಗರಾವ್ ಅನ್ನುವವರನ್ನು ಮುಂಬೈ ಸರಕಾರದ ಕಡೆ ಕಳಿಸಿ ಕೊಟ್ಟನು. ಅವರು ಮುಂಬೈಯಿಂದ ಕಂದಾಯ ಸುಧಾರಣೆಯ ಅಭ್ಯಾಸವನ್ನು ಮಾಡಿ ಸವಣೂರಿಗೆ ಬರುವ ಪೂರ್ವದಲ್ಲಿಯೇ,ಅಬ್ದುಲ್ ಖೈರಖಾನನಿಗೆ ಜಡ್ಡಾಯಿತು. ಅವನ ಕಾಲಲ್ಲಿ ದುರ್ಮಾಂಸ ಬೆಳೆಯಿತು. ಅದರಿಂದ ನರಳುತ್ತಿದ್ದ ನವಾಬನಿಗೆ ಯಾವ ಔಷಧದಿಂದಲೂ ಗುಣವಾಗಲಿಲ್ಲ. ದರ್ಗಾದಿಂದ ಮುಜಾಹಿದರು ಬಂದು ಖೈರಖಾನನಿಗೆ ಗುಣವಾಗಲೆಂದು ಪ್ರಾರ್ಥಿಸುತ್ತಿದ್ದರು. ಹತ್ತು ಹದಿನೈದು ದಿವಸಗಳಾದರೂ ಖೈರಖಾನನಿಗೆ

ಗುಣವಾಗುವ ಲಕ್ಷಣಗಳು ಕಂಡುಬರಲಿಲ್ಲ. ಅವನು ಹೈರಾಣಾಗಿ ಮಲಗಿದ್ದನು. ಖೈರಖಾನನು ಅನೇಕ ಸಂಗೀತಗಾರರಿಗೆ ಧರ್ಮಕರ್ಮಗಳಲ್ಲಿ ನಿರತರಾದವರಿಗೆ ತಲಾ ಎರಡು ನೂರು ರೂಪಾಯಿ ರಾಜಭಂಡಾರದಿಂದ ಗೌರವಧನವನ್ನು ಕೊಡುತ್ತಿದ್ದನು. ಹಸೀನ ಖಾತೂನ ಎಂಬ ಹೆಣ್ಣು ಮಗಳು ಗೋದಿಯಿಂದ ಮಾಡಿದ ಪದಾರ್ಥಗಳಲ್ಲಿ ಮರಣಾಂತಿಕ ವಿಷವನ್ನು ಬೆರೆಸಿ, ಖೈರಖಾನನಿಗೆ ತಿನ್ನಿಸಿದಳು. ಅದರಿಂದ ಅಬ್ದುಲ್ ಖೈರಖಾನ ನವಾಬ ದಿಲೇರಜಂಗ ದಿಲೇರ ಬಹದ್ದೂರನು ೧೮೬೭ರಲ್ಲಿ ಇಹಲೋಕವನ್ನು ತ್ಯಜಿಸಿ, ಸ್ವರ್ಗಕ್ಕೆಹೋದನು. ಅವನು ತೀರಿಕೊಂಡಾಗ ಸವಣೂರಲ್ಲಿ ಕತ್ತಲೆ ಆವರಿಸಿದಂತಾಯಿತು. ಅಂತಃಪುರವು ದುಃಖತಪ್ತವಾಯಿತು. ನಾಗರಿಕರು, ಸರದಾರರು, ಅತ್ತರು. ಅವರು ಅದೆಷ್ಟು ದಿವಸ ಅತ್ತಾರು? ಮುಂದಿನಕಾರ್ಯಗಳು ಮತ್ತೆ ಪ್ರಾರಂಭವಾದವು.

### ಫಯಾಜಖಾನನಿಗೆ ಪಟ್ಟ (೧೮೬೭ ಎರಡು ತಿಂಗಳು)

ಸರದಾರರು, ಉನ್ನತ ಅಧಿಕಾರಿಗಳು, ಮುಸಲ್ಮಾನ ಧುರೀಣರು, ಪ್ರತಿಷ್ಠಿತ ಬ್ರಾಹ್ಮಣರು ಸೇರಿ, ಅಬ್ದುಲ್ ಖೈರಖಾನನು ಸತ್ತ ಮೂರನೇ ದಿವಸ ಅವನ ಜ್ಯೇಷ್ಠ ಪುತ್ರನಾದ ಅಬ್ದುಲ್ ಫಯಾಜಖಾನನು ಸಿಂಹಾಸನವನ್ನು ಏರಬೇಕೆಂದು ನಿರ್ಧರಿಸಿದರು. ಮಾರನೇ ದಿವಸ ಅಬ್ದುಲ್ ಫಯಾಜಖಾನನು ನಜರಾಣೆ ಸ್ವೀಕರಿಸಿ, ಒಂಭತ್ತನೇ ನವಾಬನಾಗಿ ಸಿಂಹಾಸನವನ್ನೇರಿದನು. ಆಗ ಅವನಿಗೆ ಇಪ್ಪತ್ತೆಂಟು ವರುಷಗಳು. ಅಬ್ದುಲ್ ಫಯಾಜಖಾನನು ಅಧಿಕಾರವನ್ನು ಸ್ವೀಕರಿಸಿ, ಸಾರ್ವಜನಿಕರು ಪಾಲ್ಗೊಳ್ಳಲು ಬರುವಂತೆ ಮುಕ್ತ ದರಬಾರವನ್ನು ನಡೆಸಿದನು. ಮುತ್ತು, ರತ್ನ, ವಜ್ರ, ವೈಢೂರ್ಯಗಳಿದ್ದ ಸರಕಾರದ ರಾಜಭಂಡಾರ ಅಥವಾ'ತೋಶಖಾನಾ'ದ ಲೆಕ್ಕಪತ್ರಗಳನ್ನು ಪರಿಶೀಲಿದನು. ಅದರಂತೆ, ಊಟದ ತಟ್ಟೆ, ಕಪ್ಪು, ಇತರ ನಿತ್ಯೋಪಯೋಗಿ ಪದಾರ್ಥಗಳನ್ನಿಟ್ಟ, 'ಜಮಾದಾರಖಾನ'ದ ಲೆಕ್ಕವನ್ನು ಕೂಡ ನೋಡಿದನು. ಅವನ ತೋಶಖಾನಾದಲ್ಲಿ, ಮೋಹರಬಂದ ಪೆಟ್ಟಿಗೆಯಲ್ಲಿ ೬೯೦ ಇಕ್ಕೇರಿ ವರಹಗಳು ಇದ್ದವು. ಇದಲ್ಲದೆ ಅದರಲ್ಲಿ ಆನೆಗೊಂದಿ ರಾಜ್ಯದ ಅಪೂರ್ವ ಬಂಗಾರದ ನಾಣ್ಯಗಳು ಇದ್ದವು ಈ ಆನೆಗೊಂದಿ ನಾಣ್ಯಗಳ ಒಂದು ಬದಿಗೆ ಆನೆಯ ಚಿತ್ರ, ಇನ್ನೊಂದು ಬದಿಗೆ ಆ ಅರಸನ (ವಿಜಯನಗರದ ಅಂತಿಮಕಾಲದ ಅರಸನಿರಬೇಕು) ಚಿತ್ರವಿತ್ತು. ಖಜಾಂಜಿ ಸರಿಯಾಗಿ ಲೆಕ್ಕವಿಟ್ಟದ್ದನ್ನು ನೋಡಿ, ನಂತರ ತನ್ನ ದಿನನಿತ್ಯದ ಕಾರ್ಯಕ್ಕೆ ಲಕ್ಷ್ಯವನ್ನು ಪೂರೈಸಿದನು.

ಅಬ್ದುಲ್ ಪೈಜಖಾನನು ಖೈರಖಾನನ ನಂತರ ಸಿಂಹಾಸನವನ್ನೇರಿದ್ದನ್ನು ಕೇಳಿದ ಧಾರವಾಡದ ಕಲೆಕ್ಟರನು ದಿವಾಣ ಕೃಷ್ಣರಾಯನನ್ನು ಕರೆಕಳಿಸಿದನು. ಕಲೆಕ್ಟರ ಜೇಸಸಬತನು ಆಗ ಕೊಲ್ಹಾಪುರದ ಸಮೀಪಕ್ಕಿರುವ ಪನ್ಹಾಳಗಡದಲ್ಲಿ ಬೇಸಿಗೆಯ ತಾಪವನ್ನು ಕಳೆದುಕೊಳ್ಳುತ್ತಿದ್ದನು. ಕೃಷ್ಣರಾಯನು ಅಲ್ಲಿಗೆ ಹೋದೊಡನೆ ಅಬ್ದುಲ್ ಫೈಜಖಾನನು

ಸಿಂಹಾಸನವನ್ನೇರುವ ಮುನ್ನ ಸರಕಾರವೂ ಅನುಮತಿಯನ್ನೇಕೆ ಪಡೆಯಲಿಲ್ಲವೆಂದು ಪ್ರಶ್ನಿಸಿದನು. ಕೃಷ್ಣರಾಯನಿಗೆ ತಮ್ಮ ಸರಕಾರವು ತಪ್ಪು ಮಾಡಿದೆ ಎಂದು ತಿಳಿಯಿತು. ಆಗ ಅವನು ಮೃದುವಾಗಿ "ಅಬ್ದುಲ್ ಖೈರಖಾನರು ಸತ್ತೊಡನೆ ಮೂರೇ ದಿವಸಗಳಲ್ಲಿ (ಫತೇಹಾ) ಫೈಜಖಾನ ಸಿಂಹಾಸನವನ್ನು ಅಲಂಕರಿಸಬೇಕಾಗಿದ್ದರಿಂದ, ನಮಗೆ ನಿಮ್ಮ ಅನುಮತಿ ಪಡೆಯಲು ಸಮಯವೇ ಇರಲಿಲ್ಲ. ಈ ಸಂಪ್ರದಾಯ ಬಂಧನವಿರದಿದ್ದರೆ, ಖಂಡಿತ ತಮ್ಮ ಅನುಮತಿ ಪಡೆಯುತ್ತಿದ್ದೆವು. ಕ್ಷಮಿಸಬೇಕು" ಎಂದು ನಿಸಬತ್ ಕಲೆಕ್ಟರನಿಗೆ ಹೇಳಿದನು. ನಿಸಬತ್ ತಲೆದೂಗಿ ನಕ್ಕು ಸುಮ್ಮನಾದನು. ನಂತರ ಕೃಷ್ಣರಾಯನು ಮರಳಿ ಸವಣೂರಿಗೆ ಬಂದನು. ನಿಸಬತ್ ಕಲೆಕ್ಟರನು ಧಾರವಾಡಕ್ಕೆ ಹೋಗಿ ಫಯಾಜ್ ಖಾನನು ಸವಣೂರಿನ ಸಿಂಹಾಸನವನ್ನೇರಿದ್ದನ್ನು ಮುಂಬೈ ಸರಕಾರಕ್ಕೆ ಬರೆದು ತಿಳಿಸಿದನು. ಮುಂಬೈ ಗವ್ಹರ್ನರರು ಈ ವಿಷಯವನ್ನು ಸರಕಾರೀ ಮಂತ್ರಿಮಂಡಲದ ಮುಂದಿಟ್ಟು, ಅಂಗೀಕಾರದ ಮುದ್ರೆಯನ್ನೊತ್ತಿದ್ದರು.

ಅಬ್ದುಲ್ ಫಯಾಜಖಾನನು ನಂತರ, ಸವಣೂರು ರಾಜ್ಯದ ಹಳ್ಳಿಗಳಿಗೆ ಹೋಗಿ ಅಲ್ಲಿಯ ಪ್ರಜೆಗಳ ಆರ್ಥಿಕಸ್ಥಿತಿಯನ್ನು ನೋಡಿ, ರೈತರಿಗೆ ಮತ್ತು ಇತರರಿಗೆ ಬೇಕಾದ ಸವಲತ್ತುಗಳನ್ನು ಅಲ್ಲಿಯೇ ಮಂಜೂರು ಮಾಡಿ ಬಂದನು. ಇದರಿಂದ ಫಯಾಜಖಾನನು ಅತ್ಯಲ್ಪ ಸಮಯದಲ್ಲಿ ತನ್ನ ಹೆಸರಿಗೆ ತಕ್ಕಂತೆ ('ಫಯಾಜ' ಅಂದರೆ 'ಉದಾರಿ') ವರ್ತಿಸಿದನು. ಆದರೆ ಅವನ ಆಯುಷ್ಯದ ಬಟ್ಟಲು ತುಂಬಿದ್ದರಿಂದ, ಯೌವ್ವನದ ಯಾವ ಸುಖಗಳನ್ನೂ ಅನುಭವಿಸದೆ, ತನ್ನ ಇಪ್ಪತ್ತೆಂಟನೇ ವಯಸ್ಸಿನಲ್ಲಿ ಕಣ್ಣು ಮುಚ್ಚಿದನು. ಫಯಾಜಖಾನನು ಕೇವಲ ಎರಡು ತಿಂಗಳು ಸಿಂಹಾಸನದ ಮೇಲೆ ಇದ್ದನು. ಅಬ್ದುಲ್ ಫಯಾಜಖಾನನ ಗೋರಿ ಸವಣೂರು ಖಾದರಬಾಗದಲ್ಲಿ ತಾತ ಅಬ್ದುಲ್ ಹಕೀಮಖಾನನ ಗೋರಿಯ ಬಳಿಯೆ ಇದೆ.

ಅಬ್ದುಲ್ ಫಯಾಜಖಾನನು ಸತ್ತೊಡನೆ ಸಿಂಹಾಸನದ ಬಗ್ಗೆ ಮತ್ತೆ ವಾದವಿವಾದ ಗಳೆದ್ದವು. ಅಬ್ದುಲ್ ಫಯಾಜಖಾನನಿಗೆ ಗಂಡು ಸಂತಾನವಿಲ್ಲದ್ದೇ ಈ ಅವಾಂತರಕ್ಕೆ ಕಾರಣವಾಯಿತು.

ಸಿಂಹಾಸನಕ್ಕಾಗಿ ಎರಡನೇ ತಮ್ಮ ಅಬ್ದುಲ್ ಮುನವರಖಾನ ಮತ್ತು ಮೂರನೇ ತಮ್ಮ ಅಬ್ದುಲ್ ದಿಲೇರಖಾನರ ಮಧ್ಯೆ ವ್ಯಾಜ್ಯವೆದ್ದಿತು. ಸಿಂಹಾಸನಕ್ಕೆ ಯಾರು ಯೋಗ್ಯರು ಎಂದು ನಡೆದ ವಾಗ್ವಿವಾದದಲ್ಲಿ ಎರಡು ಪಕ್ಷಗಳ ಅಭಿಮಾನಿಗಳು ಬಡಿದಾಡಹತ್ತಿದರು. ಈ ವ್ಯಾಜ್ಯದಲ್ಲಿ ಮುನವರಖಾನ ಮತ್ತು ದಿಲೇರಖಾನರು, ತಾವು ರಕ್ತ ಸಂಬಂಧಿಗಳೆಂಬುದನ್ನು ಮರೆತು ದ್ವೇಷವನ್ನು ಕಾರಹತ್ತಿದರು. ಈ ದ್ವೇಷದ ಜ್ವಾಲೆಗಳು ಪಸರಿಸಹತ್ತಿದೊಡನೆ, ಅಬ್ದುಲ್ ದಿಲೇರಖಾನನು ಬೇಸತ್ತು ಸವಣೂರನ್ನು ತ್ಯಜಿಸಿ ಫಕೀರನಂದೀಹಳ್ಳಿಗೆ ಇರಲು ಹೋದನು.

ಸವಣೂರು ಗಾದೆಯ ಮೇಲೆ ಯಾರು ವಿರಾಜಮಾನರಾಗಬೇಕು ಅನ್ನುವ ವಿಷಯವು ಬೇಗನೆ ಇತ್ಯರ್ಥವಾಗಿರಲಿಲ್ಲ. ಅಷ್ಟರಲ್ಲಿ ಧಾರವಾಡದ ಸಬ್ ಕಲ್ಟೆರ್ ವಾಲ್ಟರ್ ಇಲೀಯಟ್ ಕಂದಾಯದ ಕೆಲಸಕ್ಕೆಂದು ಸಿಗ್ಗಾವಿಯಲ್ಲಿ ವಾಸ್ತವ್ಯ ಮಾಡಿದ್ದನು. ಇದನ್ನು ಕೇಳಿದ ಅಬ್ದುಲ್ ಮುನವರಖಾನನು ಮಿ॥ ವಾಲ್ಟರನ ಭೆಟ್ಟಿಗೆ ಹೋದನು. ಮುನವರ ಖಾನನಿಗೂ ವಾಲ್ಟರನಿಗೂ ಮಧುರ ಸಂಬಂಧಗಳಿದ್ದವು. ಮುನವರಖಾನನು ವಾಲ್ಟರನನ್ನು ಕಕ್ಕನೆಂದೇ ಕರೆಯುತ್ತಿದ್ದನು. ಅಷ್ಟು ಅವನೊಡನೆ ಮುನವರಖಾನನ ಸಲಿಗೆ ಇತ್ತು. ತನ್ನ ಮತ್ತು ತನ್ನ ತಮ್ಮನ ಮಧ್ಯದ ಭಿನ್ನಾಭಿಪ್ರಾಯಗಳು ವಿಕೋಪಕ್ಕೆ ಹೋಗಿ, ಸರಕಾರದ ಮೇಲೆ ವಿಷಮ ಪರಿಣಾಮವನ್ನು ಬೀರಬಾರದೆಂದು, ಮುನವರಖಾನನು ವಾಲ್ಟರನ ಜೊತೆ ಮೂರುತಿಂಗಳು ಸಿಗ್ಗಾವಿಯಲ್ಲಿ ನಿಂತು ಅವನ ಕಂದಾಯದ ಖಾತೆಯಲ್ಲಿ ನೆರವಾದನು. ಈ ಹೊತ್ತಿಗೆ ಧಾರವಾಡದ ಕಲೆಕ್ಟರ್ ವಿಲಿಯಂ ನಿಸ್‌ಬಲಿತ್ತನು ಮುನವರಖಾನನನ್ನು ಪಟ್ಟದ ಮೇಲೆ ಕೂಡಿಸಲು ಕಳುಹಿಸಿದ್ದ ಶಿಫಾರಸ್ಸನ್ನು ಮುಂಬೈ ಮಂತ್ರಿಮಂಡಲವು ಒಪ್ಪಿದ್ದನ್ನು ಗವ್ಹರ್ನರ ತಿಳಿಸಿದನು.

ಧಾರವಾಡದ ಕಲೆಕ್ಟರನು ಸರಕಾರೀ ಕೆಲಸಕ್ಕೆಂದು ಹುಲಗೂರಿಗೆ ಬಂದು ಅಬ್ದುಲ್ ಮುನವರಖಾನನನ್ನು ಅಲ್ಲಿಗೆ ಕರೆಸಿಕೊಂಡನು. ಇದೇ ಸಮಯಕ್ಕೆ ಫಕೀರನಂದೀ ಹಳ್ಳಿಯಿಂದ ಅಬ್ದುಲ್ ದಿಲೇರಖಾನನು ಹುಲಗೂರಿಗೆ ಬಂದು ವಿಲಿಯಮ್ ನಿಸ್‌ಬತ್ ಭೆಟ್ಟಿಯಾದನು. ಆಗ ವಿಲಿಯಮ್ ನಿಸ್ಸಬತ್‌ನು ದಿಲೇರಖಾನನಿಗೆ "ಅಬ್ದುಲ್ ಫಯಾಜಖಾನನು ಗಂಡು ಸಂತಾವಿಲ್ಲದೆ ಮರಣ ಹೊಂದಿದ್ದಕ್ಕೆ, ಸವಣೂರಿನ ಸಿಂಹಾಸನಕ್ಕೆ ನ್ಯಾಯವಾಗಿ ಅವನ ತಮ್ಮ ಅಬ್ದುಲ್ ಮುನವರಖಾನನು ಬರಬೇಕು. ನಾನು ಮಾಡಿದ ಶಿಫಾರಸ್ಸನ್ನು ಮುಂಬೈ ಗವ್ಹರ್‌ನರರು ಒಪ್ಪಿದ್ದಾರೆ. ಅದಕ್ಕೆ ಅವರಿಗೆ ನಾನು ಸಿಂಹಾಸನವನ್ನೇರಲು ಅನುಮತಿಯನ್ನು ಕೊಟ್ಟಿದ್ದೇನೆ" ಎಂದು ಹೇಳಿಕಳಿಸಿದನು. ಸರಕಾರದ ಈ ನಿರ್ಣಯವನ್ನು ಕೇಳಿ ಅಬ್ದುಲ್ ದಿಲೇರಖಾನನು ನಿರಾಶನಾಗಿ ಮರಳಿ ಸವಣೂರು ಮಾರ್ಗವಾಗಿ ನಂದೀಹಳ್ಳಿಗೆ ಹೋದನು. ವಾಲ್ಟರ ಇಲಿಯಟ್ ತನ್ನ ಕೆಲಸಕ್ಕೆಂದು ಮುಂದೆ ಶಿಗ್ಗಾವಿಗೆ ತೆರಳಿದನು. ಅಬ್ದುಲ್ ಮುನವರಖಾನನು ಸರಕಾರಿ ಆಜ್ಞೆಯನ್ನು ಮತ್ತು ಕಲೆಕ್ಟರ ನಿಸಬತ್ ಸಾಹೇಬನ ಪತ್ರವನ್ನು ತೆಗೆದುಕೊಂಡು ಸಂತೋಷದಿಂದ ಸವಣೂರಿಗೆ ಬಂದನು. ಪಟ್ಟಾಭಿಷೇಕದ ಸಿದ್ಧತೆಗಳನ್ನು ನಡೆಸಿದನು.

## ಅಬ್ದುಲ್ ಮುನವರಖಾನ ನವಾಬ (೧೮೨೮- ೧೮೩೪)

ಅರಸು ಮನೆತನದ ಖಾಂಜಾದೆಯವರು, ಹಿರಿಯರು, ಪ್ರತಿಷ್ಠಿತರು ನವಾಬ ಮುನವರಖಾನನಿಗೆ ಪಟ್ಟಾಭಿಷೇಕದ ಸಂದರ್ಭದಲ್ಲಿ ನಜರಾಣೆ ಕೊಟ್ಟರು. ಅದನ್ನು ಸ್ವೀಕರಿಸಿ ಮುನವರಖಾನನು ಹತ್ತನೇ ನವಾಬನೆಂದು ಸವಣೂರು ಗಾದೆಯನ್ನು

ಅಲಂಕರಿಸಿದನು. ಸವಣೂರು ರಾಜ್ಯದ ಕಂದಾಯವನ್ನು ಯಾರು ವಸೂಲು ಮಾಡಬೇಕು ಎಂದು ಮುಂಬೈ ಸರಕಾರದೊಡನೆ ಸಮಾಲೋಚಿಸಲು ಖೈರಖಾನನು ಜೀವಿಸಿರುವಾಗಲೇ ಮುಂಬೈಗೆ ಹೋಗಿದ್ದ ಅಬ್ದುಲ್ ಫೈರೋಜಖಾನ ಖಾಂಜಾದೆ, ನರಸಿಂಗರಾವ್ ಮತ್ತು ರಹಮತ್ ಖಾನ ಎಂಬ ಮೂವರು ಮರಳಿ ಬಂದರು. ಇವರು ತಮ್ಮ ಕಾರ್ಯದಲ್ಲಿ ಯಶಸ್ವಿಯಾಗಿ ಬಂದಿದ್ದರಿಂದ, ಅಬ್ದುಲ್ ಮುನವರಖಾನನು ಇವರಿಗೆ ಸರಕಾರೀ ಸೇವೆಯಲ್ಲಿ ಕಾಯಂಗೊಳಿಸಿದನು.

ಸವಣೂರು ನವಾಬರಿಗೆ ಪಿಂಚಣಿ ಕೊಡುವದೆಂದು ನಿರ್ಧಾರವಾದಾಗ, ಪಿಂಚಣಿಯನ್ನು ಪ್ರತಿ ತಿಂಗಳೂ ಕೊಡುವದು ತೊಂದರೆಯಾಗುವದೆಂದು ಇಪ್ಪತ್ತೈದು ಹಳ್ಳಿಗಳನ್ನು ಖೈರಖಾನನು ಇರುವಾಗ ಒಪ್ಪಿಸಲಾಗಿತ್ತೇ ವಿನಃ, ಈ ನವಾಬರನ್ನು ಇತರ ಜಹಗೀರದಾರರಂತೆ ಈ ಹಳ್ಳಿಗಳಿಗೆ ಒಡೆಯರನ್ನಾಗಿ ನಿಯಮಿಸಿರಲಿಲ್ಲ. ಈ ಎಲ್ಲ ಹಳ್ಳಿಗಳ ಕಂದಾಯವನ್ನು ಬ್ರಿಟಿಶರೇ ವಸೂಲು ಮಾಡುತ್ತಿದ್ದರು. ಹಾಗೆಯೇ ಸವಣೂರು ರಾಜ್ಯಕ್ಕೆ ಸೇರಿದ್ದವೆಂದು ಗುರುತಿಸಲಾಗಿದ್ದ ಹಳ್ಳಿಗಳಲ್ಲಿ ಪೋಲೀಸ್ ವ್ಯವಸ್ಥೆಯನ್ನು ಬ್ರಿಟಿಶರು ನಿಯಮಿಸಿದ ಕೊತವಾಲನು ನೋಡಿಕೊಳ್ಳುತ್ತಿದ್ದನು. ಹೀಗಾಗಿ ನವಾಬನು ಯಾವ ಹೊಣೆಗಾರಿಕೆಯನ್ನೂ ಪೂರೈಸುತ್ತಿರಲಿಲ್ಲ. ಬ್ರಿಟಿಶರು ಸಿದ್ಧಪಡಿಸಿದ ಸವಣೂರು ರಾಜ್ಯದ ಪ್ರತಿಷ್ಠಿತರ ಹೆಸರಿನಲ್ಲಿ ನವಾಬನ ಹೆಸರು ಮೊದಲೇ ಇದ್ದರೂ, ಇವನನ್ನು ಕೊತವಾಲನ ನ್ಯಾಯಧಿಕಾರದಿಂದ ಹೊರಗಿಡಲಾಗಿತ್ತು. ಹೆಚ್ಚಿನ ಫೌಜದಾರೀ ಅಧಿಕಾರಿಗಳು ಮತ್ತು ಮೊಕದ್ದಮೆಗಳ ಪುನರ್ವಿಚಾರಣಾ ಅಧಿಕಾರಗಳು ಸದರ್ನ ಮರಾಠಾ ದೇಶದ ರಾಜಪ್ರತಿನಿಧಿಗೆ ಇರುತ್ತಿದ್ದವು. ಅದರಲ್ಲಿ ನವಾಬನದು ಯಾವ ಪಾತ್ರವೂ ಇರುತ್ತಿರಲಿಲ್ಲ.

ಅಬ್ದುಲ್ ಖೈರಖಾನನು ತೀರಿಕೊಂಡೊಡನೆ ಪಿಂಚಣಿಯನ್ನು ಸರಕಾರವು ನಿಲ್ಲಿಸಿಬಿಟ್ಟಿತ್ತು. ಖೈರಖಾನನ ನಂತರ ಎರಡು ತಿಂಗಳ ಕಾಲ ಸವಣೂರು ಸಿಂಹಾಸವನ್ನೇರಿದ ಅಬ್ದುಲ್ ಫೆಯಾಜಖಾನನಿಗೂ ಪಿಂಚಣಿ ಸಿಕ್ಕಿರಲಿಲ್ಲ. ನಂತರ ಅಧಿಕಾರದ ಗದ್ದುಗೆಯನ್ನೇರಿದ ಅಬ್ದುಲ್ ಮುನವರಖಾನನಿಗೂ ಈ ಪಿಂಚಣಿ ಸರಿಯಾಗಿ ದೊರೆತಂತೆ ಕಾಣುವದಿಲ್ಲ. ಅವನಿಗೆ ಈ ಮೊದಲೇ ಗುರುತಿಸಿದ್ದ ಇಪ್ಪತ್ತೈದೂ ಹಳ್ಳಿಗಳ ಕಂದಾಯ ವಸೂಲಿಯ ಅಧಿಕಾರವನ್ನು ಪೂರ್ಣವಾಗಿ ಬಿಟ್ಟುಕೊಡಲಾಯಿತು. ಅದರಿಂದ ೧೮೩೨ರಲ್ಲಿ ಅಬ್ದುಲ್ ಮುನವರಖಾನನಿಗೆ ವರ್ಷಕ್ಕೆ ೧೫೦೦೦ ರೂಪಾಯಿಗಳಿಂದ ೨೦೦೦೦ ರೂಪಾಯಿಗಳ ಕಂದಾಯದ ಉತ್ಪನ್ನವು ಬರಹತ್ತಿತು. ಇದರ ಜೊತೆ ಸವಣೂರಿನ ಹಳ್ಳಿಗಳಿಂದ ಹಾದುಹೋಗುವವರ ಮೇಲೆ ಹೇರುತ್ತಿದ್ದ ತೆರಿಗೆಗಳು ವರ್ಷಕ್ಕೆ ಏಳುನೂರು ರೂಪಾಯಿ ಬರುತ್ತಿದ್ದವು. ಈಗ ಸವಣೂರು ನವಾಬನು ನಿಜವಾಗಿ ತಮ್ಮ ಜಹಗೀರ ಹಳ್ಳಿಗಳ ಒಡೆಯನಾದನು.

ವಿಜಾಪುರದ ಶ್ರೇಷ್ಠ ಸಂತನೆಂದು ಪ್ರತೀತ ಪಡೆದಿದ್ದ ಹಜರತ್ ಸೈಯದ್ ಅಬ್ದುಲ್ಲಾ ಹುಸೇನಿ ಛತ್ತರ ಮತ್ತು ಖಾದ್ರಿ ಅವರು ಸವಣೂರಿಗೆ ದಯಾಮಾಡಿಸಿದರು. ಆಗ ನವಾಬ ಅಬ್ದುಲ್ ಮುನವರಖಾನನು ಅತ್ಯಂತ ಗೌರವದಿಂದ, ಭಯಭಕ್ತಿಗಳಿಂದ ಅವರನ್ನು ಸ್ವಾಗತಿಸಿ ಕೆಲ ದಿವಸಗಳವರೆಗೆ ಸವಣೂರಲ್ಲಿ ನಿಲ್ಲಿಸಿಕೊಂಡನು. ಅವರನ್ನು ಬೀಳ್ಕೊಡುವಾಗ ಅವರಿಗೆ ಮುನವರಖಾನನು ಐದುನೂರು ರೂಪಾಯಿ ಕಾಣಿಕೆಯನ್ನು ಕೊಟ್ಟನು.

ಅಬ್ದುಲ್ ಮುನವರಖಾನನ ತಮ್ಮ ಅಬ್ದುಲ್ ದಿಲೇರಖಾನನು ಬೇಸತ್ತು ಫಕೀರನಂದೀ ಹಳ್ಳಿಯಿಂದ ತೊಂಡೂರಿಗೆ ಬಂದನು. ತೊಂಡೂರಲ್ಲಿ ಸರಕಾರವು ಹಚ್ಚಿದ್ದ ಮಾವಿನ ಮರಗಳ ಹಣ್ಣುಗಳನ್ನು ತಿನ್ನುವ ಹಕ್ಕನ್ನು ತಂದೆ ಅಬ್ದುಲ್ ಖೈರಖಾನನು ಇವನಿಗೆ ಕೊಟ್ಟಿದ್ದನು. ಇದರಿಂದ ದಿಲೇರಖಾನನು ಮಾವಿನ ಹಣ್ಣಿನ ಸುಗ್ಗಿಯಲ್ಲಿ ತೊಂಡೂರಿಗೆ ಬಂದು ಕೆಲಕಾಲ ಅಲ್ಲಿರುತ್ತಿದ್ದನು. ಈ ಸಲ ದಿಲೇರಖಾನನಿಗೆ ತೊಂಡೂರು ಪ್ರಜೆಗಳು ಅಭೂತಪೂರ್ವ ಸ್ವಾಗತವನ್ನು ನೀಡಿದರು. ದಿನದಿನಕ್ಕೂ ಅವನು ಜನರನ್ನು ಆಕರ್ಷಿಸಹತ್ತಿದನು. ಹೀಗೆ ಅವನ ಹಿಂದೆ ಜನರು ಹೋಗವದನ್ನು ಸಹಿಸದ ಅಬ್ದುಲ್ ಮುನವರಖಾನನು ಹೇಗಾದರೂ ಮಾಡಿ ಅವನನ್ನು ತೊಂಡೂರನ್ನು ಬಿಟ್ಟು ಹೊರಗೆ ಹೋಗುವಂತೆ ಮಾಡಬೇಕೆನಿಸಿತು. ದಿಲೇರಖಾನನು ಇದೇ ಶಕ್ತಿಯನ್ನು ಬೆಳೆಸಿಕೊಂಡು, ಮುಂದೆ ಅದೆಲ್ಲಿ ಸಿಂಹಾಸನಕ್ಕೆ ಕೈಹಾಕುವನೋ ಅನ್ನುವ ಭೀತಿ ಅವನನ್ನು ಆವರಿಸಿತು. ಕೂಡಲೇ ಮುನವರಖಾನ ನವಾಬನು ಕಲೆಕ್ಟರ ನಿಸಬತ್‌ನ ಸಹಾಯವನ್ನು ಕೋರಿದನು. ಕಲೆಕ್ಟರನು ಕೂಡ ಗವ್ಹನರನನ್ನು ಸಮಾಲೋಚಿಸದೆ ನವಾಬನಿಗೆ ಉತ್ತರವನ್ನು ಕೊಡುವ ಸ್ಥಿತಿಯಲ್ಲಿ ಇರಲಿಲ್ಲ. ಅವನು ತಕ್ಷಣ ಗವ್ಹರ್ನರರಿಗೆ ಬರೆದನು. ಅವರು ನಂತರ ಮಂತ್ರಿಮಂಡಳದ ಅನುಮತಿಯಿಂದ ಕಲೆಕ್ಟರ್ ವಿಲಿಯಂ ನಿಸಬತನಿಗೆ ಒಂದು ಪತ್ರ ಬರೆದು ತಿಳಿಸಿದರು:

"ಅಬ್ದುಲ್ ಖೈರಖಾನರು ಜೀವಿಸಿರುವಾಗ ತೊಂಡೂರು ಗ್ರಾಮದ ಮಾವಿನ ಹಣ್ಣುಗಳನ್ನು ಉಪಭೋಗಿಸುವ ಹಕ್ಕನ್ನು ಅಬ್ದುಲ್ ದಿಲೇರಖಾನನಿಗೆ ಕೊಟ್ಟಿದ್ದಾರೆ. ಆದರೆ ಖೈರಖಾನರು ಅವನಿಗೆ ತೊಂಡೂರು ಗ್ರಾಮವನ್ನು ಕೊಡಲಿಲ್ಲ. ರಾಜ್ಯದ ವೆಚ್ಚವನ್ನು ತೂಗಿಸಿಕೊಂಡು ಹೋಗಲು ಕಷ್ಟವಾಗುತ್ತಿರುವುದರಿಂದ ಹಾಗೂ ಈ ಇಪ್ಪತ್ತೈದು ಹಳ್ಳಿಗಳನ್ನು ಮುನವರಖಾನನಿಗೆ ಕೊಡಲ್ಪಟ್ಟಿರುವುದರಿಂದ, ಅಬ್ದುಲ್ ದಿಲೇರಖಾನನು ಮಾವಿನ ಹಣ್ಣುಗಳನ್ನು ಉಪಭೋಗಿಸುವ ಹಕ್ಕನ್ನು ಈಗ ಕಳೆದುಕೊಂಡಿದ್ದಾನೆ. ಪೂರ್ಣ ಹಕ್ಕು ನವಾಬ ಮುನವರಖಾನನಿಗಿದೆ" ಎಂದು ತಿಳಿಸಿದನು. ವಿಲಿಯಂ ನಿಸಬತನು ಈ ರೀತಿಯ ಒಂದು ಆಜ್ಞೆಯನ್ನು ತೆಗೆದು, ಬಂಕಾಪುರ ಮಾಮಲೇದಾರನ ಮುಖಾಂತರ ಸಂಬಂಧಿಸಿದವರಿಗೆಲ್ಲ ತಿಳಿಯಪಡಿಸಿದನು. ಈ ಆಜ್ಞೆಯನ್ನು ನೋಡಿ ದಿಲೇರಖಾನನು ತೊಂಡೂರಿನಿಂದ ನಿರ್ಗಮಿಸಿದನು. ಇದರಿಂದ ಮುನವರಖಾನನ ಹಾದಿ ಸುಗಮವಾಯಿತು.

## ಗವ್ಹರ್ನರ ಜಾನ್ ಮಾಲ್ಕಂನ ಭೆಟ್ಟಿ

ಮುಂಬೈ ನಡುಗಡ್ಡೆಯ ಗವ್ಹರ್ನರ ಆಗಿದ್ದ ಜಾನ್ ಮಾಲ್ಕಂನು ಸಂತೋಷಾರ್ಥವಾಗಿ ರಾಜ್ಯದಲ್ಲಿ ಪ್ರವಾಸವನ್ನು ಮಾಡುತ್ತ ವಿಜಾಪುರದ ಸರದಾರ , ದೇಸಾಯಿ, ದೇಶಪಾಂಡೆ ಅವರನ್ನು ಭೆಟ್ಟಿಯಾದನು. ಅವನ ಜೊತೆ ಧಾರವಾಡದ ಕಲೆಕ್ಟರ್ ವಿಲಿಯಂ ನಿಸಬತ್ ಮತ್ತು ಅಸಿಸ್ಟಂಟ ಕಲೆಕ್ಟರ ವಾಲ್ಟೇರ್ ಇಲೀಯಟ ಇದ್ದರು. ಕಲೆಕ್ಟರನು ಅಬ್ದುಲ್ ಮುನವರಖಾನ ನವಾಬನಿಗೆ ಗವರ್ನರನನ್ನು ಭೆಟ್ಟಿಯಾಗಬೇಕೆಂದು ಸೂಚಿಸಿದನು.

ಇದೇ ಸಂದರ್ಭವನ್ನು ಬಳಸಿಕೊಂಡು ನವಾಬ ಮುನವರಖಾನನ ತಮ್ಮ ದಿಲೇರಖಾನನು ನವಾಬ ಮುನವರಖಾನನಿಗಿಂತ ಮೊದಲೇ ಹೋಗಿ ವಾಲ್ಟೇರನ ಮುಖಾಂತರ ಗವ್ಹರ್ನರ ಮಾಲ್ಕಂನನ್ನು ಭೆಟ್ಟಿಯಾಗಿ, ನವಾಬನಿಂದ ತನಗೆ ದೊರೆಯುವ ಪೋಟಿಗೆ ತನ್ನ ವೆಚ್ಚಕ್ಕೆ ಸಾಲದೆಂದೂ, ತನಗೆ ರಾಜ್ಯದ ಸಿಂಹಾಸನವನ್ನು ಕೊಡಿಸಬೇಕೆಂದೂ ಪುನಃ ಕೇಳಿಕೊಂಡನು. ಗವ್ಹರ್ನರ ಮಾಲ್ಕಂನು ದಿಲೇರಖಾನನು ಹೇಳಿದ್ದನ್ನೆಲ್ಲ ಶಾಂತವಾಗಿ ಕೇಳಿಕೊಂಡು "ಈ ವಿಷಯದಲ್ಲಿ ಕಲೆಕ್ಟರ್ ವಿಲಿಯಂ ನಿಸಬತ್ ಕೊಟ್ಟಿದ್ದೇ ಅಂತಿಮ ನಿರ್ಣಯ" ಎಂದು ವಿನಿಯದಿಂದ ಹೇಳಿದನು. ಇದರಿಂದ ದಿಲೇರಖಾನನಿಗೆ ನಿರಾಶೆಯಾಯಿತು.ಗವ್ಹರ್ನರ ಮಾಲ್ಕಂನು ಅಲ್ಲಿಂದ ಕಲಾದಗಿ ಗೋಕಾಕ ಮಾರ್ಗವಾಗಿ ಬೆಳಗಾವಿಗೆ ಬಂದನು. ಅಬ್ದುಲ್ ಮುನವರಖಾನ ನವಾಬನು ಬೆಳಗಾವಿಗೆ ಹೋಗಿ ಜಾನ್ ಮಾಲ್ಕಂನನ್ನು ಭೆಟ್ಟಿಯಾದನು. ಇವರಿಬ್ಬರ ಭೆಟ್ಟಿಗೆ ನವಾಬ ಮುನವರಖಾನನ ಕಡೆಯವರು ವೈಭವದ ವ್ಯವಸ್ಥೆ ಮಾಡಿದ್ದರು. ಗವ್ಹರ್ನರ ಮಾಲ್ಕಂ ಮತ್ತು ಕಲೆಕ್ಟರ ನಿಸಬತರು ನವಾಬ ಮುನವರಖಾನನ ಡೇರೆಗೆ ಬಂದರು. ಮರುದಿವಸ ಚಿಂತಾಮಣರಾವ್ ಪಟವರ್ಧನ, ಅಪ್ಪಾಸಾಹೇಬ ಪಟವರ್ಧನ, ಸರ್ಜೇರಾವ್, ವೆಂಕಟ ರಾವ್ ಘಾಟಗೆ ಮೊದಲಾದ ಮರಾಠಾ ಜಹಗೀರದಾರರು ಗವ್ಹರ್ನರನನ್ನು ಕಂಡು ಮಾತನಾಡಿದರು. ಮುಂದೆ ಮಾಲ್ಕಂನು ನಿಪ್ಪಾಣಿ, ಕೊಲ್ಹಾಪುರ, ಸಾಂಗ್ಲಿ, ಸಾತಾರಾ ಮುಖಾಂತರ ಪುಣೆಗೆ ಹೋದನು. ಗವ್ಹರ್ನರನ ಜೊತೆಗೆ ಅಬ್ದುಲ್ ದಿಲೇರಖಾನ ಕೂಡ ಪುಣೆಗೆ ಹೋದನು. ಅಬ್ದುಲ್ ಮುನವರಖಾನ ನವಾಬನು ಮಾತ್ರ ಮರಳಿ ಸವಣೂರಿಗೆ ಬಂದನು. ಅವನು ಸವಣೂರಿಗೆ ಬಂದ ಮೇಲೆ ಗವ್ಹರ್ನರ ಮಾಲ್ಕಂನಿಂದ ನವಾಬನಿಗೆ ಒಂದು ಪತ್ರವು ಬಂದಿತು.

"ಇನ್ನು ಮುಂದೆ ನೀವು ನಿಮ್ಮ ರಾಜ್ಯದ ವಿಷಯವನ್ನು ಧಾರವಾಡದ ಕಲೆಕ್ಟರ ಮಿ॥ ಡಬ್ಲ್ಯೂ ನಿಸಬತರವರ ಜೊತೆ ಚರ್ಚಿಸಿ, ಪರಿಹಾರವನ್ನು ಹುಡುಕಿಕೊಳ್ಳಬೇಕು. ಮಿ॥ ನಿಸಬತರು ಕಲೆಕ್ಟರ್ ಅಲ್ಲದೆ, ನಿಮ್ಮ ರಾಜ್ಯದ ಪೊಲಿಟಿಕಲ್ ಎಜಂಟರೂ ಇರುವರು. ನೀವು ನಿಮ್ಮ ಭೆಟ್ಟಿಯ ಕಾಲಕ್ಕೆ ನಿಮ್ಮ ಮತ್ತು ನಿಮ್ಮ ಕಕ್ಕಂದಿರು ಮತ್ತು ಸಹೋದರರ ಮಧ್ಯೆ ಒಳ್ಳೆಯ ಸಂಬಂಧಗಳು ಇಲ್ಲವೆಂದು ಪ್ರಸ್ತಾಪಿಸಿದ್ದಿರಿ. ಈ ವಿಷಯವನ್ನು ಕೇಳಿ

ನಮಗೆ ಅತೀವ ದುಃಖವಾಗಿದೆ. ನಾವು ನಿಮಗೆ ಸಲಹೆ ಮಾಡುವುದೆಂದರೆ, ನೀವು ಎಲ್ಲೆಲ್ಲಿ ಸಾಧ್ಯವಿದೆಯೋ ಅಲ್ಲಲ್ಲಿ ನಿಮ್ಮ ವೆಚ್ಚವನ್ನು ತಗ್ಗಿಸಿಕೊಳ್ಳಬೇಕು. ಇದರಿಂದ ನೀವು ನಿಮ್ಮ ಸಮಸ್ಯೆಗಳಿಗೆ ಪರಿಹಾರವನ್ನು ಕಂಡುಹಿಡಿಯಲು ಅನುಕೂಲವಾಗುವದು.

ನೀವು ನಿಮ್ಮ ತಮ್ಮ ಅಬ್ದುಲ್ ದಿಲೇರಖಾನನು ಪುಣೆಗೆ ಬಂದ ವಿಷಯವನ್ನು ಬರೆದಿದ್ದೀರಿ. ನಿಮಗೆ ಯಾರೋ ನಾವು ಅವನಿಗೆ ಸಹಾಯ ಮಾಡುವೆವೆಂಬ ತಪ್ಪು ಗ್ರಹಿಕೆ ಮಾಡಿಕೊಟ್ಟಿದ್ದಾರೆ. ನಿಮ್ಮ ವಿರುದ್ಧ ಅವನೇನಾದರೂ ದಂಗೆ ಏಳುವ ಲಕ್ಷಣಗಳು ಕಂಡರೆ, ನಾವು ಖಂಡಿತ ಅವನಿಗೆ ಸಹಾಯ ಮಾಡುವದಿಲ್ಲ. ನೀವು ಸುಖದಿಂದ ಇರಬೇಕೆಂದು ನಮ್ಮಿಚ್ಛೆ - ೧೮೩೩ನೇ ಇಸ್ವಿ".

ವಿಲಿಯಂ ನಿಸಬತನು ದೇಹಾರೋಗ್ಯವನ್ನು ಸುಧಾರಿಸಿಕೊಳ್ಳಲು ಕೇಫ ಆಫ್ ಗುಡ್ ಹೋಪಕ್ಕೆ ರಜೆಯ ಮೇಲೆ ಹೋದನು. ಅವನ ಸ್ಥಾನದಲ್ಲಿ ಹೆಂಡರಸನ್ ಅನ್ನುವವನು ತಾತ್ಕಾಲಿಕವಾಗಿ ಕಲೆಕ್ಟರನಾಗಿ ಧಾರವಾಡಕ್ಕೆ ಬಂದನು. ಉಳಿದೆಲ್ಲ ಜಹಗೀರದಾರರು ಹೊಸ ಕಲೆಕ್ಟರನಿಗೆ ಪತ್ರಗಳನ್ನು ಬರೆದಿದ್ದರೂ ರಾಜಮನೆತನದ ಖಾಂಜಾದಾ ಜನರು ತಮಗೆ ಬರುತ್ತಿದ್ದ ಪಿಂಚಣಿಗಳನ್ನು ಹೆಚ್ಚಿಸಬೇಕೆಂದು ಪುನಃ ಪುನಃ ಮುನವರಖಾನ ನವಾಬನನ್ನು ಪೀಡಿಸಹತ್ತಿದ್ದರಿಂದ, ನವಾಬ ಮುನವರ ಖಾನನಿಗೆ ಹೊಸ ಕಲೆಕ್ಟರನಿಗೆ ಸ್ವಾಗತ ಕೋರಿ ಪತ್ರವನ್ನು ಬರೆಯುವದು ಆಗಿರಲಿಲ್ಲ. ಈ ಖಾಂಜಾದಾ ಮನೆತನದವರ ಜೀವನಾಂಶದ ಹಣವನ್ನು ಗವ್ಹರ್ನರ ಪುನಃ ಹೆಚ್ಚಿಸಿದರು.

ಮುಂದೆ ಕೆಲವೇ ದಿವಸಗಳಲ್ಲಿ ದಕ್ಷಿಣ ರಾಜ್ಯಗಳ ರಾಜಕೀಯ ಪ್ರತಿನಿಧಿಯಾದ ಜಾನ್ ಉಡ್ಡೀನ ಅನ್ನುವವನು ಒಂದು ಫರ್ಮಾನನ್ನು, ಆಗಸ್ಟ್ ಹತ್ತು, ೧೮೩೨ ರಂದು ಹೊರಡಿಸಿ, ಸವಣೂರು ನವಾಬ ಮುನವರಖಾನನಿಗೆ ಒಂದು ಸನದನ್ನು ಕಳಿಸಿದನು. ಆ ಸನದಿನಲ್ಲಿ:

"೧೮೩೦ ರ ಕಾನೂನಿನ ಪ್ರಕಾರ, ಸವಣೂರು ಮತ್ತು ಉಳಿದ ಇಪ್ಪತ್ತನಾಲ್ಕು ಹಳ್ಳಿಗಳ ನ್ಯಾಯಾಧಿಕರಣದ ಮತ್ತು ಕಂದಾಯದ ಎಲ್ಲ ಹಕ್ಕುಗಳನ್ನು ನವಾಬನಿಗೆ ಬಿಟ್ಟುಕೊಡಲಾಗಿದೆ. ಆದುದರಿಂದ, ಅವನು ಕೆಳಗೆ ತೋರಿಸಿದ ಹಳ್ಳಿಗಳನ್ನು ತಾನೇ ಆಳಬೇಕು. (೧) ಸವಣೂರು ಪಟ್ಟಣ,(೨) ಹೋತನಹಳ್ಳಿ, (೩) ಚಿಲ್ಲೂರು, (೪) ಹುಲೀಕಟ್ಟೆ, (೫) ಗಬ್ಬೂರು, (೬) ಚಿಕಮಸಕಟ್ಟೆ, (೭) ಜೇಕಿನಕಟ್ಟೆ, (೮)ಹೊನ್ನೀಕೊಪ್ಪ, (೯)ತೊರೂರು, (೧೦) ಸಿದ್ದಾಪುರ, (೧೧) ಎರೇಕೊಪ್ಪ, (೧೨) ಸುರಾಪಕಟ್ಟೆ, (೧೩) ಕಬನೂರು, (೧೪) ವಡ್ಡಿನಕೊಪ್ಪ, (೧೫) ನಾಯಿಕೆರೂರು, (೧೬) ತೊಂಡೂರು, (೧೭) ಮಣ್ಣೂರು, (೧೮) ನೀರಲಕಟ್ಟೆ, (೧೯) ಡೊಂಬರಮತ್ತೂರು, (೨೦) ಮುಳಕೇರಿ, (೨೧) ಮಾದಾಪುರ, (೨೨) ಬಸವನಕೊಪ್ಪ, (೨೩) ಚಂದಾಪುರ, (೨೪) ಕಲಿವಾಳ, (೨೫) ನಂದೀಹಳ್ಳಿ" ಎಂದು, ತಿಳಿಸಲಾಗಿತ್ತು. ಈ

ಅಧಿಕಾರಗಳನ್ನು ಕೊಟ್ಟಿದ್ದರಿಂದ ಸವಣೂರು ನವಾಬರು ಬ್ರಿಟಿಶರ ಆಡಳಿತೆಯ ಮುಷ್ಟಿಯಿಂದ ಹೊರಬಂದಂತಾಯಿತು. ಮುಂಬೈಗೆ ಹೊಸದಾಗಿ ಗವ್ಹರ್ನರ ಆಗಿ ಬಂದ ಕ್ಲೋರಿನ್ ಕಿಚನರ ಬೆಳಗಾವಿಗೆ ಸಂದರ್ಶನವಿತ್ತಾಗ, ನವಾಬ ಮುನವರಖಾನನು ಅವನನ್ನು ಅಲ್ಲಿ ಕಂಡು ತನ್ನ ಗೌರವವನ್ನು ಸಲ್ಲಿಸಿದನು.

ಇದೇ ಸಮಯಕ್ಕೆ ದೇಹಾರೋಗ್ಯಕ್ಕೆಂದು ಕೇಫ್ ಅಫ್ ಗುಡ್ ಹೋಪ್‌ಗೆ ಹೋಗಿದ್ದ ವಿಲಿಯಂ ನಿಸಬತ್ ಮರಳಿ ಧಾರವಾಡಕ್ಕೆ ಬಂದು ಕಲೆಕ್ಟರನ ಅಧಿಕಾರವನ್ನು ವಹಿಸಿಕೊಂಡನು. ಇದರಿಂದ ಹೆಂಡರಸನ್ ಮರಳಿ ಮುಂಬೈಗೆ ಹೋದನು. ಅಬ್ದುಲ್ ಮುನವರಖಾನ ನವಾಬನು ಧಾರವಾಡಕ್ಕೆ ಹೋಗಿ ನಿಸಬತ್ ಸಾಹೇಬನ ಯೋಗ ಕ್ಷೇಮವನ್ನು ವಿಚಾರಿಸಿಕೊಂಡು ಬಂದನು.

### ಹಮ್ಮಿಗಿ ದೇಸಾಯರ ಮಗಳ ವಿವಾಹಕ್ಕೆ ಹೋಗಿದ್ದು

ಹಮ್ಮಿಗಿ ದೇಸಾಯಿಯಾದ ಕೆಂಚನಗೌಡನು ಸವಣೂರು ನವಾಬನಿಗೆ ಅತ್ಯಂತ ವಿಧೇಯನಾಗಿದ್ದನು. ಅವನು ಹಮ್ಮಿಗಿಯಲ್ಲಿ ತನ್ನ ಮಗಳ ಮದುವೆಯನ್ನು ಏರ್ಪಡಿಸಿದಾಗ ಅಬ್ದುಲ್ ಮುನವರಖಾನ ನವಾಬನಿಗೆ ಅಮಂತ್ರಣವನ್ನಿತ್ತಿದ್ದನು. ಮುನವರಖಾನನು ಅವನ ಮಗಳ ವಿವಾಹಕ್ಕೆ ಹೋಗಿ, ಆಹೇರನ್ನಿತ್ತು, ಹಿಂದೂ ವಿವಾಹದ ವಿಧಿ ವಿಧಾನಗಳನ್ನು ನೋಡಿ ತನ್ನ ಸಂತೋಷವನ್ನು ವ್ಯಕ್ತಪಡಿಸಿದನು.

### ಎರಡನೇ ವಿವಾಹ

ಅಬ್ದುಲ್ ಮುನವರಖಾನನು ಎರಡನೇ ಹೆಂಡತಿಯನ್ನು ಮಾಡಿಕೊಂಡನು. ಪ್ರಾಯಶಃ ಮೊದಲನೇ ಹೆಂಡತಿಯಿಂದ ಮಕ್ಕಳಾಗದ್ದರಿಂದ ಎರಡನೇ ವಿವಾಹವನ್ನು ಮಾಡಿಕೊಂಡನೇನೋ!. ಆಗಿನ್ನೂ ಅವನ ವಯಸ್ಸು ಇಪ್ಪತ್ತಾರು, ಇಪ್ಪತ್ತೇಳು ಇದ್ದಿರಬೇಕು. ಈ ವಿವಾಹವು ೧೮೩೩ ರಲ್ಲಿ ನಡೆಯಿತು. ಈ ವಿವಾಹವೆಂದರೆ ಸವಣೂರಿನ ಜನರಿಗೆ ಒಂದು ವಾರ ಹಬ್ಬದ ದಿನಗಳಿದ್ದಂತೆ. ಎಲ್ಲರೂ ಆ ವಿವಾಹದ ವೈಭವವನ್ನು ನೋಡಿ ಆನಂದತುಂದಿಲರಾದರು. ಇದೇ ಸಮಯಕ್ಕೆ ಧಾರವಾಡದ ಕಲೆಕ್ಟರ ವಿಲಿಯಮ ನಿಸಬತನು ತೀರಿಕೊಂಡನು. ನವಾಬ ಮುನವರಖಾನನು ಈ ಸುದ್ದಿಯನ್ನು ಕೇಳಿ ತುಂಬಾ ವ್ಯಥಿತನಾದನು. ಮುನವರಖಾನ ಮತ್ತು ನಿಸಬತರು ಒಳ್ಳೇ ಸ್ನೇಹಿತರಂತಿದ್ದರು.

### ಮುನವರಖಾನನ ಮರಣ

ಇದ್ದಕ್ಕಿದ್ದಂತೆ ಅಬ್ದುಲ್ ಮುನವರಖಾನ ನವಾಬನು, ಜೀವನದ ಸಿಹಿಯನ್ನು ಹೀರಿ ಸುಖಪಡಬೇಕಾದ ತಾರುಣ್ಯದಲ್ಲಿ ಕಣ್ಣು ಮುಚ್ಚಿದನು. ನವಾಬ ಮುನವರಖಾನನು ಸತ್ತದ್ದು ೧೮೩೪ರಲ್ಲಿ. ಅಬ್ದುಲ್ ಮುನವರಖಾನನು ಸಾಕಷ್ಟು ಪಾನಾಸಕ್ತನಾಗಿ ಹಣವನ್ನು

ವ್ಯಯಿಸುತ್ತಿದ್ದರೂ, ಸಾಕಷ್ಟು ಸಂಪತ್ತನ್ನು ಉಳಿಸಿ ರಾಜಭಂಡಾರದಲ್ಲಿ ಇಟ್ಟಿದ್ದನು. ಹಾಗೆ ನೋಡಿದರೆ, ಮುನವರಖಾನನು ಜಿಪುಣನೆಂದೇ ಹೆಸರು ಪಡೆದಿದ್ದನು. ಇವನು ಗಳಿಸಿ ಇಟ್ಟಿದ್ದನ್ನು, ಇವನ ತಮ್ಮಂದಿರು ಹಾಳು ಮಾಡಿದರು. ಅಬ್ದುಲ್ ಮುನವರಖಾನನಿಗೆ ಗಂಡು ಮಕ್ಕಳಿಲ್ಲದ್ದರಿಂದ, ಅವನ ಮರಣಾನಂತರ ಕೂಡಲೇ ಸಿಂಹಾಸವನ್ನೇರಲು ಯಾರೂ ಇರಲಿಲ್ಲ. ಇವನ ನಂತರ ಸಿಂಹಾಸನಕ್ಕೆ ಬರಬೇಕಾದವನು ಇವನ ತಮ್ಮ ದಿಲೇರಖಾನ. ಅವನು ಪುಣೆಗೆ ಹೋದವನು ಅಲ್ಲಿಯೇ ಸ್ಥಾಯಿಯಾಗಿ ನಿಂತಿದ್ದನು. ಅಬ್ದುಲ್ ಮುನವರಖಾನ ನವಾಬನು ತೀರಿಕೊಂಡಾಗ ಅವನ ಹೆಂಡತಿ ಆರು ತಿಂಗಳ ಗರ್ಭಿಣಿಯಾಗಿದ್ದಳು. ಅವಳು ಹಡೆಯುವವರೆಗೂ ಮುಂದಿನ ವಾರಸಾ ವಿಷಯವನ್ನು ಸರಕಾರವು ನಿರ್ಧರಿಸುವಂತಿರಲಿಲ್ಲ. ಅವನಿಗೆ ಗಂಡು ಮಗು ಹುಟ್ಟಿದರೆ, ಅವನೇ ಸಿಂಹಾಸನಕ್ಕೆ ಬಾಧ್ಯಸ್ಥನಾಗುತ್ತಿದ್ದನು. ಇನ್ನು ಒಂದು ಪಕ್ಷ ಮುನವರಖಾನನ ವಿಧವೆ ಹೆಣ್ಣು ಕೂಸಿಗೆ ಜನ್ಮವಿತ್ತರೆ, ಅವನ ತಮ್ಮನಾದ ಅಬ್ದುಲ್ ದಿಲೇರಖಾನನು ಸಿಂಹಾಸನವನ್ನೇರಬೇಕು. ಇಂತಹ ಒಂದು ತ್ರಿಶಂಕು ಸ್ಥಿತಿ ಸವಣೂರಲ್ಲಿ ನಿರ್ಮಾಣವಾಯಿತು. ಇದೇ ರೀತಿಯ ಸ್ಥಿತಿ ಸವಾಯಿ ಮಾಧವರಾಯನು ಹುಟ್ಟುವಾಗಲೂ ಪೇಶ್ವೆಯವರಲ್ಲಿತ್ತು.

ಅಬ್ದುಲ್ ಮುನವರಖಾನ ನವಾಬನ ಮನೆತನದ ಖಾಂಜಾದಾ ಜನರು ಅವನ ರಾಜಭಂಡಾರದ ಮೇಲೆ ಕಣ್ಣಿಟ್ಟರು. ಅದರಲ್ಲಿ ಇದ್ದುದನ್ನು ಲಪಟಾಯಿಸಿಕೊಂಡು ಹೋಗಲು ಹೊಂಚು ಹಾಕಿದ್ದರು. ಆದರೆ ರಾಜ್ಯಕ್ಕೆ ವಿಧೇಯನಾಗಿದ್ದ ರಾಜಭಂಡಾರದ ಖಜಾಂಜಿ ಇದನ್ನು ತಡೆದನು. ಅರಮನೆಯಲ್ಲಿ ಒಂದು ರೀತಿ ಅರಾಜಕತೆ ತಲೆಯೆತ್ತಿತು. ಈಗ ರಾಜ್ಯದ ಹೊಣೆಗಾರಿಕೆ ದಿವಾಣ ಕೃಷ್ಣರಾಯನ ಮೇಲೆ ಬಿದ್ದಿತು. ಅವನು ಅಬ್ದುಲ್ ಮುನವರಖಾನ ನವಾಬನು ತೀರಿಕೊಂಡಾಗ ಕಾರ್ಯನಿಮಿತ್ತ ಧಾರವಾಡಕ್ಕೆ ಹೋದವನು ಮರಳಿ ಸವಣೂರಿಗೆ ಬಂದಿರಲಿಲ್ಲ. ಅರಮನೆಯಲ್ಲಿದ್ದು ಕಾರಕೂನ ಕೃಷ್ಣಪ್ಪ ಮತ್ತು ಅವನ ಮಗನು ತಕ್ಷಣವೇ ಧಾರವಾಡಕ್ಕೆ ಹೋಗಿ ದಿವಾನ ಕೃಷ್ಣರಾಯನನ್ನು ಸವಣೂರಿಗೆ ಕರೆತಂದರು. ಸಿಂಹಾಸನವನ್ನೇರ ಬೇಕಿದ್ದ ಅಬ್ದುಲ್ ಮುನವರಖಾನನ ತಮ್ಮ ಅಬ್ದುಲ್ ದಿಲೇರಖಾನನು ಪುಣೆಯಿಂದ ಸವಣೂರಿಗೆ ಬಂದಿರಲಿಲ್ಲ. ಅವನ ಜೊತೆ ಪುಣೆಗೆ ಹೋಗಿದ್ದ ಅವನ ಬಾಲ್ಯ ಸ್ನೇಹಿತ ಮೊಹಮದ್ ಗೌಸಖಾನ, ಪೀರಖಾನ, ಖಾದರ ಖಾನ, ಅಡಿಗೆಯವನಾದ ಶೇಖ ಮಲಂಗನು ದಿಲೇರಖಾನನೊಂದಿಗೆ ಪುಣೆಯಲ್ಲಿಯೇ ಇದ್ದರು. ಕಾರಣ ಅಬ್ದುಲ್ ಮುನವರಖಾನನಿಗೆ ಅಬ್ದುಲ್ ದಿಲೇರಖಾನನನ್ನು ಕಂಡರೆ ಸೇರುತ್ತಿರಲಿಲ್ಲ. ಇದನ್ನು ಬಲ್ಲ ದಿಲೇರಖಾನನ ಸೇವಕರು ಅಬ್ದುಲ್ ದಿಲೇರಖಾನನೊಂದಿಗೆ ಅವನ ಬಂಗ್ಲೆಯಲ್ಲಿಯೇ ಉಳಿದರು. ದಿಲೇರಖಾನನು ಸಿಂಹಾಸನದ ಮೇಲೆ ಇರದಿದ್ದರೂ ನವಾಬೀ ಠೀವಿಯನ್ನು ಇಟ್ಟಿದ್ದನು. ಪುಣೆಯ ಪ್ರತಿಷ್ಠಿತ ಜಾಗೆಯಲ್ಲಿ ಅವನ ಬಂಗ್ಲೆ ಇದ್ದಿತು. ಇವನು ತನ್ನ ವಿಲಾಸೀ ಜೀವನ ಕ್ರಮದಲ್ಲಿ ಸ್ವಲ್ಪವೂ ಬದಲಾವಣೆ

ಮಾಡಿಕೊಂಡಿರಲಿಲ್ಲ. ಇವನು ನವಾಬೀ ಥಾಟನಲ್ಲಿ ಬೆಳೆಯುತ್ತಿದ್ದುದರಿಂದ ಸಾಕಷ್ಟು ಸಾಲ ಸೋಲಗಳನ್ನು ಮಾಡಿದ್ದನು. ಇವನು ತನ್ನ ಬಂಗ್ಲೆಯನ್ನು ಅತ್ಯಂತ ಠಾಕುಠೀಕಾಗಿಟ್ಟು, ಯುರೋಪಿಯನ್ ಸ್ನೇಹಿತರನ್ನು ಮೇಜವಾನಿಗೆ, ಆಗೀಗ ಆಹ್ವಾನಿಸುತ್ತಿದ್ದನು. ಇವನ ಬಂಗ್ಲೆಯೆಂದರೆ ಮದಿರಾಪಾನ, ಮೇಜವಾನಿಗಳಿಗೆ ಅತ್ಯಂತ ಪ್ರಸಿದ್ಧವಾಗಿತ್ತು. ಇವನ ಬಂಗ್ಲೆಗೆ ಮೇಜರ್ ಜನರಲ್ ಜಾನ್ ಮಾಲ್ಕಂ, ಮಾಲ್ಕಂನ ಸ್ಥಾನದಲ್ಲಿ ಗವರ್ನರ್ ಆಗಿ ಬಂದ ಕ್ಲೋರಿನ್‌ಕಿಚನರ್, ದಕ್ಷಿಣ ಪ್ರಾಂತದ ಪ್ರತಿನಿಧಿ, ಜಾನ್ ವಡ್ಡೀನ, ಫಸ್ಟ್‌ಕ್ಲಾಸ್ ಮ್ಯಾಜಿಸ್ಟ್ರೇಟ್ ಹ್ಯಾಂಡರ್‌ಸನ್, ಗವ್ಹರ್ನರ ಮಂತ್ರಿಮಂಡಳದ ಸದಸ್ಯರು ಹಾಗೂ ಪುಣೆಯ ಪ್ರತಿಷ್ಠಿತರು ಬಂದು ಅತಿಥ್ಯವನ್ನು ಸ್ವೀಕರಿಸಿದ್ದರು. ಇದರಿಂದ ಅವರೆಲ್ಲರೂ ಸ್ನೇಹಿತರಾಗಿದ್ದರು. ಇದಲ್ಲದೆ, ಪುಣೆ ಜಿಲ್ಲಾ ಕಲೆಕ್ಟರ ಹೆನ್ರೀ ರಾಬರ್ಟಸನ್ ಗವ್ಹರ್ನರರ ಕಾರ್ಯದರ್ಶಿ ಮೊದಲಾದವರು ಇವನ ಬಂಗ್ಲೆಗೆ ಬಂದು ಹೋಗಿದ್ದರು. ೧೮೨೮ರಲ್ಲಿ ಪುಣೆಗೆ ಹೋಗಿ ನೆಲೆಸಿದ್ದ ಅಬ್ದುಲ್ ದಿಲೇರಖಾನನು ಆರು ವರುಷಗಳಲ್ಲಿ ಪುಣೆಯ ಶ್ರೀಮಂತರಲ್ಲಿ ಒಬ್ಬ ಗಣ್ಯ ವ್ಯಕ್ತಿಯಾಗಿದ್ದನು. ಪುಣೆಯಲ್ಲಿ ಇರುವಾಗಲೇ ಇವನಿಗೆ ಬೈರಮೀಯಾ ಮತ್ತು ಕಾಸೀಮೀಯಾ ಅನ್ನುವ ಇಬ್ಬರು ರಾಜಕುಮಾರರು ಹುಟ್ಟಿದರು. ಆಗ ಇವನು ಅದ್ದೂರಿಯಿಂದ ಅವರ ಹುಟ್ಟು ಹಬ್ಬಗಳನ್ನು ಮಾಡಿದರೂ, ಇವನ ತಂದೆಯ ಬಳಗದವರು ಸವಣೂರಿಂದ ಪುಣೆಗೆ ಬಂದಿರಲಿಲ್ಲ. ಪ್ರಪಂಚದಲ್ಲಿ ಅನೇಕ ಸಂಗತಿಗಳು ಘಟಿಸುತ್ತವೆ. ಆದರೆ ವೈಯಕ್ತಿಕವಾಗಿ ಒಳ್ಳೆಯದು ಅಥವಾ ಕೆಟ್ಟದ್ದು ಆದಾಗ ಮಾತ್ರ ಅದು ನೆನಪಿರುತ್ತದೆ. ದಿಲೇರಖಾನನಿಗೆ ಸವಣೂರಿನವರು ತನ್ನನ್ನು ಚೆನ್ನಾಗಿ ನೋಡಿಕೊಳ್ಳಲಿಲ್ಲವೆಂಬ ಕೊರಗಿತ್ತು.

ಅಬ್ದುಲ್ ದಿಲೇರಖಾನನು ತನ್ನ ಅಣ್ಣನ ಮರಣದ ಸುದ್ದಿಯನ್ನು ಕೇಳಿ ತಕ್ಷಣ ಧಾರವಾಡ ಜಿಲ್ಲಾ ಮ್ಯಾಜಿಸ್ಟ್ರೇಟರಿಗೆ ಒಂದು ಪತ್ರವನ್ನು ಬರೆದು ಸಿಂಹಾಸನದ ಮೇಲಿನ ತನ್ನ ಹಕ್ಕನ್ನು ಗವ್ಹರ್ನರರಲ್ಲಿ ಪ್ರಸ್ತಾಪಿಸಿದನು. ದಿಲೇರಖಾನನು ಮ್ಯಾಜಿಸ್ಟ್ರೇಟ ಶ್ಯಾಮಸನ್‌ರಿಗೆ ಬರೆದ ಪತ್ರದ ಉತ್ತರವೆಂದು, ಅವರು ಸಪ್ಟೆಂಬರ ಎರಡು, ೧೮೩೪ ರಂದು " ನಿಮ್ಮ ಪತ್ರ ಬಂದಿತು, ನೀವು ಕ್ಷೇಮದಿಂದ ಇರುವಿರೆಂದು ಕೇಳಿ ಸಮಾಧಾನ ವಾಯಿತು. ನೀವು ನಿಮ್ಮ ಅಣ್ಣ ಮುನವರಖಾನರ ಮರಣಾನಂತರ ಸವಣೂರು ಸಿಂಹಾಸನಕ್ಕೆ ನಿಮ್ಮ ಹಕ್ಕಿನ ಬಗ್ಗೆ ಧಾರವಾಡ ಕಲೆಕ್ಟರರಿಗೆ ಪತ್ರ ಬರೆದಿದ್ದು ತಿಳಿಯಿತು. ವಿಲಿಯಮ ನಿಸಬತರು ಸತ್ತಿದ್ದರಿಂದ, ಅವರ ಕೆಲಸವನ್ನು ಹ್ಯಾರಿಸನ ಅನ್ನುವವರು ಈಗ ನೋಡುತ್ತಿದ್ದಾರೆ. ಅವರು ಖಂಡಿತ ಸೂಕ್ತ ವ್ಯವಸ್ಥೆ ಮಾಡುತ್ತಾರೆ. ಇತಿ- ಜೇಮ್ಸ ಬ್ರಾನ ಶಾಮಸನ್ ಸಾಹೇಬ, ಧಾರವಾಡ ಜಿಲ್ಲಾ ಮ್ಯಾಜಿಸ್ಟ್ರೇಟರು" ಎಂದು ತಿಳಿಸಿದ್ದರು.

ಅಬ್ದುಲ್ ದಿಲೇರಖಾನನಿಗೆ ಮುಂಬೈ ಗವ್ಹರ್ನರರು ಒಂದು ಪತ್ರವನ್ನು ಬರೆದು "ನಾನು ನಿಮ್ಮ ವಾರಸಾ ಹಕ್ಕಿನ ಬಗ್ಗೆ ದಾಪೋಡಿಯಿಂದ ಧಾರವಾಡದ ಕಲೆಕ್ಟರರಿಗೆ

ಪತ್ರ ಬರೆದು ತಿಳಿಸಿದ್ದೇನೆ. ದಯಾಮಯನಾದ ಆ ದೇವರು ನಿಮ್ಮನ್ನು ಕರುಣಿಸಲಿ'' ಎಂದು ತಿಳಿಸಿದರು. ನಿಶ್ಚಿತವಾಗಿ ಏನೂ ಹೇಳಲಿಲ್ಲ. ಈ ಪತ್ರವನ್ನು ಓದಿ ಅಬ್ದುಲ್ ದಿಲೇರಖಾನನು ಗವರ್ನರರನ್ನು ಕಂಡು, ತಾನು ಸವಣೂರಿಗೆ ಹೋಗುವ ಮುನ್ನ ಅವರನ್ನು ನೋಡಿ ಹೋಗಲು ಬಂದಿರುವುದಾಗಿ ಹೇಳಿದನು. ಗವ್ಹರ್ನರರ ಬಂಗ್ಲೆ ಆಗ ಪುಣೆಯ ಮೂಳಾಮೂಠಾ ನದಿಯ ದಂಡೆಯ ಮೇಲಿತ್ತು. ದಿಲೇರಖಾನನು ಪುಣೆಯನ್ನು ಬಿಡುವಾಗ ಕಲೆಕ್ಟರ ಹಾರ್ವೇ ಜೇಬರನನ್ನು ಭೆಟ್ಟಿಯಾಗಿ ರಹದಾರಿ ಅಪ್ಪಣೆಯನ್ನು ಪಡಕೊಂಡು ಸವಣೂರಿಗೆ ಬಂದನು. ಅಬ್ದುಲ್ ದಿಲೇರಖಾನನು ಪುಣೆಯಿಂದ ಹೊರಟು, ಮಧ್ಯದಲ್ಲಿ ತಂಗಿ, ಕೃಷ್ಣಾ ನದಿಯನ್ನು ದಾಟಿ ಮುಧೋಳದ ಮೇಲಿಂದ ಸವಣೂರಿನ ಬಳಿ ಇರುವ ಕಾರಡಗಿಗೆ ಬಂದನು. ನಂತರ, ಕಾರಡಗಿಯಿಂದ ಮಹಮ್ಮದ ಗೌಸ ಅನ್ನುವ ಸಂದೇಶವಾಹಕನೊಬ್ಬನನ್ನು ಧಾರವಾಡಕ್ಕೆ ಕಳಿಸಿ, ಹ್ಯಾರಿಸ್ ಕಲೆಕ್ಟರನ ಭೆಟ್ಟಿಗೆ ಅನುಮತಿಯನ್ನು ಕೋರಿದನು. ಅದರ ಜೊತೆ ಪುಣೆಯಲ್ಲಿ ಗವ್ಹರ್ನರರು ಸ್ವತಃ ತಮ್ಮ ಹಸ್ತದಿಂದ ಹ್ಯಾರಿಸನ್‌ನಿಗೆ ಬರೆದ ಪತ್ರವನ್ನು ಕೂಡ ದಿಲೇರಜಂಗ ಬಹದ್ದೂರನು ಹ್ಯಾರಿಸನ್‌ನಿಗೆ ತಲುಪಿಸಿದನು.

ನವಾಬನ ಪತ್ರವನ್ನು ಓದಿ, ಮಿ॥ ಹ್ಯಾರಿಸನ್‌ನು ಉತ್ತರವನ್ನು ಬರೆದು ''ದಿವಂಗತ ನವಾಬ ಮುನವರಖಾನರ ಪತ್ನಿ, ಪತಿ ಸಾಯುವ ಮುನ್ನ ಆರು ತಿಂಗಳ ಗರ್ಭಿಣೀ ಯಿದ್ದಳು. ಅವಳು ಗಂಡು ಹುಡುಗನಿಗೆ ಜನ್ಮವೀಯುವಳೋ ಅಥವಾ ಹೆಣ್ಣು ಕೂಸಿಗೆ ಜನ್ಮವನ್ನೀಯುವಳೋ ಅನ್ನುವುದರ ಮೇಲೆ ಸವಣೂರು ಸಿಂಹಾಸನದ ಹಕ್ಕನ್ನು ನಿರ್ಧರಿಸಬೇಕಾಗಿದೆ. ಅಲ್ಲಿಯವರೆಗೂ ತಾವು ವಿಶ್ರಾಂತಿ ಪಡೆಯಿರಿ. ನೀವು ನಿಮ್ಮ ಅತ್ತಿಗೆಯ ಪ್ರಸೂತಿಯನ್ನು ನಿರೀಕ್ಷಿಸುತ್ತಿರಿ'' ಎಂದು ತಿಳಿಸಿದನು. ಆಗ ಕಲೆಕ್ಟರನು ಕಾರಡಗಿಯಲ್ಲಿಯೇ ವಾಸ್ತವ್ಯ ಮಾಡಿದ್ದನು. ಅಲ್ಲಿಂದಲೇ ಉತ್ತರ ಬರೆದು ನವಾಬನಿಗೆ ೧೮೩೪ ನವೆಂಬರದಲ್ಲಿ ತಿಳಿಸಿದನು.

ನಂತರ ಹ್ಯಾರಿಸನು ಬಂಕಾಪುರ ಮಾಮಲೇದಾರನಿಗೆ ಇನ್ನೊಂದು ಪತ್ರವನ್ನು ಬರೆದು ''ಅಬ್ದುಲ್ ಮುನವರಖಾನರ ಪತ್ನಿ ನಿಜವಾಗಿ ಗರ್ಭಿಣಿ ಇರುವಳೋ ಇಲ್ಲವೋ ಅನ್ನುವುದನ್ನು ತನಗೆ ತಿಳಿಸಬೇಕು, ಅವಳು ಗರ್ಭವತಿಯಿರುವುದು ನಿಜವಾದರೆ, ಅವಳಿಗೆ ಪ್ರಸೂತಿಯ ಎಲ್ಲ ವ್ಯವಸ್ಥೆಯನ್ನು ಮಾಡಿ ಅವಳು ಯಾವ ಮಗುವಿಗೆ ಜನ್ಮ ನೀಡಿದಳೆಂಬುದನ್ನು ನಮಗೆ ತಿಳಿಸಬೇಕು'' ಎಂದು ಅಜ್ಞಾಪಿಸಿದನು.

ಹ್ಯಾರಿಸನನು ವರ್ಗವಾಗಿ ಈಗ ಪುನಃ ಥಾಮಸ್ ಹಾರ್ವೇ ಜೇಬರ ಎರಡನೇ ಸಲ ಧಾರವಾಡದ ಕಲೆಕ್ಟರನಾಗಿ ಅಧಿಕಾರವನ್ನು ವಹಿಸಿಕೊಂಡನು. ಇವನು ಕರ್ನಾಟಕ ಸುಬಾದ ಎಲ್ಲ ದೇಸಾಯರಿಗೆ, ಜಹಗೀರದಾರರಿಗೆ ಬಂದು ಭೆಟ್ಟಿಯಾಗಲು ತಿಳಿಸಿದನು. ಅದರಂತೆ ಅಬ್ದುಲ್ ದಿಲೇರಖಾನನಿಗೂ ಬರಬೇಕೆಂದು ಹೇಳಿಕಳಿಸಿದನು. ಆಗ ಅಬ್ದುಲ್

ದಿಲೇರಖಾನನು ಕಲಾದಿಗಿಯಲ್ಲಿ ವಾಸ್ತವ್ಯ ಮಾಡಿದ್ದನು. ದಿಲೇರಖಾನನು ಬೆಳಗಾವಿ ಮೂಲಕ ಧಾರವಾಡಕ್ಕೆ ಹೋದನು. ಹಾದಿಯಲ್ಲಿ ಅವನಿಗೆ ಕುದುರೆ ಗಾಡಿಯಲ್ಲಿ ಹೊರಟಿದ್ದ ಥಾಮಸ್ ಹಾರ್ವೇ ಬೇಬರನ ಭೆಟ್ಟಿಯಾಯಿತು. ಆ ಭೆಟ್ಟಿಯ ಸಮಯಕ್ಕೆ ಬೇಬರನು "ನಾನು ಎಲ್ಲವನ್ನೂ ಸರಿಪಡಿಸುತ್ತೇನೆ" ಎಂದು ಅಬ್ದುಲ್ ದಿಲೇರಖಾನನಿಗೆ ಆಶ್ವಾಸನೆಯನ್ನಿತ್ತನು. ಬೇಬರನು ಅಲ್ಲಿಂದ ಮುಗಟಖಾನ ಹುಬ್ಬಳ್ಳಿ, ಕಿತ್ತೂರು, ತೇಗೂರು ಮಾರ್ಗವಾಗಿ ಧಾರವಾಡಕ್ಕೆ ಬಂದನು. ಅಬ್ದುಲ್ ದಿಲೇರಖಾನನು ಇನ್ನೂ ಧಾರವಾಡದಲ್ಲಿರುವಾಗ, ಬಂಕಾಪುರ ಮಾಮಲೇದಾರನು ಕಳಿಸಿದ ಅಶ್ವಾರೋಹಿಯು ಕಲೆಕ್ಟರನನ್ನು ಭೆಟ್ಟಿಯಾಗಿ, ಅಬ್ದುಲ್ ಮುನವರಖಾನರ ವಿಧವೆ ಹೆಣ್ಣು ಕೂಸಿಗೆ ಜನ್ಮವಿತ್ತಿರುವಳೆಂದು ತಿಳಿಸಿದನು. ಈ ಸುದ್ದಿಯನ್ನು ಕೇಳಿ ಕಲೆಕ್ಟರನು ಅಬ್ದುಲ್ ದಿಲೇರಖಾನನನ್ನು ಸಕಲ ವೈಭವಗಳೊಂದಿಗೆ ಕರೆತರಲು ಹೇಳಿದನು. ಬೇಬರನಿಗೂ ಈ ವಾರಸಾದ ವಿಷಯ ತಲೆನೋವಿನ ವಿಷಯವಾಗಿತ್ತು. ಈಗ ಅದಕ್ಕೆ ಒಂದು ಪರಿಹಾರವು ದೊರೆತಂತಾಯಿತು.

ಅತ್ತಿಗೆ ಹೆಣ್ಣು ಕೂಸಿಗೆ ಜನ್ಮವಿತ್ತ ವಿಷಯವು ತಿಳಿದೊಡನೆ ಅಬ್ದುಲ್ ದಿಲೇರಖಾನನು ಹುಲಗೂರಿಗೆ ಬಂದನು. ಅಲ್ಲಿ ವಾದ್ಯ ವೈಭಗಳೊಂದಿಗೆ ಸಂಸ್ಥಾನದ ಧ್ವಜವನ್ನು ಹಿಡಿದ ಐವತ್ತು ಜನ ಇವನ ಹಿಂಬಾಲಿಗರು, ಸರದಾರರು, ಖಾಂಜಾದಾ ಮನೆತನದ ಕೆಲವರು, ಹಾಜರಿದ್ದರು. ಧಾರವಾಡ ಕಲೆಕ್ಟರ ಹಾರ್ವೇ ಬೇಬರನು ಹುಲಗೂರಿಗೆ ತನ್ನ ಸೇವಕರನ್ನು ಕಳಿಸಿ, ತಕ್ಷಣವೇ ಅಬ್ದುಲ್ ದಿಲೇರಖಾನನಿಗೆ ತನ್ನನ್ನು ಭೆಟ್ಟಿಯಾಗಬೇಕೆಂದು ತಿಳಿಸಿದನು.

ದಿಲೇರಖಾನನು ಧಾರವಾಡದಲ್ಲಿ ಕಲೆಕ್ಟರನ ಬಂಗ್ಲೆಯಲ್ಲಿ ಭೆಟ್ಟಿಯಾದಾಗ, ಅವನು ದಿಲೇರಖಾನನಿಗೆ ಸ್ವಾಗತವನ್ನಿತ್ತು, ಒಳಗೆ ಕರೆದೊಯ್ದನು. ಕಲೆಕ್ಟರ್ ಹಾರ್ವೇ ಬೇಬರನು "ದಿಲೇರಖಾನ ಬಹದ್ದೂರ ನೀನೀಗ ಸಿಂಹಾಸನಕ್ಕೆ ಉತ್ತರಾಧಿಕಾರಿಯಾಗಿರುವಿ. ನಾನು ಆಗ ಮನಸ್ಸಿನಲ್ಲಿ ಬಯಸಿದ್ದು ಈಗ ಫಲಿಸಿದಂತಾಯಿತು. ನಿನ್ನ ಸಿಂಹಾಸನಾರೋಹಣದ ಸಮಾರಂಭದಲ್ಲಿ ನನಗೆ ಉಪಸ್ಥಿತನಿರಬೇಕೆಂಬ ಆಶೆಯಿದೆ. ಆದರೆ ನಾನು ಆಡಳಿತೆಯ ಕಾರ್ಯದಲ್ಲಿ ತೊಡಗಿದ್ದರಿಂದ ನನಗೆ ಬರಲಾಗುವುದಿಲ್ಲ. ಅದಕ್ಕೆ ನಾನು ಐವತ್ತು ಅಶ್ವಾರೋಹಿಗಳೊಂದಿಗೆ ಸರದಾರ ಮಹಮದ ಗೌಸಖಾನ ರಿಸಾಲದಾರ ಬಹದ್ದೂರನನ್ನು ಸವಣೂರಿಗೆ ಕಳಿಸುತ್ತೇನೆ. ಅವನು ನನ್ನ ಪ್ರತಿನಿಧಿಯಾಗಿ ನಿನ್ನ ಸಿಂಹಾಸನಾರೋಹಣದಲ್ಲಿ ಪಾಲ್ಗೊಳ್ಳುವನು. ಅದಕ್ಕೆ ನೀನು ಈಗ ನೇರವಾಗಿ ಸವಣೂರಿಗೆ ಹೋಗಿ ಅಧಿಕಾರವನ್ನು ವಹಿಸಿಕೊಳ್ಳಬೇಕು. ನಿನ್ನ ಭವಿಷ್ಯವು ಒಳ್ಳೆಯದಾಗಲೆಂದು ನಾನು ಹಾರೈಸುವೆ" ಎಂದು ಗವ್ಹರ್ನರರ ಆಜ್ಞೆಯನ್ನು ಕೊಟ್ಟು, ಅಬ್ದುಲ್ ದಿಲೇರಖಾನನನ್ನು ಸವಣೂರಿಗೆ ಕಳಿಸಿದನು. ಈಗ ಅಬ್ದುಲ್ ಮಜೀದಖಾನನ ಹಾದಿ ಸುಗಮವಾಗಿತ್ತು. ಸುತ್ತಲೂ ಬೆಳದಿಂಗಳು

ಹೂವಿನಂತೆ ಚೆಲ್ಲಿತ್ತು. ಅವನ ಹಾದಿಯಲ್ಲಿ ಹಾಲು ಜೇನುಗಳು ಹರಿಯಹತ್ತಿದ್ದವು. ಒಂದು ಕಾಲಕ್ಕೆ ಅಬ್ದುಲ್ ದಿಲೇರಖಾನನನ್ನು ತಿರಸ್ಕಾರದಿಂದ ಕಂಡ ಸವಣೂರು ಈಗ ಅವನ ಆಗಮನಕ್ಕಾಗಿ ಸಜ್ಜಾಗಹತ್ತಿತ್ತು. ಹಾಗೆ ನೋಡಿದರೆ, ಇವನೇನೂ ಪಟ್ಟಕ್ಕೆ ಬರಬಹುದೆಂಬ ಕನಸು ಕಟ್ಟಿಕೊಂಡಿರಲಿಲ್ಲ. ಅಣ್ಣನ ಸಾವು ಇವನನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿತು.

## ಅಬ್ದುಲ್ ದಲೇಲಖಾನ - ಊರ್ಫ್- ದಿಲೇರಖಾನ ದಿಲೇರಜಂಗ ಬಹದ್ದೂರ (೧೮೩೪- ೧೮೬೨)

ಧಾರವಾಡ ಕಲೆಕ್ಟರ ಕೊಟ್ಟ ಆಜ್ಞೆಯನ್ನು ತೆಗೆದುಕೊಂಡು ವರ್ಣಮಯ ಮೆರವಣಿಗೆ, ಮಂಗಳವಾದ್ಯಗಳ ನಿನಾದದಲ್ಲಿ ಅಬ್ದುಲ್ ದಿಲೇರಖಾನನು ಲಕ್ಷ್ಮೇಶ್ವರ ದರವಾಜ (ಅಗಸೆ) ದಿಂದ ಸವಣೂರನ್ನು ಪ್ರವೇಶಿಸಿದನು. ದಿಲೇರಖಾನನ ಪಾಲಿಗೆ ಈ ಲಕ್ಷ್ಮೇಶ್ವರ ಆಗಸೆಯೆಂದರೆ, ತೋಪುಗಳನ್ನು ಹಾರಿಸಿ ಸಿಕಂದರನು ಹಿಂದೂಸ್ತಾನವನ್ನು ಪ್ರವೇಶಿಸಿದ ವಿಜಯದ್ವಾರವಾಗಿತ್ತು. ಹೊಸ ನವಾಬನನ್ನು ಸ್ವಾಗತಿಸಲು ಜನಸ್ತೋಮವು ಕಿಕ್ಕಿರಿದು ನಿಂತಿತ್ತು. ಒಂದು ಕಸಕಸಿ ಕಾಳಿಗೂ ಕಾಲಿಡದಷ್ಟು ಸವಣೂರಿನ ಬೀದಿಗಳು ಜನರಿಂದ ತುಂಬಿ ತುಳುಕುತ್ತಿದ್ದವು.

ಅರಮನೆಗೆ ಹೋಗಿ ಸ್ನಾನಮಾಡಿ, ಕೊರಳಲ್ಲಿ ಮುತ್ತುರತ್ನಗಳ ಹಾರಗಳನ್ನು ಧರಿಸಿ, ತಲೆಯ ಮೇಲಿನ ಜರೀ ರೇಶ್ಮೆ ಪಟಗಾಕ್ಕ ಸಿರಪೇಚನ್ನು ಸಿಕ್ಕಿಸಿಕೊಂಡು, ದಿಲೇರಖಾನ ದರಬಾರನ್ನು ಪ್ರವೇಶಿಸಿದನು. ದಿಲೇರಖಾನನು ಆಸೀನನಾದೊಡನೆ, ಧಾರವಾಡದ ಕಲೆಕ್ಟರ ಮತ್ತು ಸಂಸ್ಥಾನಗಳ ಪೊಲಿಟಿಕಲ್ ಏಜಂಟ ಕಳಿಸಿದ್ದ ಆಜ್ಞೆಯನ್ನು ಸಂಸ್ಥಾನದ ದಿವಾಣರು ರೇಶಿಮೆ ವಸ್ತ್ರದ ಸುರಳಿಯಿಂದ ಹೊರಗೆ ತೆಗೆದು "ನವಾಬ ಅಬ್ದುಲ್ ಮುನವರಖಾನರು ತೀರಿಕೊಂಡರು. ಅವರಿಗೆ ಗಂಡು ಸಂತಾನವಿರಲಿಲ್ಲ. ಅವರ ಹೆಂಡತಿ ಆಗ ಗರ್ಭಿಣಿಯಿದ್ದರು. ಅವರು ಹೆಣ್ಣು ಮಗುವಿಗೆ ಜನ್ಮ ಕೊಟ್ಟಿದ್ದರಿಂದ ಈಗ ಸಿಂಹಾಸನಕ್ಕೆ ಅವರ ತಮ್ಮಂದಿರಾದ ಅಬ್ದುಲ್ ದಲೇಲಖಾನ ಊರ್ಫ್ ದಿಲೇರಖಾನ, ದಿಲೇರಜಂಗ ದಿಲೇರ ಬಹದ್ದೂರರು ಅವರನ್ನು ಉತ್ತರಾಧಿಕಾರಿಯೆಂದು ನಿಯಮಿಸಲು ಕಂಪನಿ ಸರಕಾರವು ನಿರ್ಧರಿಸಿದೆ" ಎಂದು ಓದಿ ಹೇಳಿದನು. ಈ ಆಜ್ಞೆಯ ಜೊತೆ ಥಾಮಸ್ ಹಾರ್ವೇ ಬೇಬರನು ತನ್ನ ಶುಭಾಶಯಗಳನ್ನು ಕಳಿಸಿದ್ದನು. ಮುನವರಖಾನ ಸತ್ತ ಮೇಲೆ ಕೆಲ ತಿಂಗಳು ಸವಣೂರು ರಾಜ್ಯದಲ್ಲಿ ರಾಜನೇ ಇರಲಿಲ್ಲ. ಈ ಸಿಂಹಾಸನಾರೋಹಣವು ೧೮೩೪ರಲ್ಲಿ ನಡೆದಿರಬೇಕು. ನವಾಬನಾದ ಮೇಲೆ ಅಬ್ದುಲ್ ದಿಲೇರಖಾನನು "ರಾಜ್ಯದ ಎಲ್ಲ ಅಧಿಕಾರಿಗಳು ಅವರವರ ಹುದ್ದೆಯಲ್ಲಿ ಮುಂದುವರೆಯ ಬೇಕು, ಈ ಅಧಿಕಾರಿಗಳಲ್ಲಿ ಯಾರಾದರೂ ರಾಜ್ಯಕ್ಕೆ ಅಹಿತವನ್ನು ಬಯಸುವ ಕಾರ್ಯದಲ್ಲಿ ತೊಡಗಿದರೆ ಅವರಿಗೆ ತಕ್ಕ ಶಿಕ್ಷೆಯನ್ನು ಕೊಡಲಾಗುವುದು" ಎಂದು ಎಚ್ಚರಿಸಿದನು.

ಇವನ ತಂದೆ ಅಬ್ದುಲ್ ಖೈರಖಾನನು ಇವನಿಗೆ ರಾಜರಿಗೆ ಯೋಗ್ಯವಾದ ಒಳ್ಳೇ ಶಿಕ್ಷಣವನ್ನು ಕೊಡಿಸಿದ್ದನು. ಇದಲ್ಲದೆ, ಆರು ವರುಷ ಪುಣೆಯಲ್ಲಿದ್ದು ಶಿಷ್ಟ ಜನರೊಡನೆ ವ್ಯವಹರಿಸಿದ್ದನು. ಹಾಗೂ ಹಲವಾರು ಯುರೋಪಿಯನ ಅಧಿಕಾರಿಗಳ ಸ್ನೇಹವನ್ನು ಸಂಪಾದಿಸಿದ್ದರಿಂದ ಯಾವುದೇ ನಿರ್ಣಯವನ್ನು ಕೈಗೊಳ್ಳಬೇಕಾದರೆ ಪೂರ್ವಾಪರ ವಿಚಾರವನ್ನು ಮಾಡುತ್ತಿದ್ದನು. ಅಂತಲೇ ಇವನ ಸುತ್ತಲೂ ಸದಾ ಸರದಾರರು, ಖಾಂಜಾದಾ ರಾಜಮನೆತನದವರು, ಬುದ್ಧಿವಂತರು, ಮುಫ್ತೀ ಅಂದರೆ ಶರೀಯತ್ ಕಾನೂನನ್ನು ಭಾಷ್ಯಮಾಡಿ ನ್ಯಾಯ ನಿರ್ಣಯವನ್ನು ಕೊಡುವವರೂ ಇರುತ್ತಿದ್ದರು.

ಸಿಂಹಾಸನವನ್ನೇರಿದ ಮೇಲೆ ದೌಲತ್‌ಖಾನಾ ಹಾಗೂ ವಿವಿಧ ಪದಾರ್ಥಗಳನ್ನಿಟ್ಟ ಜಮಾದಾರಖಾನಾಗಳನ್ನು ವೀಕ್ಷಿಸಿದನು. ರಾಜ್ಯದ ಎಲ್ಲ ಅಧಿಕಾರಿಗಳನ್ನು, ಪೋಲೀಸ್ ಪ್ರಮುಖರನ್ನು, ಕಾರ್ಖಾನೆಗಳ ವ್ಯವಸ್ಥಾಪಕರನ್ನು, ಊರಿನ ಮುಖ್ಯ ವ್ಯಾಪಾರಸ್ಥರನ್ನು ಕರೆಯಿಸಿ, ಅವರವರ ಕುಂದುಕೊರತೆಗಳ ಬಗ್ಗೆ ಚರ್ಚಿಸಿದನು.

ದಿಲೇರಖಾನನು ಪುಣೆಯಲ್ಲಿರುವಾಗ ಪರಿಚಯವಾಗಿದ್ದ ಜೇಮ್ಸ್ ಬ್ರೂಸ್ ಶ್ಯಾಮಸನ್‌ನು ಪುಣೆಯಿಂದ ಧಾರವಾಡ ಜಿಲ್ಲಾ ನ್ಯಾಯಾಧೀಶನಾಗಿ ವರ್ಗವಾಗಿ ಬಂದನು. ನವಾಬ ದಿಲೇರಖಾನನು ಸಿಂಹಾಸನವನ್ನೇರಿದ್ದನ್ನು ಕೇಳಿ ಅವನು ಸಂತೋಷಭರಿತನಾಗಿ ಸವಣೂರಿಗೆ ಬಂದು ನವಾಬನನ್ನು ಅಭಿನಂದಿಸಿ ಹೋದನು. ದಿಲೇರಖಾನನು ಅಧಿಕಾರವನ್ನು ವಹಿಸಿಕೊಳ್ಳಲು ಸವಣೂರಿಗೆ ಬರುವಾಗ ಪುಣೆಯಲ್ಲಿಯೇ ಬಿಟ್ಟು ಬಂದಿದ್ದ ಅವನ ಹೆಂಡರು, ಮಕ್ಕಳು, ಅಜ್ಜಿಯನ್ನು ಗುಂಡೂರಾವ ವೆಂಕಟೇಶ ಎಂಬುವ ಅಧಿಕಾರಿಯನ್ನು ಕಳಿಸಿ, ಕರೆಸಿಕೊಂಡನು. ಅವರು ಪುಣೆಯಲ್ಲಿರುವಾಗ ಖಾದರಖಾನನು ಅವರನ್ನು ರಕ್ಷಿಸುತ್ತಿದ್ದನು.

ಮುನವರಖಾನನ ಕಾಲದಿಂದಲೂ ಬ್ರಿಟಿಶರು ನಿಯಮಿಸಿದ್ದ ಅಣ್ಣಾಜಿರಾವ ಅನ್ನುವ ಧರಬಾರದ ವರದಿಗಾರನನ್ನು ಬದಲಾಯಿಸಿ ಮಹಮ್ಮದ ಜಹಾಂಗೀರ ಅನ್ನುವವನನ್ನು ಆ ಸ್ಥಾನಕ್ಕೆ ನಿಯಮಿಸಿದನು. ಮುಂದೆ ಆರು ತಿಂಗಳು ಕಳೆದ ಮೇಲೆ ಧಾರವಾಡಕ್ಕೆ ಹೋಗಿ, ಕಲೆಕ್ಟರ ಮತ್ತು ಪೊಲಿಟಿಕಲ್ ಎಜಂಟ್ ಆದ ಥಾಮಸ್ ಹಾರ್ವೇ ಬೇಬರನನ್ನು ಭೆಟ್ಟಿಯಾದನು. ಈ ಭೆಟ್ಟಿ ೫ನೇ ಮಾರ್ಚ ೧೮೩೭ ರಂದು ನಡೆದಿರಬೇಕು. ನವಾಬ ದಿಲೇರಖಾನನು ಧಾರವಾಡಕ್ಕೆ ಹೋಗುವ ಮುನ್ನ ಅವನ ಸೇವಕರು ಪೂರ್ವಭಾವಿಯಾಗಿ ಹೋಗಿ, ಡೇರೆ ಹಾಕಿ, ಶೃಂಗಾರಗೊಳಿಸಿ, ನವಾಬನು ಬರುವುದನ್ನು ಕಾಯುತ್ತಿದ್ದರು. ಶಿಷ್ಟಾಚಾರಕ್ಕನುಸಾರವಾಗಿ ಮೊದಲು ಅಬ್ದುಲ್ ದಿಲೇರಖಾನ ನವಾಬನು ಥಾಮಸ್ ಬೇಬರನನ್ನು ಕಂಡು, ಮಾತನಾಡಿ, ತನ್ನ ಡೇರೆಗೆ ಬರಬೇಕೆಂದು ಆಹ್ವಾನಿಸಿ ಬಂದನು. ನಂತರ ಆನೆಯನ್ನು ಕಳಿಸಿ, ಅವನನ್ನು ಕರೆಯಿಸಿಕೊಂಡನು. ಇದೇ ಕಾಲಕ್ಕೆ ಮಾವಿನ ಹಣ್ಣುಗಳ ಸುಗ್ಗಿಯಾಗಿದ್ದರಿಂದ ನವಾಬ ದಿಲೇರಖಾನನು ಸವಣೂರಿನ ನವಾಬಾಗಾದಲ್ಲಿ

ಬೆಳೆದ ಶ್ರೇಷ್ಠ ಜಾತಿಯ ಮಾವಿಯ ಹಣ್ಣುಗಳನ್ನು ಕಲೆಕ್ಟರನಿಗೆ ಕೊಟ್ಟನು. ದಿಲೇರಖಾನನು ಕೆಲಕಾಲ ಧಾರವಾಡದಲ್ಲಿ ವಾಸ್ತವ್ಯ ಮಾಡಿದನು. ಅವನು ಇರುವಷ್ಟು ದಿವಸವೂ ಸವಣೂರಿನಿಂದ ತಾಜಾ ಮಾವಿನ ಹಣ್ಣುಗಳು ಧಾರವಾಡಕ್ಕೆ ಬರುತ್ತಿದ್ದವು. ನವಾಬನು ಅವುಗಳನ್ನು ಕಲೆಕ್ಟರನಲ್ಲದೆ, ಬೇರೆ ಅಧಿಕಾರಗಳಿಗೂ ಕಳಿಸಿಕೊಡುತ್ತಿದ್ದನು. ಇಷ್ಟೇ ಅಲ್ಲ ಗವ್ಹರ್ನರರ ಹಾಗೂ ಮಿಲಿಟರಿ ಅಧಿಕಾರಿಗಳಿಗೆ ಅಂಚೆಯ ಸೇವೆಯನ್ನು ಬಳಸಿಕೊಂಡು ಮಾವಿನ ಹಣ್ಣಿನ ಬುಟ್ಟಿಗಳನ್ನು ಪುಣೆಗೆ ಹಾಗೂ ಮುಂಬೈಗಳಿಗೆ ಕಳಿಸುತ್ತಿದ್ದನು. ಹಣ್ಣುಗಳನ್ನು ಕೊಡುವದು, ಮೇಜವಾನಿಗಳನ್ನು ಏರ್ಪಡಿಸುವುದು, ಮೇಜವಾನಿಗಳಲ್ಲಿ ಶ್ರೇಷ್ಠ ಮದ್ಯಗಳನ್ನು ಹಂಚುವದೆಂದರೆ ಅಬ್ದುಲ್ ದಿಲೇರಖಾನನಿಗೆ ಅತ್ಯಂತ ಖುಷಿ.

ಅಬ್ದುಲ್ ದಿಲೇರಖಾನನು ರಾಜ್ಯದ ಎಲ್ಲ ವ್ಯವಸ್ಥೆಯನ್ನು ಪೂರ್ತಿಗೊಳಿಸಿ, ಮುಂಬೈ ಗವರ್ನರರಿಗೆ ಒಂದು ಪತ್ರವನ್ನು ಬರೆದು, ತನ್ನ ರಾಜ್ಯಕ್ಕೆ ಕಂದಾಯ, ದಿವಾಣಿ, ಮತ್ತು ಫೌಜದಾರಾ ಹಕ್ಕುಗಳನ್ನು ತಾನೇ ಚಲಾಯಿಸುವಂತೆ ಅಧಿಕಾರವನ್ನೀಯಬೇಕೆಂದು ಕೇಳಿಕೊಂಡನು. ಈ ಹಿಂದೆ ಕೆಲ ಸ್ವಾಯತ್ತ ಅಧಿಕಾರಗಳನ್ನು ಗವ್ಹರ್ನರು ಅಬ್ದುಲ ಮುನವರಖಾನನಿಗೆ ಕೊಟ್ಟಿದ್ದರು. ಈಗ ಅಬ್ದುಲ್ ದಿಲೇರಖಾನನಿಗೆ ಕಂಪನಿ ಸರಕಾರದ ಕಡೆಯಿಂದ ತಮ್ಮ ಸಂಸ್ಥಾನಕ್ಕೆ ಯಾವ ಯಾವ ಸ್ವಾಯತ್ತ ಅಧಿಕಾರಿಗಳನ್ನು ಕೊಡಲಾಗಿದೆಯೆಂಬುದರ ಸ್ಪಷ್ಟೀಕರಣವು ಬೇಕಿತ್ತು. ಅಬ್ದುಲ್ ದಿಲೇರಖಾನನ ಪತ್ರವನ್ನುನೋಡಿ ಮುಂಬೈ ಗವ್ಹರ್ನರರು ಮರಾಠಿ ಭಾಷೆಯಲ್ಲಿ ಒಂದು ಆಜ್ಞೆಯನ್ನು ಪ್ರಕಟಿಸಿದರು.

"ಸಂಸ್ಥಾನಗಳ ವಿಷಯವನ್ನು ನೋಡಿಕೊಳ್ಳುವ ಮತ್ತು ಸರಕಾರದ ಕಾರ್ಯದರ್ಶಿ ಹೆನ್ರಿ ಹರ್ಬರ್ಟರು ತಿಳಿಸುವುದೇನೆಂದರೆ, ಸಂಸ್ಥಾನದ ಪ್ರಜೆಗಳ ಸಂರಕ್ಷಣೆಗಾಗಿ ನಿಮಗೆ ಎಲ್ಲ ಅಧಿಕಾರಗಳನ್ನು ಕೊಡಬೇಕೆಂದು ಕೇಳಿದ್ದರಿಂದ, ಮಂತ್ರಿ ಮಂಡಲದ ಸಹಮತದೊಂದಿಗೆ, ನೀವು ಸಮರ್ಥರು ಹಾಗೂ ಯೋಗ್ಯರೂ ಇದ್ದುದರಿಂದ, ನಿಮ್ಮ ರಾಜ್ಯದಲ್ಲಿ ನಿಮಗೆ ಕಂದಾಯ, ದಿವಾಣಿ, ಫೌಜದಾರೀ ಅಧಿಕಾರಗಳನ್ನು ಚಲಾಯಿಸಲು ಗವ್ಹರ್ನರರು ಅಧಿಕಾರವನ್ನು ನೀಡಿದ್ದಾರೆ" ಎಂದು ಅದರಲ್ಲಿ ತಿಳಿಸಲಾಗಿತ್ತು.

ಈ ಆಜ್ಞೆಯನ್ನು ನೋಡಿ ಅಬ್ದುಲ್ ದಿಲೇರಖಾನನಿಗೆ ಅತ್ಯಂತ ಸಂತೋಷವಾಯಿತು. ಇಲ್ಲಿಯವರೆಗೂ ಈ ಎಲ್ಲ ಅಧಿಕಾರಗಳನ್ನು ಕಂಪನಿ ಸರಕಾರದವರೇ ಇಟ್ಟುಕೊಂಡಿದ್ದರು. ಈಗ ಈ ಅಧಿಕಾರಗಳನ್ನು ಚಲಾಯಿಸುವ ಹಕ್ಕು ನವಾಬನಿಗೆ ಬಂದಂತಾಯಿತು. ಮುಂದೆ ಧಾರವಾಡದ ಕಲೆಕ್ಟರ ಥಾಮಸ್ ಹಾರ್ವೇ ಬೇಬರನು ವಿಶ್ರಾಂತಿಗೆಂದು ಉದಕಮಂಡಲಕ್ಕೆ ಹೊರಟಿದ್ದನು. ಅವನಿಗೆ ಸವಣೂರ ಮೇಲಿಂದ ಹಾಯ್ದು ಹೋಗಬೇಕೆನಿಸಿತು. ಈ ವಿಷಯವನ್ನು ಅಬ್ದುಲ್ ದಿಲೇರಖಾನನಿಗೆ ತಿಳಿಸಿದಾಗ ಅವನಿಗೆ ಸಂತೋಷವಾಯಿತು.

ಬೇಬರ ಹೇಳಿಕಳಿಸಿದಂತೆ ಸವಣೂರಿಗೆ ಬಂದನು. ಅವನಿಗೆ ಮಂಗಳವಾರಪೇಟೆಯಲ್ಲಿ ಇಳಿಯಲು ಡೇರೆ ಹಾಕಿಸಿದ್ದನು. ಬೇಬರನು ನವಾಬನ ಅರಮನೆಗೆ ಬಂದು ರಾಜಪರಿವಾರದವರ ಯೋಗಕ್ಷೇಮವನ್ನು ವಿಚಾರಿಸಿ, ಸಂಸ್ಥಾನದ ದಿವಾಣರ ಕಛೇರಿಗೆ ಭೆಟ್ಟಿಯಿತ್ತು, ತನಗಾದ ಸಂತೋಷವನ್ನು ವ್ಯಕ್ತಪಡಿಸಿದನು. ನವಾಬನು ಅವನಿಗೆ ಇಲ್ಲಿ ಅತಿಥ್ಯವನ್ನು ನೀಡಿ, ಎರಡು ದಿವಸ ಇದ್ದು ಹೋಗಬೇಕೆಂದು ಬೇಡಿಕೊಂಡನು. ಆದರೆ ತನಗೆ ದೇಹಾರೋಗ್ಯವು ಸರಿಯಿಲ್ಲವೆಂಬ ನೆಪ ಹೇಳಿ, ನವಾಬನ ಭರ್ಜರಿ ಮೇಜವಾನಿಯನ್ನು ಸ್ವೀಕರಿಸಿ ಮುಂದೆ ಪ್ರಯಾಣವನ್ನು ಬೆಳೆಸಿದನು.

ಇದೇ ಸಮಯಕ್ಕೆ ಅಥವಾ ಇದರ ಸಮೀಪಕಾಲದಲ್ಲಿ ಜಾನ ಆಂಡ್ರ್ಯೂ ಡನ್‌ಲಪನು ವರ್ಗವಾಗಿ ಧಾರವಾಡಕ್ಕೆ ಹೊಸ ಕಲೆಕ್ಟರನೆಂದು ಬಂದನು. ಜಮಾಬಂದಿ ಕೆಲಸಕ್ಕೆಂದು ಅವನು ಒಮ್ಮೆ ಹಾನಗಲ್ಲಿನಲ್ಲಿ ವಾಸ್ತವ್ಯ ಮಾಡಿದನು. (ಇಲ್ಲಿ ಇಸ್ವಿಗಳ ಬಗ್ಗೆ ಸ್ವಲ್ಪ ತಾಕಲಾಟವಿದೆ. ಯಾವ ನವಾಬರ ಕಾಲಕ್ಕೆ ಯಾವ ಯಾವ ದಿವಾಣರು ಇದ್ದರೆಂದು ಬೇರೆ ಮೂಲಗಳಲ್ಲಿ ನೋಡಿದರೆ ಈ ಇಸ್ವಿಗಳು ಹೊಂದುವದಿಲ್ಲ. ಸಾಧ್ಯವಿದ್ದಷ್ಟು ಇಸ್ವಿಗಳನ್ನು ಹೊಂದಿಸಲು ಪ್ರಯತ್ನಿಸಲಾಗಿದೆ. ಕೆಲ ಇಸ್ವಿಗಳು ತಪ್ಪಾಗಿರುವ ಸಂಭವವೂ ಇದೆ).

ನವಾಬ ದಿಲೇರಖಾನನು ಚೋಬದಾರನನ್ನು ಕಳಿಸಿ ಡನ್‌ಲಪನ ಅನುಮತಿಯಿಂದ ಹಾನಗಲ್ಲಿಗೆ ಹೋದನು. ಹಾನಗಲ್ಲಿನಲ್ಲಿ ಆನೆಯನ್ನೇರಿ ವೈಭವದಿಂದ ಬರುವ ದಿಲೇರಖಾನನ್ನು ನೋಡಲು ಡನ್‌ಲಪನು ಬೀದಿಗೆ ಬಂದನು. ಇಬ್ಬರೂ ಭೆಟ್ಟಿಯಾಗಿ ಕ್ಷೇಮಸಮಾಚಾರದ ಮಾತುಗಳನ್ನಾಡಿದರು. ನಂತರ ಅಬ್ದುಲ್ ದಿಲೇರಖಾನನಿಗೆ "ಹೊನ್ನಾವರ ಬಂದರುವ ಸಮೀಪ ಜಗತ್ಪ್ರಸಿದ್ಧ ಜೋಗ ಜಲಪಾತವಿದೆ. ನೀವು ಅದನ್ನು ಖಂಡಿತ ನೋಡಬೇಕು" ಎಂದು ಹೇಳಿ ರಹದಾರಿಯ ಅನುಮತಿಯನ್ನಿತ್ತು ದಿಲೇರಖಾನನನ್ನು ಜೋಗಕ್ಕೆ ಕಳಿಸಿದನು. ಜೋಗಕ್ಕೆ ಹೋಗುವ ಮೊದಲು ಅಬ್ದುಲ್ ದಿಲೇರಖಾನನು ಡನ್‌ಲಪನೊಂದಿಗೆ ಹುಲಿ ಬೇಟೆಯಾಡಿದನು. ಹುಲಿಯನ್ನು ಎಬ್ಬಿಸಲು ಹಲಗೆಗಳಲ್ಲದೆ ಕವಣೆ ಕಲ್ಲುಗಳನ್ನು ಬೀಸಿದರು.

ಕಲೆಕ್ಟರ ಡನ್‌ಲಪನು ಫೆಬ್ರವರಿ ೨, ೧೮೩೬ ರಂದು ಸಿದ್ದಾಪುರದ ತಹಸೀಲದಾರರಿಗೆ ಒಂದು ಪತ್ರ ಬರೆದು ಎಲ್ಲ ವ್ಯವಸ್ಥೆ ಮಾಡಿ ಜೋಗಕ್ಕೆ ಕಳಿಸಿದನು. ನವಾಬನು ಅಲ್ಲಿಗೆ ಹೋಗಿ ನಿಸರ್ಗದ ವೈಚಿತ್ರ್ಯವನ್ನು ನೋಡಿ ಬೆರಗಾದನು. ಕೆಲ ಘಂಟೆಗಳ ಕಾಲ ಜಲಪಾತದ ಸೌಂದರ್ಯವನ್ನು ಸವಿದು ಸಿದ್ದಾಪುರಕ್ಕೆ ಬಂದು, ನಂತರ ರಾಜಧಾನಿಗೆ ಮರಳಿದನು. ಹದಿನೈದು ದಿವಸಗಳ ಕಾಲ ನವಾಬನು ಹೊರಗೆ ಹೋಗಿದ್ದನೋ ಇಲ್ಲವೋ ಖಾಂಜಾದ ಮನೆತನದ ಕೆಲವರು ಸವಣೂರಲ್ಲಿ ಅಲ್ಲಲ್ಲಿ ಗಲಭೆಗಳನ್ನು ನಡೆಸಿ, ಅಶಾಂತಿಯನ್ನು ಹರಡಹತ್ತಿದ್ದರು.

ಅಬ್ದುಲ್ ದಿಲೇರಖಾನನು ಒಂದು ಪತ್ರ ಬರೆದು ದಿವಾಣ ಕೃಷ್ಣರಾಯರ ಮೂಲಕ ಡನ್‌ಲಪನಿಗೆ ಕಳಿಸಿದನು. ಕಲೆಕ್ಟರನು ಆ ಪತ್ರವನ್ನು ಓದಿ "ನಿಮ್ಮ ಪತ್ರ ಬಂದಿತು. ನಿಮ್ಮ ರಾಜಪರಿವಾರದ ಖಾಂಜಾದಾ ಮನೆತನದವರು ಅವರಿಗೆ ಕೊಡುತ್ತಿದ್ದ ಜೀವನಾಂಶವನ್ನು ತೆಗೆದುಕೊಂಡು, ಪುನಃ ಅವರು ರಾಜ್ಯದಲ್ಲಿ ಅಶಾಂತಿ, ಅಭದ್ರತೆಗಳನ್ನು ಹುಟ್ಟಿಸುತ್ತಿರುವುದನ್ನು ಕೇಳಿದೆ. ಅವರು ಇದೇ ರೀತಿ ತೊಂದರೆಗಳನ್ನು ಕೊಡುತ್ತ ಹೋದರೆ, ಅವರಿಗೆ ತಿಂಗಳು ತಿಂಗಳು ಸಲ್ಲುತ್ತಿರುವ ಹಣವನ್ನು ನಿಲ್ಲಿಸಬೇಕು" ಎಂದು ತಿಳಿಸಿದನು.

ನಂತರ ಜೂನ್ ೨೮, ೧೮೩೬ರಂದು ಮೇಲಿಂದ ಮೇಲೆ ದಂಗೆಯೇಳುತ್ತಿದ್ದ ಅಬ್ದುಲ್ ಚಮ್ಮಾಖಾನ್, ಅಬ್ದುಲ್ ಕರೀಮಖಾನ್, ಅಬ್ದುಲ್ ಶಮಶಾಖಾನ ಅವರಿಗೆ ಕಲೆಕ್ಟರನು ವೈಯಕ್ತಿಕ ಪತ್ರಗಳನ್ನು ಬರೆದು "ನೀವು ತಕ್ಷಣ ನಿಮ್ಮ ಕಾನೂನುಬಾಹಿರ ಚಟುವಟಿಕೆಗಳನ್ನು ನಿಲ್ಲಿಸಿ, ಅಬ್ದುಲ್ ದಿಲೇರಖಾನ ನವಾಬನಿಗೆ ಸಂಪೂರ್ಣ ಸಹಕಾರವನ್ನು ಕೊಡಿರಿ. ನೀವು ನಿಮ್ಮ ನಡುವಳಿಕೆಯನ್ನು ತಿದ್ದಿಕೊಂಡು ಸರಿಯಾಗಿ ವರ್ತಿಸುವವರೆಗೂ ನಿಮಗೆ ಸವಣೂರ ಖಜಾನೆಯಿಂದ ಸಲ್ಲುತ್ತಿರುವ ಮಾಸಿಕ ಜೀವನಾಂಶದ ಹಣವನ್ನು ತಕ್ಷಣ ನಿಲ್ಲಿಸಲಾಗುವುದು. ಮುಂಬೈ ಸರಕಾರವು ಈಗಾಗಲೇ ಇದಕ್ಕೆ ಅನುಮತಿಯನ್ನು ನೀಡಿದೆ. ನೀವು ಸರಿಯಾಗಿ ಅಬ್ದುಲ್ ದಿಲೇರಖಾನರೊಂದಿಗೆ ನಡೆದುಕೊಳ್ಳುವ ಬಗ್ಗೆ ನಂಬಿಕೆ ಬರುವಂತೆ ಮುಚ್ಚಳಿಕೆಯನ್ನು ಬರೆದು ಕೊಡಬೇಕು. ಜಾನ್ ಅಂಡ್ರ್ಯೂ ಡನ್‌ಲಫ್, ಕಲೆಕ್ಟರ್ ಮತ್ತು ಸಂಸ್ಥಾನಗಳ ಪೊಲಿಟಿಕಲ್ ಏಜೆಂಟ್, ಧಾರವಾಡ, ದಿನಾಂಕ:೨೮-೦೬-೧೮೩೬"ಎಂದು ಎಚ್ಚರಿಕೆ ನೀಡಿದನು. ಇದು ನವಾಬನ ಸಂಬಂಧಿಕರ ಮೇಲೆ ಪರಿಣಾಮ ಬೀರಿತು.

### ಖೊಟ್ಟಿ ಅಜ್ಞೆಯ ಸೃಷ್ಟಿ

ಅಬ್ದುಲ್ ದಿಲೇರಖಾನ ನವಾಬನು ಅಧಿಕಾರವನ್ನು ವಹಿಸಿಕೊಂಡ ಮೇಲೆ ಸವಣೂರು ಪ್ರಜೆಗಳಲ್ಲಿ ಸುಖಶಾಂತಿಗಳು ನೆಲೆಸಿದ್ದವು. ನವಾಬನು ದುಷ್ಟರನ್ನು, ಸಮಾಜ ಘಾತುಕರನ್ನು ಬಂಧಿಸಿ, ಸೆರೆಮನೆಯಲ್ಲಿ ಇಟ್ಟಿದ್ದನು. ಇದರಿಂದ ಸಾಮಾಜಿಕ ಸ್ವಾಸ್ಥ್ಯ ಸವಣೂರಲ್ಲಿ ನೆಲೆಸಿತ್ತು.

ಇದೇ ಸಮಯಕ್ಕೆ ಸರಕಾರೀ ಸುದ್ದಿಗಳ ವರದಿಯನ್ನು ಸಲ್ಲಿಸುತ್ತಿದ್ದ ಮಹಮ್ಮದ ಜಹಂಗೀರನು ಒಂದು ಖೊಟ್ಟಿ ಅಜ್ಞೆಯನ್ನು ಹುಟ್ಟು ಹಾಕಿ, ಅಬ್ದುಲ್ ದಿಲೇರಖಾನನನ್ನು ಗೊಂದಲದಲ್ಲಿ ಕೆಡವಿದನು. ಈ ಜಹಂಗೀರನು ಅತ್ಯಂತ ಕ್ಷುದ್ರ ಮನಸ್ಸಿನ ನೀಚ ಬುದ್ಧಿಯವನಿದ್ದನು. ಜನರನ್ನು ಮೋಸ ಮಾಡುವುದೇ ಇವನ ದುರುದ್ದೇಶವಾಗಿತ್ತು. ಇವನು ಎಷ್ಟು ಕೆಟ್ಟ ಮನುಷ್ಯನಿದ್ದನೆಂದರೆ ಪರ್ಶಿಯನ್ ಗಾದೆಯಂತೆ, 'ಮನ್ ಮೇ

ಬಿಸಿ, ಸೊ ಸೊಪ್ನೋಮೆ ದಿಸಿ' ಅಂದರೆ ಮನಸ್ಸಿನಲ್ಲಿ ತುಂಬಿಕೊಂಡಿದ್ದೇ ಕನಸಿನಲ್ಲಿ ಕಾಣುವಂತೆ ಅನ್ನುವ ಗಾದೆಯ ಮಾತು ಅವನ ವಿಷಯದಲ್ಲಿ ನಿಜವಾಗಿ ಪರಿಣಮಿಸಿತ್ತು. ಮಂದಿಗೆ ಅಸರಂತ ಮೋಸ ಮಾಡಲು ಹೋದರೆ ಅದು ಒಂದು ದಿವಸ ತನಗೇ ತಿರುಗುವದೆಂಬ ಮಾತನ್ನು ಹೇಳಲು ಒಂದು ಕತೆಯನ್ನು ಇತಿಹಾಸಕಾರನು ನಿರ್ಮಿಸಿದ್ದಾನೆ.

"ಮಹಮ್ಮದ್ ಜಹಂಗೀರನಿಗೆ ಒಂದು ದಿಸವ ರಾತ್ರಿಯಲ್ಲಿ ಕನಸು ಬಿದ್ದಿತು. ಆಕಾಶದಲ್ಲಿ ಅವನಿಗೆ ತೂತುಗಳು ಕಾಣಿಸಹತ್ತಿದವು. ಆಕಾಶವು ಜರಡಿಯಂತೆ ಛಿದ್ರಛಿದ್ರವಾಗಿ ಕಂಗೊಳಿಸಿತು. ಅದನ್ನು ನೋಡಿ ಆಶ್ಚರ್ಯಭರಿತನಾದ ಮಹಮ್ಮದ ಜಹಂಗೀರನು, ಎದುರಿಗೆ ಭೆಟ್ಟಿಯಾದ ವಿದೂಷಕನನ್ನು ನಿಲ್ಲಿಸಿ "ದೇವರು ಆಕಾಶದಲ್ಲಿ ಈ ಛಿದ್ರಗಳನ್ನು ಏಕೆ ಕೊರೆದಿದ್ದಾನೆ" ಎಂದು ಕೇಳಿದನು. ಆಗ ವಿದೂಷಕನು "ಒಂದೊಂದು ಛಿದ್ರದಿಂದ ದೇವರು ಪ್ರತಿಯೊಬ್ಬ ಮನುಷ್ಯನಿಗೆ ಆಹಾರವನ್ನು ಒದಗಿಸುತ್ತಾನೆ" ಎಂದು ಉತ್ತರಿಸಿದನು. ಮಹಮ್ಮದ ಜಹಂಗೀರನು "ಇದರಲ್ಲಿ ನನ್ನ ಛಿದ್ರ ಯಾವುದು?" ಎಂದನು. ವಿದೂಷಕನು "ಈ ಅಸಂಖ್ಯ ಛಿದ್ರಗಳಲ್ಲಿ ಯಾವುದು ಇರುವೆ ಕಣ್ಣಿಗಿಂತ ಸಣ್ಣದಿದೆಯೋ ಅದೇ ನಿನ್ನದು" ಎಂದನಂತೆ. ಅದನ್ನು ಕೇಳಿ ಮಹಮ್ಮದ ಜಹಂಗೀರನು ನನ್ನ ಬೆರಳನ್ನು ಈ ಛಿದ್ರದಲ್ಲಿ ಹಾಕಿ ದೊಡ್ಡದನ್ನು ಮಾಡಿದರೆ ನನಗೆ ಹೆಚ್ಚು ಆಹಾರ ದೊರೆಯುವುದು ಎಂಬ ದುರ್ಬುದ್ಧಿಯಿಂದ ಆ ಛಿದ್ರದಲ್ಲಿ ತನ್ನ ಬೆರಳನ್ನು ಹಾಕಲು ಯತ್ನಿಸಿದನು. ಅಷ್ಟರಲ್ಲಿ ಅವನಿಗೆ ಎಚ್ಚರಿಕೆಯಾಯಿತು. ಆಗ ಅವನ ಬೆರಳು ಅವನ ಕುಂಡಿಯಲ್ಲಿ ಸಿಕ್ಕಿತಂತೆ". ದೇವರನ್ನು ವಂಚಿಸಲು ಹೋದ ಅವನಿಗೆ ಶಿಕ್ಷೆಯಾಯಿತು.

ದಿಲೇರಜಂಗ ಕಾವ್ಯದ ಇತಿಹಾಸಕಾರರು ಮಹಮ್ಮದ ಜಹಂಗೀರನು ಅದೆಷ್ಟು ಆಶೆಬುರುಕ ನಿದ್ದನೆಂದು ಹೇಳಲು ಇನ್ನೊಂದು ಕಥೆಯನ್ನು ಕೂಡ ಹೇಳಿದ್ದಾನೆ:

"ಒಂದೂರಲ್ಲಿ ಬಾಲವಿಲ್ಲದ ಕತ್ತೆಯಿತ್ತು. ಆ ಕತ್ತೆಗೆ ತನಗೆ ಬಾಲವಿಲ್ಲವೆಂದು ತಿಳಿದೊಡನೆ ಅದು ವ್ಯಥೆಪಡಹತ್ತಿತ್ತು. ಅದು ಒಂದು ದಿವಸ ಯಾರದೋ ಹೊಲವನ್ನು ಹೊಕ್ಕು ಮೇಯಹತ್ತಿತು. ಆ ಕತ್ತೆಗೆ ಹೊಲದಲ್ಲಿ ಅದರ ಒಡೆಯನಿರುವನೆಂಬ ಕಲ್ಪನೆ ಇರಲಿಲ್ಲ. ಅದು ಮೇಯುತ್ತ ನಡೆದಂತೆ, ಹೊಲದ ಯಜಮಾನನು ಓಡಿ ಬಂದು ಕತ್ತೆಯನ್ನು ಹಿಡಿದು ಅದರ ಎರಡೂ ಕಿವಿಗಳನ್ನು ಕಡಿದು ಹಾಕಿ ಹೊಲದಿಂದ ಹೊರದೂಡಿದನು. ಬಾಲ ಬೇಕು ಎಂದು ಆಶಿಸುತ್ತಿದ್ದ ಕತ್ತೆಗೆ ಈಗ ಕಿವಿಗಳು ಕೂಡ ಕಳೆದುಹೋದವು". ಇದೇ ರೀತಿ ಮಹಮ್ಮದ ಜಹಂಗೀರನಿಗೆ ಆಯಿತೆಂದು ಇತಿಹಾಸಕಾರರು ಸಾದೃಶ್ಯವನ್ನು ಕೊಡುತ್ತಾನೆ.

ಈ ಮಹಮ್ಮದ ಜಹಂಗೀರನು, ಜಾನ್ ಆಂಡ್ರ್ಯೂ ಡನ್‌ಲಪ್ಪನು ನವಾಬ ಅಬ್ದುಲ್

ಮಜೀದಖಾನನಿಗೆ ಬರೆದಂತೆ ಭಾಸವಾಗುವ ಒಂದು ನಕಲಿ ಪತ್ರವನ್ನು ಸೃಷ್ಟಿಸಿ, ಆ ಪತ್ರದ ಮೇಲೆ ಕಲೆಕ್ಟರ ಡನ್‌ಲಪ್‌ನ ಖೊಟ್ಟೆ ಸಹಿ ಮಾಡಿ, ಒಬ್ಬ ಸೇವಕನಿಂದ ಈ ಪತ್ರವನ್ನು ನವಾಬ ದಿಲೇರಖಾನನಿಗೆ ಕಳಿಸಿದನು. ಈ ಪತ್ರದಲ್ಲಿ "ನಿಮ್ಮ ದರ್ಬಾರದ ವರದಿಗಾರನಲ್ಲಿ ನೀವು ಅನ್ಯಥಾ ತಪ್ಪನ್ನು ಹುಡುಕಬಾರದು. ಅವನ ಬಗ್ಗೆ ಮೇಲಾಧಿಕಾರಿಗಳಿಗೆ ಬರೆಯುವ ಮುನ್ನ ನೀವು ಅತ್ಯಂತ ಜಾಗರೂಕರಾಗಿರಬೇಕು. ಅವನ ಸ್ಥಾನಮಾನಗಳನ್ನು ಎತ್ತರಿಸಲು ಈ ಪತ್ರದಲ್ಲಿ ಬರೆದಂತೆ ನೀವು ಶಿಫಾರಸ್ಸು ಮಾಡಿ ನಮಗೆ ಕಳಿಸಬೇಕು"ಎಂದು ಬರೆದಿತ್ತು.

ಅಬ್ದುಲ್ ದಿಲೇರಖಾನನು ಮೊದಲು ಈ ಪತ್ರವು ಜಾನ್ ಡನ್‌ಲಪ್‌ನಿಂದಲೇ ಬಂದಿದೆಯೆಂದು ಭಾವಿಸಿದನು. ನಂತರ, ಪತ್ರವನ್ನು ಪುನಃ ಪುನಃ ಓದಿ, ಕಲೆಕ್ಟರಂತಹ ವ್ಯಕ್ತಿ ತನಗೆ ಈ ರೀತಿ ಬರೆಯುವ ಸಾಧ್ಯತೆಗಳಿಲ್ಲವೆಂದು ಯೋಚಿಸಿ, ನವಾಬನು ಆ ಪತ್ರವನ್ನು ತನ್ನ ಬಳಿ ಇಟ್ಟುಕೊಂಡು, ಆ ಸೇವಕನನ್ನು ಮರಳಿ ಕಳಿಸಿದನು. ಜಹಂಗೀರನು ತನ್ನ ಸೇವಕನಿಗೆ ಆ ಪತ್ರವನ್ನು ತೋರಿಸಿ ಅದನ್ನು ಮರಳಿ ತರಬೇಕೆಂದು ಹೇಳಿಕಳಿಸಿದ್ದನು. ಆದರೆ, ನವಾಬನು "ನನ್ನ ಗೌರವವನ್ನರಿತ ಕಲೆಕ್ಟರನು ನನಗೆ ಈ ರೀತಿ ಛೀಮಾರಿ ಹಾಕಿ ಪತ್ರ ಬರೆಯುವ ಸಾಧ್ಯತೆ ಇಲ್ಲ. ಈ ಪತ್ರವು ಅತ್ಯಂತ ವಿಲಕ್ಷಣವಿದ್ದುದರಿಂದ, ಈ ಪತ್ರವನ್ನು ಡನ್‌ಲಪ್‌ನ ಗಮನಕ್ಕೆ ತರಬೇಕು"ಎಂದು ಅನ್ನುತ್ತ ಸೇವಕನನ್ನು ಬರಿಗೈಯಿಂದ ಮರಳಿ ಕಳಿಸಿಬಿಟ್ಟನು. ಆ ಮೇಲೆ ನವಾಬನು ಒಂದು ಪತ್ರ ಬರೆದು, ಈ ನಕಲಿ ಪತ್ರವನ್ನು ಅದರ ಜೊತೆ ಚೀಲದಲ್ಲಿರಿಸಿ ಧಾರವಾಡದ ಕಲೆಕ್ಟರನಿಗೆ ಕಳಿಸಿದನು. ಕಲೆಕ್ಟರ್ ಡನ್‌ಲಪ್‌ನು ಈ ಪತ್ರವನ್ನು ನೋಡಿ, ಮೊದಲು ತನ್ನಿಂದೇನಾದರೂ ಇಂತಹ ಪತ್ರ ಸವಣೂರಿಗೆ ಹೋಗಿದೆಯೇ ಎಂದು ತನ್ನ ಸುರಮುಸ್ರ ಹುಸೇನ ಮುನಸಿ ಫಾರ್ಸಿಗೆ ಕೇಳಿದನು. ಆದರೆ ಮುನಸಿ ಈ ಪತ್ರವು ನಕಲಿ ಪತ್ರವೆಂದು ಹೇಳಿದನು. ಕಲೆಕ್ಟರ್ ಡನ್‌ಲಪ್‌ನು ನವಾಬ ದಿಲೇರಖಾನಿಗೆ ಉತ್ತರ ಬರೆದು "ಇದರಲ್ಲಿ ಮೋಸವಿದೆ. ಅದಕ್ಕೆ ನಿಮ್ಮ ಫಡ್ನವೀಸ್, ದಿವಾಣರಾದ ಮಹಮ್ಮದ ಗೌಸಖಾನ್ ಮತ್ತು ಮುನಸಿ ಮೀರ್ ಸೈಫುಲ್ಲಾ ಅವರನ್ನು ವಿಚಾರಣೆಗೆ ಧಾರವಾಡಕ್ಕೆ ಕಳಿಸಬೇಕು"ಎಂದು ತಿಳಿಸಿದನು. ಡನ್‌ಲಪ್‌ನು ಸವಣೂರಿನ ಅಧಿಕಾರಿಗಳ ಹೇಳಿಕೆಗಳನ್ನು ದಾಖಲಿಸಿ, ಈ ನಕಲಿ ಪತ್ರವನ್ನು ಧಾರವಾಡ ಜಿಲ್ಲಾ ನ್ಯಾಯಾಧೀಶರಾದ ಜೇಮ್ಸ್ ಬ್ರೂಸ್ ಶ್ಯಾಮ್‌ಸನ್ ಅವರಿಗೆ ಕಳಿಸಿದನು. ಜೇಮ್ಸ್ ಬ್ರೂಸರು ವಕೀಲರನ್ನು, ಸಾಕ್ಷಿ ಗಳನ್ನು, ಸವಣೂರಿನ ಅಧಿಕಾರಿಗಳನ್ನು ನ್ಯಾಯಾಲಯಕ್ಕೆ ಕರೆಸಿದರು. ಎಲ್ಲ ದಾಖಲೆ ಮತ್ತು ಕಾಗದ ಪತ್ರಗಳ ಆಧಾರದಿಂದ, ಈ ಖೊಟ್ಟಿ ಪತ್ರವನ್ನು ಮಹಮ್ಮದ ಜಹಂಗೀರನೇ ಸೃಷ್ಟಿಸಿರುವನೆಂಬ ನಿರ್ಣಯಕ್ಕೆ ಬಂದು, ಅವನಿಗೆ ಮೂರು ವರುಷ ಕಠಿಣ ಶಿಕ್ಷೆಯನ್ನು ವಿಧಿಸಿದನು. ಶಿಕ್ಷೆಯ ಜೊತೆ ಅವನಿಗೆ ಒಂದು ಸಾವಿರ ರೂಪಾಯಿ ದಂಡವನ್ನು ವಿಧಿಸಿ, ಅದನ್ನು ಕೊಡಲು

ವಿಫಲನಾದರೆ ಅವನು ಮತ್ತೆ ಎರಡು ವರುಷ ಕಠಿಣ ಶಿಕ್ಷೆಯನ್ನು ಅನುಭವಿಸಬೇಕೆಂದು ತನ್ನ ನಿರ್ಣಯದಲ್ಲಿ ತಿಳಿಸಿದನು.

ಡನ್‌ಲಪ್ ಕಲೆಕ್ಟರನು ವಿವರವಾಗಿ ಪತ್ರ ಬರೆದು, ನ್ಯಾಯಾಲಯದ ನಿರ್ಣಯವನ್ನು ತಿಳಿಸಿ, ಜಹಂಗೀರನನ್ನು ಕತ್ತೆಯ ಮೇಲೆ ಕೂಡಿಸಿ ಮೆರೆಸಬೇಕೆಂದು ಸೂಚಿಸಿದನು. ಧಾರವಾಡ ಕಲೆಕ್ಟರನು ನವಾಬ ಅಬ್ದುಲ್ ದಿಲೇರಖಾನನಿಗೆ ಪತ್ರವನ್ನು ಬರೆದದ್ದು ೨೨ ಜುಲೈ ೧೮೩೭.

ಸವಣೂರ ಮೇಲಿಂದ ಹಾಯ್ದು ದೇಹಾರೋಗ್ಯವನ್ನು ಸುಧಾರಿಸಿಕೊಳ್ಳಲು ಉದಕಮಂಡಲಕ್ಕೆ ಹೋಗಿದ್ದ ಹಾರ್ವೇಥಾಮಸ್ ಬೇಬರನು ತನ್ನ ರಜೆ ಮುಗಿಯುವ ಮುನ್ನವೇ ಪುನಃ ಧಾರವಾಡಕ್ಕೆ ಬಂದನು. ಈಗ ಅವನ ಆರೋಗ್ಯವು ಸುಧಾರಿಸಿತ್ತು. ಬೇಬರ ಧಾರವಾಡ ಕಲೆಕ್ಟರನ ಅಧಿಕಾರವನ್ನು ವಹಿಸಿಕೊಂಡೊಡನೆ, ಜೇಮ್ಸ್ ಡನ್‌ಲಪ್‌ನು ಬೆಳಗಾವಿ ಕಲೆಕ್ಟರನೆಂದು ನಿಯಮಿಸಲ್ಪಟ್ಟನು. ಫೆಬ್ರವರಿ ೧೧, ೧೮೩೭ರಂದು ಮುಂಬೈ ಗವ್ಹರ್ನರರ ಕಾರ್ಯದರ್ಶಿಯು ನವಾಬ ದಿಲೇರಖಾನನಿಗೆ ಒಂದು ಪತ್ರವನ್ನು ಕಳಿಸಿ, ಸವಣೂರು ರಾಜ್ಯದಲ್ಲಿಯ ಅಕಬರನವೀಸ (ಪತ್ರ ಬರೆಯುವ ಅಧಿಕಾರಿ) ಹುದ್ದೆಯನ್ನು ರದ್ದು ಮಾಡಿರುವುದಾಗಿ ತಿಳಿಸಿದನು. ಕಾರಣ, ಜಹಂಗೀರನು ಖೊಟ್ಟಿ ಪತ್ರವನ್ನು ಬರೆದು ನವಾಬನನ್ನು ಪೇಚಿನಲ್ಲಿ ಸಿಲುಕಿಸಿದ್ದನ್ನು ಸರಕಾರವು ಗಮನಿಸಿತ್ತು. ಇದರ ಹಿಂದೆ ಬಸವನಕೊಪ್ಪದ ರಾಜಪರಿವಾರದವರ ಕೈವಾಡವಿತ್ತು.

ಸವಣೂರಲ್ಲಿ ರಾಜಪರಿವಾರದ ಖಾಂಜಾದಾ ಜನರು ಒಂದಲ್ಲ ಒಂದು ರೀತಿಯಲ್ಲಿ ರಾಜ್ಯದಲ್ಲಿ ಅಶಾಂತಿಯನ್ನು ನಿರ್ಮಾಣ ಮಾಡುತ್ತಲೇ ಇದ್ದರು. ಖೈರಖಾನನ ಕಾಲದಿಂದಲೇ ಈ ಖಾಂಜಾದಾ ಜನರು ಸಿಂಹಾಸನದಲ್ಲಿ ವಿರಾಜಮಾನನಾದ ನವಾಬನಿಗೆ ಕಿರುಕುಳವನ್ನು ಕೊಡುತ್ತಿದ್ದರು. ಈಗ ಪುನಃ ಅರಾಜಕತೆಯನ್ನು ಬಿತ್ತಹತ್ತಿದರು. ಇದನ್ನು ನೋಡಿ ಧಾರವಾಡ ಕಲೆಕ್ಟರ್ ಜೇಮ್ಸ್ ಹಾರ್ವೇ ಬೇಬರನ್ನು ನವಾಬನಿಗೆ ಒಂದು ಪತ್ರವನ್ನು ಬರೆದು "ನಿಮಗೆ ನಾವು ದಿವಾಣಿ ಮತ್ತು ಫೌಜಧಾರಿ ನ್ಯಾಯಾಧೀಕರಣದ ಅಧಿಕಾರಗಳನ್ನು ಕೊಟ್ಟಿದ್ದೇವೆ. ಅದಕ್ಕೆ ನೀವು ಈ ಖಾಂಜಾದೇ ಜನರನ್ನಾಗಲೀ ಅಥವಾ ಇತರ ಸಮಾಜ ವಿರೋಧಕರನ್ನಾಗಲೀ ಬಂಧಿಸಿ, ಸರಿಯಾದ ಶಿಕ್ಷೆಯನ್ನೀಯಬೇಕು. ನಮ್ಮಿಂದ ಸಹಾಯ ಬೇಕಿದ್ದರೆ ನಾವು ಒದಗಿಸುತ್ತೇವೆ" ಎಂದು ಬರೆದನು. ಮುಂದೆ ೧೮೩೮ರಲ್ಲಿ ಜೇಮ್ಸ್ ಬೇಬರ ಇಂಗ್ಲೆಂಡಕ್ಕೆ ಹೋದೊಡನೆ ಅವನ ಸ್ಥಾನದಲ್ಲಿ ಎಡ್ವರ್ಡ್ ಹೋಮ ಬೆಂಜಾಮಿನ್ ಮಿಲ್ ಅನ್ನುವವನು ಧಾರವಾಡದ ಕಲೆಕ್ಟರನಾಗಿ ಬಂದನು. ಇವನು ಮುಂದೆ ಮೂರು ವರುಷ ಧಾರವಾಡದಲ್ಲಿ ಇದ್ದನೆಂದು ಕಾಣುತ್ತದೆ.

ಹೊಸ ಕಲೆಕ್ಟರ್ ಎಡ್ವರ್ಡ್ ಹೋಮ ಬೇಂಜಾಮಿನ್ ಮಿಲ್‌ನು ಜಮಾಬಂದಿ

ಕೆಲಸಕ್ಕೆಂದು ಬಂಕಾಪುರ ತಾಲ್ಲೂಕಿನ ಸಿಗ್ಗಾಂವಿಗೆ ಬಂದನು. ಆಗ ಅಬ್ದುಲ್ ದಿಲೇರಖಾನ ನವಾಬನು ಅವನ ಪೂರ್ವಭಾವಿ ಅನುಮತಿಯೊಂದಿಗೆ ಅವನ ಭೇಟಿಗೆ ಸಿಗ್ಗಾಂವಿಗೆ ಹೋಗುವ ಪೂರ್ವದಲ್ಲಿಯೇ ಅವನ ಸೇವಕರು ಅಲ್ಲಿ ಅವನಿಗಾಗಿ ಡೇರೆ ಹೂಡಿದ್ದರು. ಕಲೆಕ್ಟರನನ್ನು ತನ್ನ ಡೇರೆಗೆ ಬರಮಾಡಿಕೊಳ್ಳುವ ಪೂರ್ವದಲ್ಲಿ ಅಲ್ಲಿ ಎಲ್ಲ ವ್ಯವಸ್ಥೆಗಳು ಕಲೆಕ್ಟರ್ ದರ್ಜೆಗೆ ಸರಿಯಾಗಿ ಇವೆಯೋ ಇಲ್ಲವೋ ಎಂಬುದನ್ನು ತೋರಿಸಲು ಅವನು ಕಲೆಕ್ಟರನ ಮುನಸಿ ರಾಮರಾಯನನ್ನು ಕರೆದು ತೋರಿಸಿದನು.

ವಿಶೇಷವಾಗಿ ಕಸೂತಿ ತೆಗೆದ ವಸ್ತ್ರಗಳಿಂದ, ರೇಶಿಮೇ ಜರೀ ಗೊಂಡೆಗಳಿಂದ ಕೂಡಿದ ಖಲಂದರ ಅನ್ನುವ ಡೇರೆಯು ನಿರ್ಮಾಣವಾಗಿತ್ತು. ನೆಲಕ್ಕೆಲ್ಲ ಗಾದೆಗಳನ್ನು ಹಾಕಲಾಗಿತ್ತು. ಒಳಗೆ ಕುರ್ಚಿಗಳನ್ನು ಹಾಕಿ, ಕನ್ನಡಿಗಳನ್ನಿಟ್ಟು, ಪುಸ್ತಕಗಳ ಸೆಲ್ಫುಗಳ ಮೇಲೆ ರೇಶಿಮೆ ವಸ್ತ್ರವನ್ನು ಹೊದಿಸಿ ಅತ್ಯಂತ ಆಕರ್ಷವಾಗಿ ಮಾಡಲಾಗಿತ್ತು.

ನವಾಬ ದಿಲೇರಖಾನನು ಮೊದಲು ಕಲೆಕ್ಟರನನ್ನು ಭೇಟಿಯಾಗಿ ನಂತರ ಅವನನ್ನು ತನ್ನ ಡೇರೆಗೆ ಆಹ್ವಾನಿಸಿದನು. ನವಾಬನು ಅಂಬಾರಿಯಿದ್ದ ಆನೆಯನ್ನು ಕಲೆಕ್ಟರನಿಗೆ ಕಳಿಸಿದನು. ಕಲೆಕ್ಟರ್ ಮಿಲ್‌ನು ನವಾಬನ ವೈಭವೋಪೇತ ಡೇರೆಯನ್ನು ನೋಡಿ ಆಶ್ಚರ್ಯಚಕಿತನಾದನು. ಇಷ್ಟು ಸ್ವಚ್ಛ, ಸುಂದರ, ವೈಭವಯುತ ಡೇರೆ ಅವನ ಕಣ್ಣಿಗೆ ಇಲ್ಲಿಯವರೆಗೆ ಬಿದ್ದಿರಲಿಲ್ಲ. ಕಲೆಕ್ಟರನು ಬಂದು ನವಾಬನ ಆದರಾತಿಥ್ಯವನ್ನು ಸ್ವೀಕರಿಸಿ, ಅತ್ತರ, ಗುಲಾಬ ಹಚ್ಚಿಸಿಕೊಂಡು ಖುಷಿಪಟ್ಟು ಹೋದನು. ನಂತರ ನವಾಬನು ಮರಳಿ ರಾಜಧಾನಿ ಸವಣೂರಿಗೆ ಬಂದನು.

ಅಬ್ದುಲ್ ದಿಲೇರಖಾನನು ಒಳ್ಳೇ ಶಿಕ್ಷಣವನ್ನು ಪಡೆದಿದ್ದರಿಂದ ಹಾಗೂ ಪುಣೆಯ ಸಾಂಸ್ಕೃತಿಕ ವಾತಾವರಣದಲ್ಲಿ ಆರು ವರ್ಷ ಬೆಳೆದಿದ್ದರಿಂದ, ಕಂಪನಿ ಸರಕಾರದೊಡನೆ ಪತ್ರ ವ್ಯವಹಾರ ಮಾಡುವಾಗ ಹಾಗೂ ರಾಜ್ಯದ ಆಡಳಿತೆಯನ್ನು ನಡೆಸುವಾಗ ಅತ್ಯಂತ ಬುದ್ಧಿವಂತಿಕೆಯಿಂದ ವರ್ತಿಸುತ್ತಿದ್ದನು. ಸರಕಾರದೊಡನೆ ಇವನು ಮಾಡಿದ ಪತ್ರ ವ್ಯವಹಾರವನ್ನು ನೋಡಿ ಮುಂಬೈ ಗವ್ಹರ್ನರರು ತನ್ನ ಮಂತ್ರಿಮಂಡಲದ ಸಹಮತದೊಂದಿಗೆ ನವಾಬ ದಿಲೇರಜಂಗನಿಗೆ, "ನೀವು ನಿಮ್ಮ ರಾಜ್ಯದ ಬಗ್ಗೆ ನಮ್ಮ ಸರಕಾರದೊಡನೆ ಮಾಡುವ ಪತ್ರ ವ್ಯವಹಾರವನ್ನು ನೋಡಿ ನಮಗೆ ಅತ್ಯಂತ ಸಮಾಧಾನವಾಗಿದೆ. ನಿಮ್ಮ ಪತ್ರಗಳಿಗೆ ನಾವು ಯಾವಾಗಲೂ ಗೌರವವನ್ನೀಯುತ್ತೇವೆ" ಎಂದು ಪ್ರಶಂಸಿಸಿ ೧೮೪೧ರಲ್ಲಿ ಸವಣೂರಿಗೆ ಒಂದು ಪ್ರಶಂಸಾಪರ ಪತ್ರವನ್ನು ಕಳಿಸಿದರು. ದಿಲೇರಖಾನರಿಗೆ ಅದನ್ನು ನೋಡಿ ಸಂತೋಷವಾಯಿತು.

## ನರಸಿಂಗರಾವನ ಪ್ರಕರಣ

ಕಾಸೀ ನರಸಿಂಗರಾವ ಅನ್ನುವವನು ಪುಣೆಯಲ್ಲಿದ್ದ ರಿಚರ್ಡ್ ಮಿಲ್ ಅನ್ನುವ

ಪೊಲಿಟಿಕಲ್ ಏಜೆಂಟ್ ಮತ್ತು ಮುಖ್ಯ ನ್ಯಾಯಾಧೀಶರಿಗೆ ಒಂದು ಪತ್ರವನ್ನು ಬರೆದು, ನವಾಬ ಅಬ್ದುಲ್ ದಿಲೇರಖಾನನು ಹಣವನ್ನೆಲ್ಲ ವ್ಯಯಿಸಿ ದಿವಾಳಿ ತೆಗೆದಿದ್ದಾನೆ ಎಂದು ತಿಳಿಸಿದ್ದನು. ಮಿ॥ ರಿಚ್‌ರ್ಡ್ ಮಿಲ್‌ನು ಆ ಪತ್ರವನ್ನು ನೋಡಿ, ಅದರಲ್ಲಿಯ ಕೆಲ ಅಂಶಗಳನ್ನು ಒಪ್ಪಿ, ಕೆಲ ಅಂಶಗಳನ್ನು ನಿರಾಕರಿಸಿ, ಈ ಅಪಾದನೆಯಲ್ಲಿ ಹುರುಳಿಲ್ಲವೆಂದು ನರಸಿಂಗರಾವನಿಗೆ ತಿಳಿಸಿದನು.ಇದರಿಂದ ಕೋಪಗೊಂಡ ಕಾಸೀ ನರಸಿಂಗರಾಯನು ಮುಂಬೈ ಗವ್ಹರ್ನರ್‌ರಿಗೆ ಇನ್ನೊಂದು ಪತ್ರವನ್ನು ಬರೆದು "ಸವಣೂರು ನವಾಬರ ಮೇಲೆ ನಾನು ಹೊರಿಸಿದ ಆರೋಪವನ್ನು ಪೊಲಿಟಿಕಲ್ ಏಜೆಂಟ್ ರಿಚ್‌ರ್ಡ್ ಮಿಲ್‌ರ ಕಡೆ ಕಳಿಸಿದರೆ, ಅವರು ಇದರಲ್ಲಿ ತಥ್ಯವಿಲ್ಲವೆಂದು ನಿರ್ಣಯವನ್ನಿತ್ತಿದ್ದಾರೆ. ಇದು ತಪ್ಪು ನಿರ್ಣಯ. ಅದಕ್ಕೆ ಅವರಿಗೆ ತಮ್ಮ ತೀರ್ಪನ್ನು ಪುನಃ ಪರಿಶೀಲಿಸಲು ಹೇಳಬೇಕು" ಎಂದು ತಿಳಿಸಿದನು. ನಂತರ ಕಾಸೀ ನರಸಿಂಗರಾಯರ ಹಠಮಾರಿ ಮಗ ಶ್ಯಾಮರಾವ ಹಾಗೂ ದಿವಾಣ ಕೃಷ್ಣರಾಯರ ಮಗ ಶ್ರೀನಿವಾಸರಾವ ಸೇರಿ,ಧಾರವಾಡ ಕಲೆಕ್ಟರಿಗೆ ಮತ್ತೊಂದು ದೂರನ್ನು ಸಲ್ಲಿಸಿದರು. ಕಲೆಕ್ಟರರು ಈ ವಿಷಯವನ್ನು ನವಾಬ ಅಬ್ದುಲ್ ದಿಲೇರಖಾನನ ಗಮನಕ್ಕೆ ತಂದು, ಅವನ ಉತ್ತರ ಪಡೆದು, ಶ್ಯಾಮರಾಯನ ಅಪಾದನೆಗೆ ಉತ್ತರವನ್ನು ಕೊಟ್ಟನು. ಕಲೆಕ್ಟರ ಎಡ್ವರ್ಡ್ ಘಿಲ್‌ನು ತನ್ನ ಪತ್ರ ನಂ:೩೪ರಲ್ಲಿ ಶ್ಯಾಮರಾನಿಗೆ ಪತ್ರವನ್ನು ಬರೆದು, "ನಿನಗೆ ಅನುವಂಶಿಕವಾಗಿ ಐವತ್ತು ಹೊನ್ನುಗಳ ಸಂಬಳದ 'ಮುನಸಿ' ಹುದ್ದೆ ಇತ್ತು. ಅದನ್ನು ನವಾಬ ದಿಲೇರಖಾನರು ನಿಲ್ಲಿಸಿದರು ಎಂದು ಅವರ ಮೇಲೆ ಅಪಾದನೆಯನ್ನು ಹೊರಿಸಿರುವಿ. ಆದರೆ ನವಾಬ ಸಾಹೇಬರು ಈ ವಿಷಯದಲ್ಲಿ ನನಗೆ ಸಮಾಧಾನಕರ ಉತ್ತರವನ್ನಿತ್ತಿದ್ದಾರೆ. ಅದರಂತೆ ನೀನು ನಿಮಗೆ ಅನುವಂಶಿಕ ಹಕ್ಕಿದೆ ಎಂಬ ಪತ್ರವನ್ನು ನಮಗೆ ಕೊಟ್ಟಿರುವಿ. ಅದನ್ನು ನಂತರ ಗಣನೆಗೆ ತೆಗೆದುಕೊಳ್ಳಲಾಗುವುದು. ನಿನ್ನ ತಂದೆ ನರಸಿಂಗರಾಯರು ಖೊಟ್ಟೆ ಪತ್ರದ ಪ್ರಕರಣದಲ್ಲಿ ಸಿಲುಕಿಕೊಂಡಾಗ ನೀನು ಮತ್ತು ನಿನ್ನ ತಂದೆಯವರು ಪುಣೆಗೆ ಹೋಗಿದ್ದಿರಿ. ಅದರಿಂದ, ನಿಮ್ಮ ತಂದೆಯನ್ನು ಮುನಸಿ ಸ್ಥಾನದಿಂದ ಅಮಾನತ್ತಿನಲ್ಲಿ ಇಡಲಾಯಿತು. ನಂತರ ವಿಚಾರಣೆ ನಡೆಸಿ, ತಪ್ಪಿತಸ್ಥನೆಂದು ನಿರ್ಣಯವಾದೊಡನೆ ಅವನನ್ನು ಸೇವೆಯಿಂದ ಕಿತ್ತುಹಾಕಲಾಯಿತು. ಅದರಿಂದ ನಮ್ಮಿಂದ ಯಾವ ಸಹಾಯವೂ ನಿಮಗೆ ದೊರೆಯುವಂತಿಲ್ಲ. ಸವಣೂರು ನವಾಬರಿಗೆ ಅವರ ರಾಜ್ಯದಲ್ಲಿ ದಿವಾಣಿ ಮತ್ತು ಫೌಜಧಾರಿ ಅಧಿಕಾರಗಳನ್ನು ಚಲಾಯಿಸುವ ಹಕ್ಕನ್ನು ನೀಡಿದ್ದರಿಂದ, ಅವರು ಸರಿಯಾದ ರೀತಿಯಲ್ಲಿ ತಮ್ಮ ಕರ್ತವ್ಯವನ್ನು ಮಾಡಿದ್ದಾರೆ" ಎಂದು ತಿಳಿಸಿದನು. ನವಾಬರ ಉಪ್ಪನ್ನೇ ತಿಂದ ಮಹಮ್ಮದ ಜಹಂಗೀರ ಮತ್ತು ನರಸಿಂಗರಾವ, ನವಾಬರ ವಿರುದ್ಧ ಕಾರ್ಯವೆಸಗಿ ಮೋಸ ಮಾಡಲು ಪ್ರಯತ್ನಿಸಿದರು.

## ಸಮುದ್ರ ವಿಹಾರ

ನವಾಬ ಅಬ್ದುಲ್ ದಿಲೇರಖಾನನಿಗೆ ಸಮುದ್ರ ವಿಹಾರ ಮಾಡುವ ಬಯಕೆಯಾಗಿದ್ದರಿಂದ ಸವಣೂರಿನ ಪೀರಖಾನ ರಿಸಾಲದಾರ, ಖಾದರಖಾನ ಭಕ್ಷಿ, ಹಾಜೀಜ ಮಹಮ್ಮದಸಾಹೇಬ ಖತೀಬ ಹಾಗೂ ಬನ್ನೂಖಾನ ಜಮಾದಾರ ತರೀನ ಇವರನ್ನು ಕರೆದುಕೊಂಡು ಮೊದಲು ಹೋತನಹಳ್ಳಿಗೆ ಹೋಗಿ, ಅಲ್ಲಿಂದ ಸ್ವಾದಿ ಸಂಸ್ಥಾನದ ಮಳಗಿಯಲ್ಲಿ ಒಂದು ದಿವಸ ವಾಸ್ತವ್ಯ ಮಾಡಿ, ಶಿರಸಿಯತ್ತ ಪ್ರಯಾಣವನ್ನು ಬೆಳೆಸಿದನು. ನವಾಬನ ಜೊತೆ ಅವನ ಮುಖ್ಯ ಬೀಬೀಸಾಹೀಬಾ ಖಾನಜಾದಾ ಸಾಹೀಬಾ ಇದ್ದಳು.

ಧಾರವಾಡ ಕಲೆಕ್ಟರರು ಎಲ್ಲ ವ್ಯವಸ್ಥೆ ಮಾಡಿದ್ದರಿಂದ, ಶಿರಸಿ ಮಾಮಲೇದಾರನು ನವಾಬನಿಗೆಂದು ಅನೇಕ ಸಿಹಿ ಮತ್ತು ಉಪ್ಪು-ಖಾರದ ತಿಂಡಿಗಳನ್ನು ಮಾಡಿಸಿಟ್ಟಿದ್ದನು. ಎಲ್ಲ ವಿಧದ ಹಲ್ವಾ ಮಾಡಿ, ಅದರಲ್ಲಿ ಬಾದಾಮಿ, ಪಿಸ್ತಾ, ಗೇರು ಬೀಜಗಳನ್ನು ಧಾರಳಾವಾಗಿ ಬಳಸಿದ್ದನು. ನವಾಬನಿಗೆ ಅಲ್ಲಿ ಇರುವ ಮನಸ್ಸಿಲ್ಲದಿದ್ದರೂ, ಸಂಪ್ರದಾಯಕ್ಕೆ ಕಟ್ಟುಬಿದ್ದು, ಮಾಮಲೇದಾರನ ಅತಿಥ್ಯವನ್ನು ಸ್ವೀಕರಿಸಿದನು. ಮುಂದೆ, ಧಾರವಾಡದ ಕಲೆಕ್ಟರನ ಅನುಮತಿ ಪಡೆದು, ರಹದಾರಿಯ ಚೀಟಿಯೊಂದಿಗೆ ಹೊನ್ನಾವರ ಬಂದರಕ್ಕೆ ಹೋದನು. ನಾವಿಕ ಇಲಾಖೆಯವರು ಸಮುದ್ರದ ಬದಿಗೆ ನವಾಬನಿಗೆ ಮತ್ತು ಅವನ ಪರಿವಾರದವರಿಗೆ ಡೇರೆಗಳನ್ನು ಹಾಕಿ ಎಲ್ಲ ವ್ಯವಸ್ಥೆಯನ್ನು ಮಾಡಿದ್ದರು.

ಆಕಸ್ಮಿಕವಾಗಿ ಅಲ್ಲಿಗೆ ತಲ್ಲಿಚೇರಿಯ ಮಹಾ ಮೇಧಾವಿ, ಚತುರ ಮಾತುಗಾರ ಮತ್ತು ಧಾರ್ಮಿಕ ಶ್ರದ್ಧೆಯಿದ್ದ ಮೌಲವಿ ಮಹಮ್ಮದ ಫಸೀಮುದ್ದೀನನು ನವಾಬನನ್ನು ಭೇಟಿಯಾದನು. ಮೌಲವಿ ಮತ್ತು ದಿಲೇರಖಾನನು ಬಹಳ ಸಮಯ ಅರೇಬಿಕ್ ಸಾಹಿತ್ಯ, ಧರ್ಮಾಚರಣೆಯಲ್ಲಿ ಬರುವ ತೊಡಕುಗಳು ಮತ್ತು ನ್ಯಾಯಶಾಸ್ತ್ರದ ಬಗ್ಗೆ ಚರ್ಚಿಸಿದರು. ದಿಲೇರಖಾನನು 'ಹದಯಾ'ಎಂಬ ನ್ಯಾಯಶಾಸ್ತ್ರದ ಗ್ರಂಥದ ಪ್ರಸ್ತಾಪ ಮಾಡಿದಾಗ, ಅದು ತನಗೆ ಓದಲು ಬೇಕು ಎಂದು ಮೌಲವಿ ಹೇಳಿದನು.

ನವಾಬನು ರಾಜಪರಿವಾರದೊಂದಿಗೆ ಸಮುದ್ರಸ್ನಾನ ಮಾಡಿ ಹಡಗವನ್ನೇರಿ ಒಂಭತ್ತು ಮೈಲುಗಳಂತರದಲ್ಲಿರುವ ಕುಮಟಾಕ್ಕೆ ಹೋದನು. ಹಡಗದಲ್ಲಿಯೇ ನವಾಬನು ಮೇಜವಾನಿ ಮಾಡಿಸಿ ಹಡಗದ ಸಿಬ್ಬಂದಿಗೆ ಅಹೇರುಗಳನ್ನಿತ್ತನು. ಮುಂದೆ ಅಲ್ಲಿಂದ ಪ್ರಯಾಣ ಬೆಳೆಸಿ, ಸಂಗಳಕ್ಕೆ ಬಂದನು. ಅಲ್ಲಿಯ ನದಿಯ ದಂಡೆಯ ಮೇಲೆ ರಾಜಪರಿವಾರಕ್ಕೆ ಡೇರೆ ಸಿದ್ಧವಾಗಿತ್ತು. ಮರುದಿವಸ ಪುನಃ ಸಿರಸಿಗೆ ಬಂದು ಅಲ್ಲಿಯ ಜನರ ಆಗ್ರಹದ ಮೇರೆಗೆ ಅಲ್ಲಿ ಒಂದು ದಿವಸ ವಾಸ್ತವ್ಯ ಮಾಡಿ, ಹೋತನಹಳ್ಳಿಯ ಮೇಲಿಂದ ಮರಳಿ ಸವಣೂರಿಗೆ ಬಂದನು.

## ಗ್ರಂಥ ರಚನೆ

ಅಬ್ದುಲ್ ದಿಲೇರಖಾನ ನವಾಬನು ೧೮೪೧ರಲ್ಲಿ 'ಸಿರಾಜುಲ್ ಇಂತಿಜಾಮ್' (ಆಡಳಿತೆಯ ಉದ್ಯಾನ) ಅನ್ನುವ ಉರ್ದು ಕಾನೂನಿನ ಗ್ರಂಥವನ್ನು ರಚಿಸಿ, ಸಾಮಾನ್ಯ ಮನುಷ್ಯನಿಗೆ ಕಾನೂನು ಮತ್ತು ಆಡಳಿತೆಯನ್ನು ತಿಳಿದುಕೊಳ್ಳಲು ಸಹಾಯವಾಗುಂತೆ ಕಾನೂನನ್ನು ವಿವರಿಸಿದ್ದನು. ಈ ಗ್ರಂಥವನ್ನು ಅಭಿಪ್ರಾಯಕ್ಕೆಂದು ಅವನು ಮದ್ರಾಸ್ ಗವ್ಹರ್ನರ ಮತ್ತು ವಾಲ್ಟರ್ ಇಲಿಯಟ್‌ನಿಗೆ ಕಳಿಸಿದನು. ಅವರಿಬ್ಬರೂ ಗ್ರಂಥವನ್ನೋದಿ, ತಮ್ಮ ಸದಭಿಪ್ರಾಯಗಳನ್ನು ವ್ಯಕ್ತಪಡಿಸಿ, ನವಾಬ ದಿಲೇರಖಾನನು ಸಾಮ್ಯಾನರಿಗೆ ಕಾನೂನು ಮತ್ತು ಆಡಳಿತೆಯು ಸುಲಭವಾಗಿ ತಿಳಿಯುವಂತೆ ಮಾಡಿದ್ದು ತುಂಬಾ ಸ್ತುತ್ಯ ಕಾರ್ಯವೆಂದು ಪ್ರಶಂಸಿಸಿದರು.

ಅಬ್ದುಲ್ ದಿಲೇರಖಾನನು ಇದೇ ಕಾಲಕ್ಕೆ ಮುಂಬೈ ಗವ್ಹರ್ನರಿಗೆ ಒಂದು ಪತ್ರವನ್ನು ಬರೆದು, "ನಮ್ಮ ರಾಜ್ಯದಲ್ಲಿ ಅಪರಾಧಗಳನ್ನೆಸಗಿ, ಇಲ್ಲಿಂದ ತಲೆತಪ್ಪಿಸಿಕೊಂಡು ಬ್ರಿಟಿಶ್ ಪ್ರದೇಶದಲ್ಲಿ ರಾಜಾರೋಷವಾಗಿ ಮೆರೆಯುತ್ತಾರೆ. ಅವರನ್ನು ಬಂಧಿಸಿ ಇಲ್ಲಿಗೆ ತರಲು ನಿಮ್ಮ ಅಧಿಕಾರಿಗಳು ಹಲವಾರು ವಿಧಿವಿಧಾನಗಳನ್ನು ಅನುರಸಿರಬೇಕಾಗಿ ರುವುದರಿಂದ ನ್ಯಾಯನೀಡಿಕೆಯಲ್ಲಿ ನಮಗೆ ತುಂಬಾ ವಿಳಂಬವಾಗುತ್ತದೆ. ಅದಕ್ಕೆ ನೀವು ಈ ವಿಷಯದಲ್ಲಿ ನಮಗೆ ಸಹಾಯ ಮಾಡಬೇಕು"ಎಂದು ಕೇಳಿದನು. ಗವ್ಹರ್ನರರು "ನಿಮ್ಮ ಕಾರ್ಯಕ್ಕೆ ಯಾವುದೇ ಬ್ರಿಟಿಶ್ ಅಧಿಕಾರಿಯು ಬೇಕಿದ್ದರೆ, ಅಂತಹವರನ್ನು ಕೂಡಲೇ ನಿಮ್ಮ ಕಡೆ ಕಳಿಸಲಾಗುವುದು. ನಿಮ್ಮ ರಾಜ್ಯದಲ್ಲಿ ಅಪರಾಧವನ್ನೆಸಗಿ ನಮ್ಮ ಪ್ರದೇಶದಲ್ಲಿದ್ದರೆ, ಅಂತಹವರನ್ನು ತಕ್ಷಣ ಬಂಧಿಸಿ ನಿಮ್ಮ ಪೋಲಿಸರಿಗೆ ಕೊಡವು ವ್ಯವಸ್ಥೆಯನ್ನು ನಾವು ಖಂಡಿತ ಮಾಡುತ್ತೇವೆ. ಆದರೆ ಈ ಎಲ್ಲ ವಿಧಿವಿಧಾನಗಳು ಧಾರವಾಡದ ಕಲೆಕ್ಟರರ ಮುಖಾಂತರ ನಡೆಯಬೇಕು" ಎಂದು ತಿಳಿಸಿದರು. ಅಬ್ದುಲ್ ದಿಲೇರಖಾನನಿಗೆ ಇದರಿಂದ ತೃಪ್ತಿಯಾಯಿತು.

## ರಾಜಾ ಬೀಬೀಸಾಹೀಬಳ ಮನವಿ

ಅಬ್ದುಲ್ ಖೈರಖಾನನ ಮಗಳು ಹಾಗೂ ಅಬ್ದುಲ್ ದಿಲೇರಖಾನನ ಸೋದರಿ ರಾಜಾ ಬೀಬೀ ಸಾಹೀಬಾ, ತನ್ನ ತಂದೆ ಖೈರಖಾನರು ಸಾಯುವ ಮುನ್ನ ತನಗೆ ಎರಡು ಹಳ್ಳಿಗಳನ್ನು ಕೊಡಲು ಒಪ್ಪಿದ್ದರು. ಆ ಎರಡೂ ಹಳ್ಳಿಗಳನ್ನು ತನ್ನ ಮಕ್ಕಳಾದ ಮುಬರ್ ಖಾನ ಮತ್ತು ದುಲಾಖಾನ್ ಖಾಂಜಾದೇ ಅವರಿಗೆ ಕೊಡಿಸಬೇಕೆಂದು ಗೌರ್ನರರಿಗೆ ಒಂದು ಅರ್ಜಿಯನ್ನು ಸಲ್ಲಿಸಿದಳು. ಯಾರೋ ಅವಳಿಗೆ ದುರ್ಬೋಧನೆ ಮಾಡಿರಬೇಕು. ಮುನವರಖಾನನ ಕಾಲದಲ್ಲಿ ದಿಲೇರಖಾನನು ಪುಣೆಯಲ್ಲಿ ಆರು ವರುಷ ಕಳೆದು, ನಂತರ ರಾಜ್ಯದ ಇಪ್ಪತ್ತೈದು ಹಳ್ಳಿಗಳನ್ನು ದೊರಕಿಸಿಕೊಳ್ಳಲು ಪಟ್ಟ ಪಾಡನ್ನು ರಾಜಾ

ಬೀಬೀಸಾಹೀಬಾ ತಿಳಿದೂ ಈ ಅರ್ಜಿಯನ್ನು ಸಲ್ಲಿಸಿದ್ದಳು. ಸರಕಾರವು ಇವಳ ಅರ್ಜಿಯನ್ನು ಪರಿಶೀಲಿಸಿ "ನೀವು ನಿಮ್ಮ ತಂದೆ ಕೊನೆಯುಸಿರನ್ನೆಳೆಯುವಾಗ ಎರಡು ಹಳ್ಳಿಗಳನ್ನು ಕೊಡಮಾಡಿದ್ದರಿಂದ ಆ ಹಳ್ಳಿಗಳನ್ನು ಈಗ ನೀವು ನಿಮ್ಮ ಮಕ್ಕಳಾದ ಮುಬರ್ ಜಾನ್ ಖಾನ ಮತ್ತು ದುಲಾಖಾನರಿಗೆ ಕೊಡಿಸಬೇಕೆಂದು ಕೇಳಿದ್ದೀರಿ. ಈ ಹಳ್ಳಿಗಳನ್ನು ನಾವು ಯಾವ ನವಾಬರಿಗೂ ಕೊಡದೆ, ಸವಣೂರು ರಾಜ್ಯಕ್ಕೆ ಕೊಟ್ಟಿದ್ದೇವೆ. ನಿಮ್ಮ ತಂದೆ ತಮ್ಮ ಅವಸಾನ ಕಾಲದಲ್ಲಿ ಕೊಟ್ಟ ವಚನವನ್ನು ನಡೆಸಿಕೊಡುವುದು ಸಾಧ್ಯವಿಲ್ಲ. ನಿಮಗೆ ಈ ಹಳ್ಳಿಗಳನ್ನು ಕೊಟ್ಟರೆ ಉಳಿದ ಸಹೋದರರೂ ಕೇಳಬಹುದು. ನೀವು ಸುಖವಾಗಿ ಇರಬೇಕಿದ್ದರೆ, ಸವಣೂರಿಗೆ ಬಂದು ನಿಮ್ಮ ಸೋದರ ಅಬ್ದುಲ್ ದಿಲೇರಖಾನರ ಹತ್ತಿರ ಇರಬೇಕು. ನೀವೆಲ್ಲರೂ, ೧೮೩೨ ಜನವರಿ ೨೫ರ ಒಪ್ಪಂದದಂತೆ ನಡೆಯಬೇಕು. ಅದಕ್ಕೆ ನಿಮ್ಮ ಮಕ್ಕಳಿಗೆ ಹಳ್ಳಿಗಳನ್ನು ಕೊಡಲಿಕ್ಕೆ ಆಗುವುದಿಲ್ಲ" ಎಂದು ಆಜ್ಞೆಯನ್ನು ಹೊರಡಿಸಿದರು. ಈ ಆಜ್ಞೆಯ ಪ್ರತಿಯನ್ನು ರಾಮಚಂದ್ರಪಂತ ವಿಠ್ಠಲ ಚಿಟ್ನೀಸನು ಸಹಿ ಮಾಡಿ ರಾಜಾ ಬೀಬೀಸಾಹೀಬಳಿಗೆ ಕಳಿಸಿದನು. ಇದರಿಂದ ರಾಜಾ ಬೀಬೀ ಸಾಹೀಬಾ ತುಂಬಾ ನೊಂದುಕೊಂಡಳು.

ಧಾರವಾಡದ ಕಲೆಕ್ಟರ ಮಿ॥ ಎಡ್ವರ್ಡ್ ಮಿಲ್‌ನು ಸ್ವಇಚ್ಛೆಯಿಂದ ಇಂಗ್ಲೆಂಡಕ್ಕೆ ಹೋದೊಡನೆ ಅವನ ಸ್ಥಾನದಲ್ಲಿ ಅಲೆಕ್ಸಾಂಡರ್ ನಿಸಬತ್‌ಶಾ ಧಾರವಾಡದ ಕಲೆಕ್ಟರ ನಾಗಿ ನೇಮಕಗೊಂಡು ಧಾರವಾಡಕ್ಕೆ ಬಂದನು. ಅವನು ಜಮಾಬಂದಿ ಕೆಲಸಕ್ಕೆಂದು ಶಿಗ್ಗಾವಿಗೆ ಬಂದಾಗ, ಅಬ್ದುಲ್ ದಿಲೇರಖಾನ ನವಾಬನು ಅವನನ್ನು ಶಿಗ್ಗಾವಿಯಲ್ಲಿ ಭೇಟಿಯಾಗಿ, ಯೋಗಕ್ಷೇಮವನ್ನು ವಿಚಾರಿಸಿದನು. ಕಲೆಕ್ಟರನು ನವಾಬನನ್ನು ಅವನ ಸುಂದರ ಅಲಂಕೃತ ಡೇರೆಯಲ್ಲಿ ಭೇಟಿಯಾಗಿ ಮಾತುಕತೆ ನಡೆಸಿದನು. ಅವನು ದಿಲೇರಖಾನನ ವ್ಯಕ್ತಿತ್ವ, ಬುದ್ಧಿಮತ್ತೆಗೆ ತಲೆದೂಗಿ "ಇವನ ಪೂರ್ವಜರು ಸವಣೂರು ರಾಜ್ಯವನ್ನು ಕಳೆದುಕೊಳ್ಳದಿದ್ದರೆ, ಇವನು ಹಾಯಾಗಿ ಬಾವಿಸ ಮಹಲುಗಳನ್ನು ಆಳಬಹುದಿತ್ತು" ಎಂದು ಉದ್ಗರಿಸಿದನು.

ಕಲೆಕ್ಟರ್ ನಿಸಬತ್‌ನು ಧಾರವಾಡಕ್ಕೆ ಹೋದಮೇಲೆ ಅಲ್ಲಿಯ ಹಿರಿಯ ಅಧಿಕಾರಿಗಳು, ಸರದಾರರು, ಪರಿವಾರದವರು ನವಾಬ ದಿಲೇರಖಾನನ್ನು ನೋಡಬೇಕೆಂಬ ಇಚ್ಛೆಯನ್ನು ವ್ಯಕ್ತಿಪಡಿಸಿದರು. ಅವರೆಲ್ಲರೂ ಸವಣೂರು ನವಾಬನು ಅತ್ಯಂತ ಚೆಲುವ, ಬುದ್ಧಿವಂತ ಎಂದು ಕೇಳಿ ತಿಳಿದಿದ್ದರು. ಆದರೆ ನೋಡಿರಲಿಲ್ಲ. ಅದಕ್ಕೆ ಅವರು ನಿಸಬತ್‌ನ ಎದರು ಅವನನ್ನು ಕಾಣುವ ಕುತೂಹಲವನ್ನು ವ್ಯಕ್ತಪಡಿಸಿದರು.

ಕಲೆಕ್ಟರ್ ನಿಸಬತ್‌ನು ಸವಣೂರು ನವಾಬರ ವಕೀಲನಾಗಿದ್ದ ಕೋನೇರಿರಾಯನಿಗೆ ಒಂದು ಪತ್ರವನ್ನು ಬರೆದು ನಮಗೆ ಸವಣೂರು ನವಾಬರನ್ನು ಕಾಣುವ ತವಕವಿದೆ. ಅದಕ್ಕೆ

ಅವರು ಒಂದು ದಿವಸದ ಮಟ್ಟಿಗಾದರೂ ಧಾರಾವಾಡಕ್ಕೆ ಬಂದು ನನ್ನ ಅತಿಥಿಯಾಗಿ ಇರಬೇಕು ಅನ್ನುವುದು ನನ್ನಿಚ್ಛೆ. ನೀವು ನವಾಬರಿಗೆ ಈ ಸುದ್ದಿಯನ್ನು ತಿಳಿಸಿ, ಧಾರವಾಡಕ್ಕೆ ಬರುವಂತೆ ಅವರ ಮನವೊಲಿಸಿ'' ಎಂದು, ನವೆಂಬರ್ ೧೧, ೧೮೮೨ರಂದು ಪತ್ರವನ್ನು ಬರೆದರು.

ನವಾಬ ದಿಲೇರಖಾನನು ಕಲೆಕ್ಟರನ ಬಿನ್ನಹದಂತೆ ಧಾರವಾಡಕ್ಕೆ ಬಂದೊಡನೆ, ಅವನಿಗೆ ಜಮಖಾನೆ ಹಾಸಿ,ಅಲ್ಲಲ್ಲಿ ಖುರ್ಚಿಗಳನ್ನಿರಿಸಿ, ತೂಗುದೀಪಗಳನ್ನು ಬಿಟ್ಟು, ಸ್ವಾಗತಿಸಿದನು. ಅವನನ್ನು ಕಾಣಲು ನೂರಾರು ಗೃಹಸ್ಥರು, ಸ್ತ್ರೀಯರು ನೆರೆದಿದ್ದರು. ನವಾಬನು ಬರುವಾಗ ವಾದ್ಯವೈಭವಗಳೊಂದಿಗೆ ಸ್ವಾಗತಿಸಲ್ಪಟ್ಟನು. ಕಲೆಕ್ಟರನು ದಿಲೇರಖಾನನನ್ನು ಸ್ವಾಗತಿಸಿ, ಅಲ್ಲಿ ನೆರೆದ ಸ್ತ್ರೀಯರನ್ನೆಲ್ಲ ಪರಿಚಯಿಸಿದನು. ಬಂಗ್ಲೆಯ ಒಳಗೆ ನವಾಬನನ್ನು ಕಾಣುವ ಕುತೂಹಲದಿಂದ ನೂರಾರು ಅಧಿಕಾರಿಗಳು, ಅವರವರ ಅಂತಸ್ತಿಗೆ ತಕ್ಕಂತೆ ಆಸೀನರಾಗಿದ್ದರು. ನವಾಬನು ಎಲ್ಲರನ್ನೂ ಮಾತನಾಡಿಸಿದನು. ಅವನು ಕುಳಿತೊಡನೆ ಗಝಲ್ ಹಾಡಲು ಗಾಯಕರು ಪ್ರಾರಂಭಿಸಿದರು. ಮುಂದೆ ಪಾಶ್ಚಾತ್ಯ ಸಂಗೀತವೂ ವಾದ್ಯಗಳಲ್ಲಿ ನುಡಿಸಲ್ಪಟ್ಟಿತು. ಕಲೆಕ್ಟರ್‌ರ ಬಂಗ್ಲೆಯಲ್ಲಿ ಇಂತಹ ಅಪರೂಪದ ಭೇಟಿ ಈ ಹಿಂದೆ ನಡೆದಿರಲಿಲ್ಲ' ನವಾಬನ ಪ್ರತಿಯೊಂದು ನೋಟವೂ ವಸಂತಕಾಲದ ಚೆಲುವನ್ನು ಬೀರುತ್ತಿದ್ದಿತಲ್ಲದೆ, ಪ್ರತಿಯೊಬ್ಬರ ಕೈಯಲ್ಲಿಯೂ ಸೌಂದರ್ಯ ಕುಣಿಯುತ್ತಿತ್ತು. ನವಾಬ ದಿಲೇರಖಾನನ ಚೆಲುವು ಅಷ್ಟು ಮೋಹಕ ವಾಗಿತ್ತಂತೆ.

### ಪ್ರವೇಶ ತೆರಿಗೆ ರದ್ಧತಿ

ಧಾರವಾಡದ ಕಲೆಕ್ಟರರು ನವಾಬ ದಿಲೇರಖಾನನಿಗೆ ಒಂದು ಪತ್ರವನ್ನು ಬರೆದು "ಪ್ರಜೆಗಳ ಹಿತಾಭಿವೃದ್ಧಿಗಳನ್ನು ಗಣನೆಗೆ ತಂದುಕೊಂಡು, ವಿಕ್ಟೋರಿಯಾ ಮಹಾರಾಣಿಯು ಜಕಾತಿ ಮತ್ತು ರಹದಾರಿ ತೆರಿಗೆಯನ್ನು ರದ್ದುಗೊಳಿಸಿದ್ದಾರೆ. ಅದಕ್ಕೆ ನೀವೂ ಕೂಡ ನಿಮ್ಮ ರಾಜ್ಯದಲ್ಲಿ ಈಗ ಪ್ರಚಲಿತದಲ್ಲಿರುವ ಪ್ರವೇಶ ಹಾಗೂ ರಹದಾರಿ ತೆರಿಗೆಯನ್ನು ತಕ್ಷಣ ಮರಳಿ ಪಡೆಯಬೇಕು.ಇದರಿಂದ ದೇಶದಲ್ಲಿ ಏಕರೂಪತೆ ಬರಲಿದೆ. ಈ ತೆರಿಗೆಗಳನ್ನು ರದ್ದುಪಡಿಸಿರುವುದರಿಂದ, ನಿಮ್ಮ ರಾಜ್ಯಕ್ಕೆ ಆಗಲಿರುವ ರೂ.೪೯೦-೧೧-೮ ಪೈ ಹಾನಿಯನ್ನು ಕಂಪನಿ ಸರಕಾರವು ನಿಮಗೆ ತುಂಬಿ ಕೊಡುತ್ತದೆ. ಈ ಹಣವನ್ನು ನೀವು ನೇರವಾಗಿ ಬಂಕಾಪುರ ಮಾಮಲೇದಾರರಿಂದ ಪಡೆಯಬಹುದು'' ಎಂದು, ಜನವರಿ ೧೧, ೧೮೮೩ ರಂದು ತಿಳಿಸಿದನು.

### ದರ್ಗಾ ಸರಿಪಡಿಸಿದ್ದು

ಶಹಾ ಕಮಾಲ ದಿವಾನ ದರ್ಗಾದ ಖಾಯಂ ಮುಜಾವರನಾಗಿದ್ದ ದಿವಾನನು ದರ್ಗಾದ ವೆಚ್ಚಕೆಂದು ಕೊಡಮಾಡಿದ್ದ ಇನಾಮ ಉತ್ಪನ್ನವನ್ನು ತನ್ನ ಮನಸ್ಸಿಗೆ ಬಂದಂತೆ

ವ್ಯಯ ಮಾಡಹತ್ತಿದನು. ಈ ವಿಷಯವು ನವಾಬ ದಿಲೇರಖಾನನ ಕಿವಿಗೆ ಬಿದ್ದಾಗ, ಅವನು ದಿವಾನನಿಗೆ ಸರಿಯಾಗಿ ವರ್ತಿಸಲು ಮೊದಲು ಎಚ್ಚರಿಕೆಯನ್ನು ನೀಡಿ ತನ್ನ ಅಧಿಕಾರಿಗಳನ್ನು ವಿಚಾರಣೆಗೆಂದು ಅಲ್ಲಿಗೆ ಕಳಿಸದನು. ಆದರೆ, ಮುಜಾವರ ದಿವಾನನು ನವಾಬನ ಅಧಿಕಾರಿಗಳೊಡನೆ ಅಯೋಗ್ಯ ರೀತಿಯಲ್ಲಿ ನಡೆದುಕೊಂಡನಲ್ಲದೆ, ಅವರಿಗೆ "ಈ ಇನಾಮು ಗ್ರಾಮವು ಸವಣೂರು ರಾಜ್ಯದ ಹೊರಗೆ ಬ್ರಿಟಿಶ್ ಪ್ರದೇಶದಲ್ಲಿದೆ. ಅದಕ್ಕೆ ನವಾಬರಿಗೆ ಈ ದರ್ಗಾದ ಉತ್ಪನ್ನದ ಬಗ್ಗೆ ಮಾತನಾಡುವ ಹಕ್ಕಿಲ್ಲ. ನನ್ನ ಮನಸ್ಸಿಗೆ ಬಂದಂತೆ ನಾನು ಇದರ ಉತ್ಪನ್ನವನ್ನು ವ್ಯಯಿಸುತ್ತೇನೆ"ಎಂದು ಉದ್ಧಟತನದಿಂದ ಮಾತನಾಡಿದನು. ನವಾಬ ದಿಲೇರಖಾನನು ಈ ದರ್ಗಾದ ದಿವಾನನ ಉದ್ಧಟನವನ್ನು ಕೇಳಿ ನೇರವಾಗಿ ಕಲೆಕ್ಟರ್ ನಿಸಬತ್ ಶಾನಿಗೆ ಒಂದು ಪತ್ರ ಬರೆದು ತಿಳಿಸಿದನು. ಕಲೆಕ್ಟರ್ ಅಲೆಕ್ಸಾಂಡರ ನಿಸಬತ್ ಶಾ ಕೂಡಲೇ ದರ್ಗಾದ ಅವ್ಯವಸ್ಥೆಯನ್ನು ಕೇಳಿ, ಅಲ್ಲಿಯ ವಿದ್ಯಮಾನಗಳನ್ನು ತಿಳಿದು, ನವಾಬ ದಿಲೇರಖಾನನಿಗೆ ಒಂದು ಪತ್ರವನ್ನು ಬರೆದು "ಶಹಾ ಕಮಾಲ ದಿವಾನ ದರ್ಗಾದ ವಿಷಯ ನನಗೆ ತಿಳಿಯಿತು. ಮುಜಾವರ ದಿವಾನನು ಇಡೀ ಜಹಗೀರ ಹಳ್ಳಿಯನ್ನು ಒತ್ತೆ ಹಾಕಿ, ಅಯೋಗ್ಯರ ಕೈಯಲ್ಲಿ ದರ್ಗಾದ ಆಡಳಿತೆಯನ್ನು ಒಪ್ಪಿಸಿದ್ದಾನಂತೆ. ಅದಕ್ಕೆ ಅವನಿಗೆ ಸರಿಯಾಗಿ ನಡಕೊಂಡು, ದರ್ಗಾದ ವ್ಯವಸ್ಥೆಯನ್ನು ಸುಗಮಗೊಳಿಸಲು ಎಚ್ಚರಿಕೆಯ ಒಂದು ಪತ್ರವನ್ನು ಕಳಿಸಿದ್ದೇನೆ. ಅದರ ಪ್ರತಿಯೊಂದನ್ನು ಈ ಲಕೋಟೆಯಲ್ಲಿ ಇಟ್ಟಿರುವೆ. ನೀವು ದಯವಿಟ್ಟು ಈ ದರ್ಗಾದ ಉತ್ಪನ್ನವು ಅಪವ್ಯಯವಾಗದಂತೆ ನೋಡಿಕೊಳ್ಳಬೇಕು. ಈ ದರ್ಗಾದ ಆಡಳಿತೆಯಲ್ಲಿ ಏನಾದರೂ ಲೋಪದೋಷಗಳು ಕಂಡರೆ, ನನ್ನ ಗಮನಕ್ಕೆ ತರಬೇಕು. ಇಂತೀ ಸಲಾಮುಗಳು"ಎಂದು ಕಲೆಕ್ಟರನು ನವಾಬನ ಸಹಾಯವನ್ನು ಕೋರಿದನು. ಈ ಪತ್ರವನ್ನು ಕಲೆಕ್ಟರ್ ನಿಸಬತ್‌ಶಾ ಸವಣೂರು ನವಾಬನ ಮುನಸಿ ಹನುಮಂತರಾಯ ನೊಂದಿಗೆ ಕಳಿಸಿದನು. ದರ್ಗಾದ ಮುಜಾವರ ದಿವಾನನು ಕಲೆಕ್ಟರನ ಆಜ್ಞಾಪತ್ರವನ್ನು ನೋಡಿ, ನವಾಬನ ಅಧಿಕಾರಿಗಳೊಂದಿಗೆ ವಿನಯದಿಂದ ನಡೆದುಕೊಳ್ಳಹತ್ತಿದನು. ನವಾಬ ದಿಲೇರಖಾನನು ಆ ಜಹಗೀರ ಹಳ್ಳಿಯ ಉತ್ಪನ್ನದ ಸರಿಯಾದ ವ್ಯವಸ್ಥೆ ಮಾಡಿ, ಪ್ರತಿ ತಿಂಗಳೂ ತನ್ನ ಅಧಿಕಾರಿಗಳಿಂದ ಶಹಾ ಕಮಾಲ ದಿವಾನನಿಗೆ ದರ್ಗಾದ ವೆಚ್ಚಕ್ಕೆ ಹಣವನ್ನು ಕಳಿಸಹತ್ತಿದನು. ಇದರಿಂದ ದಿವಾನನು ಹಾದಿಗೆ ಬಂದು ನವಾಬ ದಿಲೇರ ಖಾನನಿಗೆ ವಿಧೇಯನಾಗಿ ಉಳಿದನು.

೧೮೪೪ರಲ್ಲಿ ಧಾರವಾಡದ ಕಲೆಕ್ಟರನಾಗಿದ್ದ ಮಿ॥ ಎ.ಎಸ್. ನಿಸಬತ್ ಶಾ ಕೇಫ್ ಕಾಮರಿನ್ನಿಗೆ ಹೋದನು. ಹೋಗುವ ಮೊದಲು ಇವನು ನವಾಬ ದಿಲೇರಖಾನನಿಗೆ ಅವನ ಬೇಟೆಯ ಕಾರ್ಯಾಗಾರದಲ್ಲಿ ಇಡಲು ಒಂದು ಬೇಟೆ ಗಿಡಗವನ್ನು ಎತ್ತಿನ ಗಾಡಿಯಲ್ಲಿ ಧಾರವಾಡದಿಂದ ಸವಣೂರಿಗೆ ಕಳಿಸಿದನು. ಕಲೆಕ್ಟರ್ ನಿಸಬತ್ ಶಾ ನವಾಬನಿಗೆ ಒಂದು

ಪತ್ರವನ್ನು ಬರೆದು, "ನಾನು ನಿಮ್ಮ ಶಿಕಾರಖಾನದಲ್ಲಿ ಇಡಲು ಒಂದು ಒಳ್ಳೇ ಗಿಡಗ ಹಾಗೂ ಗಿಡಗಗಳಿಗೆ ತರಬೇತಿ ಕೊಡುವ ಒಬ್ಬ ಮನುಷ್ಯನನ್ನು ನಿಮ್ಮ ಕಡೆ ಕಳಿಸಿದ್ದೇನೆ. ಈ ಪಕ್ಷಿಯನ್ನು ನೀವು ಒಳ್ಳೇ ರೀತಿಯಲ್ಲಿ ಸಾಕುವಿರೆಂದು ನನ್ನ ನಂಬಿಕೆ"ಎಂದು, ೧೮೪೪ ಡಿಸೆಂಬರ್ ದಲ್ಲಿ ತಿಳಿಸಿದನು. ನವಾಬನು ಇದರಿಂದ ಸಂಪ್ರೀತನಾಗಿ, ತನ್ನ ಮುನಸಿ ಹನುಮಂತರಾಯನಿಂದ ಕಲೆಕ್ಟರ್ ನಿಗೆ ಒಂದು ಪತ್ರ ಬರೆಸಿ, ತನ್ನ ಕೃತಜ್ಞತೆಗಳನ್ನು ವ್ಯಕ್ತಪಡಿಸಿದನು.

ನವಾಬ ದಿಲೇರಖಾನನು ಈ ಗಿಡಗವನ್ನು, ಬೇಟೆಗೆ ಹೋಗುವಾಗ ತನ್ನ ಜೊತೆ ತೆಗೆದುಕೊಂಡು ಹೋಗಿ, ಅದು ಚಿಗರೆಯಕಿಂತ ಹೆಚ್ಚಿನ ವೇಗದಲ್ಲಿ ಹಾರುವುದೆಂದು ಬೇರೆಯವರಿಗೆ ತೋರಿಸಹತ್ತಿದನು. ದಿಲೇರಖಾನನಿಗೆ ಈ ಪಕ್ಷಿಗೆ ಒಬ್ಬ ಜೊತೆಗಾರ್ತಿಬೇಕೆಂದು, ಹಲವಾರು ಕಡೆ ಶೋಧಿಸಿ, ಕೊನೆಗೆ ಕರ್ನೂಲಿನ ನವಾಬನೊಬ್ಬನು ತಂದ ಸುಂದರ ಹೆಣ್ಣು ಗಿಡಗವನ್ನು ಒಂದುನೂರಾ ಅರವತ್ತು ರೂಪಾಯಿಗಳಿಗೆ ಕೊಂಡು, ತನ್ನ ಶಿಕಾರಖಾನೆಗೆ ಸೇರಿಸಿದನು. ನವಾಬನು ನಿತ್ಯವೂ ಈ ಗಿಡಗದ್ವಯಗಳನ್ನು ಬೇಟೆಗೆ ಒಯ್ಯುಹತ್ತಿದನು. ಈ ಗಿಡಗಳ ಸಹಾಯದಿಂದ ಚಿಗರಿ ಬೇಟೆಗಳನ್ನಾಡಿ ನಿತ್ಯವೂ ನವಾಬನು ಹುರಿದ ಜಿಂಕೆ ಮಾಂಸವನ್ನು ಸೇವಿಸಹತ್ತ್ರದನು.

ಎ.ಎಸ್.ಶಾ ವರ್ಗವಾಗಿ ಹೋದ ಮೇಲೆ, ೧೮೪೫ರಲ್ಲಿ ಮಿ|| ಎಸ್ .ಮ್ಯಾನ್ಸ್ ಫೀಲ್ಡ್ ಅನ್ನುವ ಹೊಸ ಕಲೆಕ್ಟರನು ಧಾರವಾಡಕ್ಕೆ ಬಂದನು. ಇವನ ಸ್ನೇಹಿತನಾದ ಫ್ರೆಂಚ್ ಕ್ಯಾಪ್ಟನ್ ಮಿ|| ಡಿ.ಅರಗೋಣಿ ಅನ್ನುವವನು ಮದ್ರಾಸಕ್ಕೆ ಹೋಗುವ ದಾರಿಯಲ್ಲಿ ಒಂದು ದಿವಸ ಸವಣೂರಲ್ಲಿ ತಂಗಿದನು. ಅರಗೋಣಿಗೆ ಉಚಿತವಾದ ಅತಿಥ್ಯವನ್ನು ನೀಡಬೇಕೆಂದು ಮ್ಯಾನ್ಸ್ ಫೀಲ್ಡನು ನವಾಬ ದಿಲೇರಖಾನನಿಗೆ ಒಂದು ಪತ್ರವನ್ನು ಕೊಟ್ಟಿದ್ದನು. ಅದರಿಂದ ದಿಲೇರಖಾನನು ತೋರಿಸಿದ ಸೌಜನ್ಯ ಮತ್ತು ಆತಿಥ್ಯಗಳಿಗೆ ಮನಸೋತ ಫ್ರೆಂಚ್ ಕ್ಯಾಪ್ಟನ್ನನು ಒಂದು ದಿವಸದ ಬದಲು ನಾಲ್ಕು ದಿವಸಗಳ ಕಾಲ ಸವಣೂರಲ್ಲಿ ನಿಂತನು. ನವಾಬನು ಅತಿಥಿಯನ್ನು ವಿವಿಧ ಭಕ್ಷ್ಯಭೋಜ್ಯಗಳಿಂದ ತಣಿಸಿದನು. ಆ ಕ್ಯಾಪ್ಟನ್ನನು ಸವಣೂರಿನಿಂದ ತೆರಳುವಾಗ ದಿಲೇರಖಾನನ ಮಗ ಯುವರಾಜ ಅಬ್ದುಲ್ ಖೈರಖಾನನಿಗೆ ಫ್ರಾನ್ಸದಲ್ಲಿ ತಯಾರಾದ ಒಂದು ಬಂದೂಕು ಮತ್ತು ಹಸ್ತಿದಂತದ ಹಿಡಿಕೆಯಿದ್ದ ಒಂದು ಸುಂದರ ಬೀಸಣಿಕೆಯನ್ನು ಕಾಣಿಕೆಯಾಗಿ ಕೊಟ್ಟನು. ಅದಕ್ಕೆ ಪ್ರತಿಯಾಗಿ ದಿಲೇರಖಾನನು ಆ ಫ್ರೆಂಚ್ ಸರದಾರನಿಗೆ ಶ್ರೇಷ್ಠ ಜಾತಿಯ ಒಂದು ಅಶ್ವ ಮತ್ತು ಗಂಧದ ಕರಂಡಕವನ್ನು ಕಾಣಿಕೆಯೆಂದು ಕೊಟ್ಟನು. ಮಿ|| ಡಿ.ಅರಗೋಣಿ ಮದ್ರಾಸಕ್ಕೆ ಹೋಗಿ ನವಾಬ ದಿಲೇರಖಾನನಿಗೆ ತನ್ನ ಕೃತಜ್ಞತೆಗಳನ್ನು ಸೂಚಿಸಿ, ದೀರ್ಘವಾದ ಪ್ರಶಂಸಾಪರ ಪತ್ರವನ್ನು ಬರೆದನು.

## ಹೊಸ ತೂಕ-ಅಳತೆ ಮಾಪಕ

ಬ್ರಿಟಿಶ್ ಪ್ರದೇಶದಲ್ಲಿ ಸರಕಾರವು ಹೊಸ ತೂಕ-ಅಳತೆ-ಮಾಪಕಗಳನ್ನು ಬಳಕೆಗೆ ತಂದಿತ್ತು. ಆಗ ಧಾರವಾಡದ ಕಲೆಕ್ಟರನು ನವಾಬ ದಿಲೇರಖಾನನಿಗೆ ಒಂದು ಪತ್ರವನ್ನು ಬರೆದು "ನೀವು ಸವಣೂರು ರಾಜ್ಯದ ಆಡಳಿತೆಯಲ್ಲಿ ಬ್ರಿಟಿಶ್ ಮಾದರಿಯ ಅನೇಕ ಸುಧಾರಣೆಗಳನ್ನು ಮಾಡಿದ ವರದಿ ನಮಗೆ ಬಂದಿವೆ. ಇದರಿಂದ ಕಂಪನಿ ಸರಕಾರಕ್ಕೆ ಸಂತೋಷವಾಗಿದೆ. ಕಂಪನಿ ಸರಕಾರವು ದೇಶದಾದ್ಯಂತ ಏಕರೂಪ ಅಳತೆ- ತೂಕ-ಮಾಪನಗಳಲ್ಲಿ ಸುಧಾರಣೆ ಮಾಡಿದೆ. ಈ ಹೊಸ ಪದ್ಧತಿ ಕೇವಲ ಬ್ರಿಟಿಶ್ ಭಾರತದಲ್ಲಿ ಒಂದೇ ಕಾರ್ಯರೂಪಕ್ಕೆ ಬಾರದೇ ಸಂಸ್ಥಾನೀ ಪ್ರದೇಶಗಳಲ್ಲಿ ಕೂಡ ಬರಬೇಕೆಂದು ಸರಕಾರದ ಉದ್ದೇಶವಿದೆ. ಅದಕ್ಕೆ ನಾವು ಹೊಸ ನಮೂನೆಯ ತೂಕ-ಅಳತೆ-ಮಾಪನಗಳನ್ನು ಕಳಿಸಿದ್ದೇವೆ. ಎಂದು ತಿಳಿಸಿದನು.

ನವಾಬ ದಿಲೇರಖಾನನು ತಕ್ಷಣ, ದಿವಾಣ ಮಹಮ್ಮದ ಗೌಸಖಾನನನ್ನು ಕರೆದು, ಎಲ್ಲ ವ್ಯಾಪಾರಿಗಳನ್ನು ಸೇರಿಸಿ, ಪ್ರಮಾಣಬದ್ಧ ಹೊಸ ತೂಕ-ಅಳತೆಗಳನ್ನು ತಕ್ಷಣ ಜಾರಿಯಲ್ಲಿ ತರಬೇಕೆಂದು ಅಜ್ಞಾಪಿಸಿದನು. ಈ ಪದ್ಧತಿಯನ್ನು ಹಳ್ಳಿಗಳಲ್ಲಿಯೂ ಜಾರಿಗೊಳಿಸಬೇಕಂದು ಜಾಹೀರಪಡಿಸಿದನು. ಎಲ್ಲ ವ್ಯಾಪಾರಸ್ಥರೂ ಈ ಹೊಸ ಪದ್ಧತಿ ಅಳತೆ-ತೂಕ-ಮಾಪನಗಳಿಗೆ ಸರಕಾರದ ಮುದ್ರೆಯನ್ನು ಒತ್ತಿಸಿಕೊಂಡು ಹೋಗಬೇಕೆಂದು ತಿಳಿಸಲಾಯಿತು. ಸವಣೂರು ರಾಜ್ಯವು, ಪ್ರಮಾಣಬದ್ಧ ಅಳತೆ ತೂಕಗಳೆಂದು ದೃಢೀಕರಿಸಲು, ಒಂದು ಕಮಲ ದಳದ ಮೊಹರನ್ನು ಹಾಕಿ ಕೊಡಹತ್ತಿತು.

ಧಾರವಾಡದ ಕಲೆಕ್ಟರ್ ಮಿ। ಮ್ಯಾನ್ಸ್ ಫೀಲ್ಡ್‌ನು ಜಮಾಬಂದಿ ಕಾರ್ಯದಲ್ಲಿ ಮಗ್ನನಾದಾಗ, ಬಸವನಕೊಪ್ಪದ ರಾಜಮನೆತನದ ಖಾಂಜಾದೇ ಜನರು ನವಾಬ ದಿಲೇರಖಾನನಿಗೆ ಪುನಃ ಉಪಟಳವನ್ನು ಕೊಡಹತ್ತಿದರು. ಇದರಿಂದ ಸವಣೂರು ರಾಜ್ಯದಲ್ಲಿ ಅಶಾಂತಿ ಪಸರಿಸಹತ್ತಿತ್ತು. ಹಳೆಯ ಹಗೆತನವನ್ನು ಸಾಧಿಸಲು ದುಷ್ಟರಿಂದ ಪ್ರೇರೇಪಿತರಾದ ಖಾಂಜಾದೇ ಜನರು ದಂಗೆಯೆದ್ದರು.

ನವಾಬ ದಿಲೇರಖಾನನಿಗೆ ಸಮಸ್ಯೆಯಾಯಿತು. ಅವನು ಧಾರವಾಡದ ಕಲೆಕ್ಟರ ಮತ್ತು ರಾಜ್ಯದ ಪೊಲಿಟಿಕಲ್ ಏಜಂಟ್‌ರಿಂದ ಇದಕ್ಕೊಂದು ಶಾಶ್ವತ ಪರಿಹಾರವನ್ನು ಕಂಡುಹಿಡಿಯಬೇಕೆಂದು, ಮಾತಿನಲ್ಲಿ ಅತ್ಯಂತ ಚಾಣಾಕ್ಷನಾದ ತನ್ನ ಕಕ್ಕ ದಿಲಾವರಖಾನನನ್ನು ಧಾರವಾಡದ ಕಲೆಕ್ಟರನ ಕಡೆಗೆ ಕಳಿಸಿದನು.ದಿಲಾವರಖಾನನು, ಬಸವನಕೊಪ್ಪದ ಖಾಂಜಾದಾ ಜನರು ಮೇಲಿಂದ ಮೇಲೆ ವಿನಾಕಾರಣ ಸಿಂಹಾಸನಕ್ಕೆ ತೊಂದರೆಯನ್ನೊಡ್ಡುವರೆಂದು ಕಲೆಕ್ಟರನಿಗೆ ವಿವರಿಸಿ ಹೇಳಿದನು. ಕಲೆಕ್ಟರನು ಎಲ್ಲವನ್ನೂ ಶಾಂತವಾಗಿ ಕೇಳಿಕೊಂಡು, ತಾನು ಶೀಘ್ರದಲ್ಲಿಯೇ ಅತ್ತಕಡೆ ಜಮಾಬಂದಿ ಕಾರ್ಯಕ್ಕೆ

ಬರುತ್ತಿರುವುದರಿಂದ, ಆಗ ಎಲ್ಲವನ್ನೂ ಸರಿಪಡಿಸುವೆ ಎಂದು ಹೇಳಿ ದಿಲಾವರಖಾನನಿಗೆ ಸಮಾಧಾನಪಡಿಸಿ ಕಳಿಸಿದನು.

ಮುಂದೆ ಕಲೆಕ್ಟರನು ತಾನು ಹೇಳಿದಂತೆ, ಶಿಗ್ಗಾವಿಗೆ ಬಂದನು. ಆಗ ದಿಲೇರಖಾನನು ತನ್ನ ದಿವಾಣನನ್ನು ಕಳಿಸಿ, ಕಲೆಕ್ಟರನಿಗೆ ಸವಣೂರಿಗೆ ಒಂದು ದಿವಸದ ಮಟ್ಟಿಗಾದರೂ ಬಂದು ಭೇಟಿಯನ್ನಿಡಬೇಕೆಂದು ಹೇಳಿ ಕಳಿಸಿದನು.ಕಲೆಕ್ಟರ ಮತ್ತು ಅಸಿಸ್ಟೆಂಟ್ ಕಲೆಕ್ಟರ ಕೂಡಿ ಸವಣೂರಿಗೆ ಸಂದರ್ಶನವನ್ನಿತ್ತರು. ನವಾಬನು ಅವರಿಗೆ ಅಭೂತಪೂರ್ವ ಸ್ವಾಗತವನ್ನಿತ್ತನು. ಅವರು ಸವಣೂರಿಗೆ ಬಂದಾಗ ರಾತ್ರಿಯಾಗುತ್ತ ಬಂದಿದ್ದರೂ, ಹಗಲಿನಷ್ಟೇ ಸ್ವಚ್ಛ ಪ್ರಕಾಶವು ಬೀಳುವಂತೆ ಅಸಂಖ್ಯ ಹಿಲಾಲುಗಳನ್ನು ಹಚ್ಚಿಸಿದನು. ಅತಿಥಿಗಳನ್ನು ಆನೆಯ ಮೇಲೆ ಅಂಬಾರಿಯಲ್ಲಿ ಕೂಡಿಸಿ ತನ್ನ ಅರಮನೆಗೆ ಮೆರೆಸುತ್ತ ಕರೆತಂದನು. ಅವರಿಗೆ ಮೇಜವಾನಿಮಾಡಿಸಿ, ಮೋತೀತಲಾವನ್ನು ತೋರಿಸಿ, ಭಾರವಾದ ಅಹೇರುಗಳನ್ನಿತ್ತು, ಆದರದಿಂದ ಬೀಳ್ಕೊಟ್ಟನು.

### ಜಮಾಬಂದಿ

ಕಲೆಕ್ಟರನು ಹೋದ ಒಂದೇ ವಾರದಲ್ಲಿ ನವಾಬ ದಿಲೇರಖಾನನು ಹಳ್ಳಿಗಳ ಸರ್ವೇಕ್ಷಣಕ್ಕೆ ಹೊರಟನು. ಅವನು ಸಂದರ್ಶಿಸುವ ಹಳ್ಳಿಗಳಿಗೆ ಪೂರ್ವಭಾವಿಯಾಗಿ ತಿಳಿಸಿ, ಅಲ್ಲಿಯ ರೈತರನ್ನು ಭೇಟಿಯಾಗಿ ಅವರ ಸುಖದುಃಖಗಳನ್ನು ವಿಚಾರಿಸಿ, ಯಾವ ರೈತನಿಗಾದರೂ ಕಂದಾಯವು ಭಾರವೆನಿಸಿದರೆ, ಅದನ್ನು ತತ್‌ಕ್ಷಣವೇ ಕಡಿಮೆ ಮಾಡುತ್ತಿದ್ದನು. ಅನೇಕರಿಗೆ ಆ ವರುಷದ ಕಂದಾಯವನ್ನು ಕೊಡಬಾರದೆಂದು ಆಜ್ಞೆಯನ್ನು ಹೊರಡಿಸುತ್ತಿದ್ದನು. ಒಂದೊಂದು ಹಳ್ಳಿಯಲ್ಲಿ ಎರಡೆರಡು ದಿವಸ ನಿಂತು ಎಲ್ಲ ಹೊಲಗಳನ್ನು ನೋಡಿ, ಅವುಗಳ ಕಂದಾಯವನ್ನು ಸರಿಪಡಿಸುತ್ತಿದ್ದನು. ಸ್ವತಃ ನವಾಬನೇ ಸಮಾದಾನದಿಂದ ಕಂದಾಯವನ್ನು ವಸೂಲು ಮಾಡುತ್ತಿದ್ದನು. ಇದರಿಂದ ಕಾರಕೂನರು, ಕುಲಕರ್ಣಿಗಳು ತಮ್ಮ ತಮ್ಮ ಕಾರ್ಯವನ್ನು ದಕ್ಷತೆ ಹಾಗೂ ಪ್ರಾಮಾಣಿಕತೆಯಿಂದ ಮಾಡುತ್ತಿದ್ದರು.

### ಬಸವನಕೊಪ್ಪದ ಸಮಸ್ಯೆಗೆ ಪರಿಹಾರ

ನವಾಬ ಅಬ್ದುಲ್ ದಿಲೇರಖಾನನಿಗೆ ರಾಜಕುಮಾರ ಅಬ್ದುಲ್ ಕರೀಮಖಾನನು ಹುಟ್ಟಿದನು. ಈ ಸಂತೋಷದಲ್ಲಿ ರಾಜಕುಟುಂಬವು ತೇಲುತ್ತಿರುವಾಗ ತಾತ್ಪೂರ್ತಿಕವಾಗಿ ಧಾರವಾಡದ ಕಲೆಕ್ಟರನೆಂದು ಕಾರ್ಯವನ್ನು ನಿರ್ವಹಿಸುತ್ತಿದ್ದ ವಿಲಿಯಮ್ ಎಡ್ವರ್ಡ್ ಬೇಬರನು ಮುಂಬೈ ಸರಕಾರದಿಂದ ಬಂದ ಆಜ್ಞೆಯ ಪ್ರತಿಯನ್ನು ಕಳಿಸಿ ಒಂದು ಪತ್ರವನ್ನು ಬರೆದನು. ಕಲೆಕ್ಟರನು ತನ್ನ ಪತ್ರದಲ್ಲಿ :

"ಮುಂಬೈ ಸರಕಾರವು, ಆಜ್ಞೆ ನಂ.೧೯೧, ಜಾನೇವರಿ ೧೨,೧೮೪೬, ಪ್ರಕಾರ ಬಸವನಕೊಪ್ಪದ ನಾಲ್ಕೂ ಹಳ್ಳಿಗಳನ್ನು ನಿಮಗೆ ಒಪ್ಪಿಸಿಕೊಡಲಾಗಿದೆ. ಆ ಹಳ್ಳಿಗಳನ್ನು ನೀವು ವ್ಯವಸ್ಥಿತವಾಗಿ ಆಳಬೇಕು. ಆ ಹಳ್ಳಿಗಳ ಸಾಮಾನ್ಯರಿಗೆ ಹಾಗೂ ರಾಜಮನೆತನದ ಖಾಂಜಾದಾ ಜನರಿಗೆ ತೊಂದರೆ ಆಗದಂತೆ ನಿಮ್ಮ ಅಧಿಕಾರವನ್ನು ಚಲಾಯಿಸಬೇಕು. ಬಸವನಕೊಪ್ಪದ ಖಾಂಜಾದೆ ಜನರಿಗೂ ಕೂಡ ಎಚ್ಚರಿಸಿ, ಒಳ್ಳೇ ರೀತಿ ನಡೆದುಕೊಳ್ಳಲು ಬೇರೆ ಆಜ್ಞೆಗಳನ್ನು ಅವರಿಗೆ ಕಳಿಸಲಾಗಿದೆ.

ಈ ಆಜ್ಞೆಯಲ್ಲಿರುವಂತೆ ನೀವು ಇನ್ನು ನಿಮ್ಮ ಅಧಿಕಾರವನ್ನು ಈ ಹಳ್ಳಿಗಳ ಮೇಲೆ ಪ್ರಸ್ಥಾಪಿಸಿ ಹಳ್ಳಿಗಳಲ್ಲಿ ಸುಖಶಾಂತಿಗಳನ್ನು ಕಾಪಾಡಿಕೊಳ್ಳಬೇಕು". ಎಂದು, ನವಾಬ ದಿಲೇರಖಾನನಿಗೆ ತಿಳಿಸಿದಾಗ ದಿಲೇರಖಾನನಿಗೆ ಅತ್ಯಂತ ಸಂತೋಷವಾಯಿತು. ದರ್ಬಾರವನ್ನು ನೆರೆಯಿಸಿ ಸರಕಾರದ ಈ ಆಜ್ಞೆಯನ್ನು ಮುನಸಿ ಶಿವರಾಯನಿಂದ ಗಟ್ಟಿಯಾಗಿ ಓದಿಸಿ, ಅವನಿಗೆ ನೂರು ರೂಪಾಯಿ ಬಹುಮಾನವನ್ನಿತ್ತನು. ಎಲ್ಲರಿಗೂ ಸರಕಾರದ ಈ ಆಜ್ಞೆ ತಿಳಿಯಲೆಂದು ನವಾಬನ ಉದ್ದೇಶವಾಗಿತ್ತು. ಈ ಸಂತೋಷದ ಸಂದರ್ಭದಲ್ಲಿ ನಜರಾಣೆ ಸ್ವೀಕರಿಸಿ, ಅನೇಕರಿಗೆ ಮೆಚ್ಚುಕೆಗಳನ್ನು ಕೊಟ್ಟನು. ನವಾಬನಿಗೆ ನಜರಾಣೆ ಕೊಟ್ಟವರಲ್ಲಿ ಅನೇಕ ಖಾಂಜಾದಾ ಜನರೂ ಸೇರಿಕೊಂಡಿದ್ದರು.

ನಂತರ ನವಾಬನು, ಅಧಿಕಾರಿಗಳು ಹಾಗೂ ಸರದಾರರೊಂದಿಗೆ ಬಸವನಕೊಪ್ಪಕ್ಕೆ ಭೇಟಿಯನ್ನಿತ್ತು ಬಸವನಕೊಪ್ಪದ ಪೂರ್ಣ ಅಧಿಕಾರವನ್ನು ವಹಿಸಿಕೊಂಡನು. ನವಾಬ ದಿಲೇರಖಾನನು ಬವನಕೊಪ್ಪಕ್ಕೆ ಭೇಟಿಯನ್ನಿತ್ತಾಗ ತೊಂದರೆ ಕೊಡುತ್ತಿದ್ದ ಖಾಂಜಾದಾ ಮನೆತನದವರೆಲ್ಲರೂ ಬಸವನಕೊಪ್ಪವನ್ನು ಬಿಟ್ಟು ಬೇರೆಡೆ ಪಲಾಯನ ಮಾಡಿದ್ದರು. ಕಾಗೆಯ ಧ್ವನಿಯನ್ನು ಬಿಟ್ಟು ಅಲ್ಲಿ ಮನುಷ್ಯರ ಧ್ವನಿಯೇ ಕೇಳದಷ್ಟು ಬಸವನಕೊಪ್ಪ ನಿಶಃಬ್ದವಾಗಿತ್ತಂತೆ. ಅದಕ್ಕೆ ಮುಂದೆ, ಎಷ್ಟೋ ದಿವಸ ರಾಜಮನೆತನದವರು ಅಂಜಿ ಬಸವನಕೊಪ್ಪವನ್ನು ತೊರೆದು ಹೋಗಿದ್ದರಿಂದ ಅದಕ್ಕೆ 'ಕಾಗೀಬಸವನಕೊಪ್ಪ'ಎಂದು ಕರೆಯುತ್ತಿದ್ದರು. ಬಸವನಕೊಪ್ಪದ ಜನರನ್ನು ಗೋಳು ಹೊಯ್ದುಕೊಂಡು ಅವರನ್ನು ದುಃಸ್ಥಿತಿಗಿಳಿಸಿದ ದುಷ್ಟ ಖಾಂಜಾದಾ ಮನೆತನದವರು ಅಲ್ಲಿಂದ ಕಾಲುಕಿತ್ತು ಬೇರೆಕಡೆ ಹೋದರು. ನವಾಬನು ನಾಲ್ಕು ದಿವಸಗಳ ಕಾಲ ಬಸವನಕೊಪ್ಪದಲ್ಲಿ ನಿಂತು, ಸಾಮಾನ್ಯ ಜನರ ಸಂಕಷ್ಟಗಳನ್ನು ಕೇಳಿಕೊಂಡನು.ಕಂದಾಯ ಕೊಡಲು ಅಸಮರ್ಥರಾದ ರೈತರ ಕಂದಾಯವನ್ನು ಸೂಟುಬಿಟ್ಟು, ಕೆಲ ರೈತರಿಗೆ ಸುಧಾರಿಸಿಕೊಳ್ಳಲು ತಗಾವಿ ಸಾಲವನ್ನು ಕೊಟ್ಟನು. ಅಬ್ದುಲ್ ಹಕೀಮಖಾನನು ೧೮೭೪ರಲ್ಲಿ ತೀರಿಕೊಂಡಾಗ ಅಬ್ದುಲ್ ಖೈರಖಾನನು ಸರಿಯಾದ ಸಮಯಕ್ಕೆ ಸವಣೂರಿಗೆ ಬಾರದ್ದರಿಂದ, ಅವನ ತಮ್ಮ ಅಬ್ದುಲ್ ಹುಸೇನಖಾನನು ತಾತ್ಪೂರ್ತಿಕವಾಗಿ ಅಧಿಕಾರವನ್ನು ವಹಿಸಿಕೊಂಡನು. ಮುಂದೆ ಅಧಿಕಾರವನ್ನು ಬಿಟ್ಟುಕೊಡಲು ಒಪ್ಪದಾಗ ಖೈರಖಾನನು ಪುಣೆಗೆ ಹೋಗಿ ಅಧಿಕಾರವನ್ನು

ಪಡೆದದ್ದು ವಿದಿತವೇ ಇದೆ. ಮುಂದೆ ಖೈರಖಾನನು ಹುಸೇನಖಾನನನ್ನು ಬಸವನಕೊಪ್ಪಕ್ಕೆ ಹೊತ್ತುಹಾಕಿದನು. ಹುಸೇನಖಾನ ತೀರಿಕೊಂಡ ಮೇಲೆ ಅವನ ಮಗನು ದುಷ್ಟರನ್ನು ಸೇರಿಸಿಕೊಂಡು, ಅದು ತನ್ನದೇ ಜಹಗೀರೆಂದು ಪುಂಡಾಕೆ ಆಡಹತ್ತಿದ್ದನು. ಈ ಪುಂಡಾಟಿಕೆ ೧೮೪೭ರವರೆಗೂ ನಡೆಯಿತು. ಈಗ ಅವರೆಲ್ಲರ ನಿರ್ಗಮನದಿಂದ ಬಸವನಕೊಪ್ಪವು ಮರಳಿ ಅಬ್ದುಲ್ ದಿಲೇರಖಾನನ ಕೈಗೆ ಬಂದಂತಾಯಿತು. ಅದಕ್ಕೆ ಖೈರಖಾನನು ಅಲ್ಲಿ ಗುಲಾಬಿ ತೋಟವನ್ನು ಬೆಳೆಸಿ, ಅದರ ಅಭಿವೃದ್ಧಿಯನ್ನು ಮಾಡಿದನು. ಇದರಿಂದ ಬವನಕೊಪ್ಪಕ್ಕೆ ಹೊಸಜೀವ ಬಂದಂತಾಯಿತು. ಅಬ್ದುಲ್ ದಿಲೇರಖಾನನು ಬಸವನಕೊಪ್ಪದಲ್ಲಿ ಶಾಂತಿ ವ್ಯವಸ್ಥೆಯನ್ನು ಸ್ಥಾಪಿಸಿ, ಸಿದ್ಧಾಪುರಕ್ಕೆ ಹೋಗಿ ಅಲ್ಲಿಂದ ನೇರವಾಗಿ ಗಳಗನಾಥಕ್ಕೆ ಬಂದನು. ಕಾರಣ ದಿಲೇರಖಾನನ ಮಕ್ಕಳು ಹಲವಾರು ದಿನಗಳಿಂದ ವಿಹಾರಕ್ಕೆ ಹೋಗಬೇಕೆಂದು ತಂದೆಗೆ ಒತ್ತಾಯ ಮಾಡುತ್ತಿದ್ದರು. ನದಿ ಸಂಗಮದ ಬಳಿ ಡೇರೆ ಹಾಕಿಸಿ, ನಾಲ್ಕು ದಿವಸಗಳ ಕಾಲ ಪರಿವಾರದೊಂದಿಗೆ ದಿಲೇರಖಾನನು ಸಂತೋಷದಿಂದ ಕಾಲ ಕಳೆದನು. ನಂತರ ಸವಣೂರಿಗೆ ಬಂದನು.

ಸವಣೂರಿಗೆ ನವಾಬನು ಬಂದೊಡನೆ ಅವನಿಗಾಗಿ ಇನ್ನೊಂದು ಸಂತೋಷದ ಸಂಗತಿ ಕಾದಿತ್ತು. ಧಾರವಾಡದ ಕಲೆಕ್ಟರನು ದಿಲೇರಖಾನನಿಗೆ ಒಂದು ಪತ್ರ ಬರೆದು "ಬ್ರಿಟಿಶ್ ಸೈನಿಕರು ಶೀಖ ಜನರೊಂದಿಗೆ ಯುದ್ಧಕ್ಕಿಳಿದಾಗ, ಶೀಖರು ಕೂಡ ಹೋರಾಡಿ ರಕ್ತಪಾತ ಮಾಡಿದರು. ಅನೇಕ ದಿವಸಗಳಿಂದ ಯುದ್ಧಗಳು ನಡೆದು ಪಂಜಾಬದ ನೆಲವೆಲ್ಲ ರಕ್ತದಿಂದ ತೊಯ್ದುಮೇಲೆ ಈಗ ನಮ್ಮ ಸೈನಿಕರಿಗೆ ವಿಜಯ ದೊರೆತಿದೆ. ಈ ವಿಜಯದ ಸ[illegible]ನ್ನು ಗವರ್ನರರು ಎಲ್ಲ ಜಿಲ್ಲೆಗೂ ತಿಳಿಸಿದ್ದಾರೆ. ನೀವು ನಮ್ಮ ಹಿತಚಿಂತಕರು ಮತ್ತು ಆಪ್ತ ಸ್ನೇಹಿತರು ಇರುವುದರಿಂದ ಈ ಸಂತೋಷದ ಸುದ್ದಿಯನ್ನು ನಿಮಗೆ ತಿಳಿಸಿದ್ದೇವೆ"ಎಂದು ತಿಳಿಸಿದನು.

ಮೊಹರಮ್ ಹಬ್ಬದ ಮಧ್ಯದಲ್ಲಿ ಹಲಗೂರಿನಲ್ಲಿ ನಡೆಯುವ ಉರುಸಿಗೆ ನವಾಬ ದಿಲೇರಖಾನನು ಬರಬೇಕೆಂದು ಸೈಯ್ಯದ ಅಬ್ದುಲ್ ರಜಾಕ್ ಶಹಾ ಖಾದರಿ ಆಗ್ರಹಪೂರ್ವಕವಾಗಿ ಆಹ್ವಾನಿಸಿದ್ದನು. ನವಾಬನು ಅಲ್ಲಿಗೆ ಹೋಗಿ ನಮಾಜಿನಲ್ಲಿ ಭಾಗವಹಿಸಿ,ದರ್ಗಾದ ಮೇಲೆ ಹೊದಿಸಲು ಬೆಲೆಬಾಳುವ ಹಾಗೂ ನಕ್ಷೆಯ ವಸ್ತ್ರ ಒಂದನ್ನು ಕೊಟ್ಟನು.

ಹಾಗೆಯೇ ಮರುದಿವಸ ಹುಲಗೂರು ಸುತ್ತಲಿನ ಶಾಲೆಗಳಿಗೆ ಸಂದರ್ಶನವನ್ನಿತ್ತನು. ಅಲ್ಲದೆ, ದರ್ಗಾಕ್ಕೆ ಸಂಬಂಧಿಸಿದ ಶಾಲೆಗಳನ್ನು ನೋಡಿ ಸಮಾಧಾನವನ್ನು ವ್ಯಕ್ತಪಡಿಸಿದನು. ಅಲ್ಲಿಂದ ನೇರವಾಗಿ ಸವಣೂರಿಗೆ ಬಂದನು. ಅವನ ಜೊತೆ ಅವನ ಪರಿವಾರವೂ ಇತ್ತು.

ಮುಂಬೈ ಪ್ರಾಂತದ ಜ್ಯುಡೀಷಿಯಲ್ ಕಮೀಷನರ್ ವಿಲಿಯಮ್ ಲಿಗೆಟ್ ಎಲ್ಲ ಜಿಲ್ಲೆಗಳಿಗೂ ಭೇಟಿಯನ್ನಿತ್ತು, ಧಾರವಾಡ ಜಿಲ್ಲೆಗೆ ಬಂದನು. ಇದನ್ನು ಕೇಳಿದ ನವಾಬ ದಿಲೇರಖಾನನು ಖ್ವಾಜಾಮೀರ ಅಹಮ್ಮದ ಅಲೀಖಾನ ಹಾಗೂ ಭಕ್ಷಿ ಖಾದರಖಾನರನ್ನು ಪತ್ರದೊಂದಿಗೆ ಧಾರವಾಡಕ್ಕೆ ಕಳಿಸಿದನು. ನವಾಬನು ತಾನು ಪುಣೆಯಲ್ಲಿರುವಾಗ ವಿಲಿಯಮ್‌ರೊಂದಿಗೆ ಬಂದ ಹಳೆಯ ಸಂಬಂಧವನ್ನು ಸ್ಮರಿಸಿ ಅವರನ್ನು ಸವಣೂರಿಗೆ ಆಹ್ವಾನಿಸಿದನು. ನವಾಬನ ಪತ್ರವನ್ನು ನೋಡಿ, ಕಮೀಶನರರಿಗೆ ಮಹದಾನಂದವಾಯಿತು. ಅವರಿಗೆ ಸವಣೂರಿಗೆ ಹೋಗುವ ಮನಸ್ಸಿತ್ತು. ಆದರೆ ಸಮಯಾಭಾವದಿಂದ ಹೋಗಲಾರದೆ ನವಾಬರಿಗೆ ಪತ್ರ ಬರೆದು "ಸವಣೂರಿಗೆ ಬರುವ ಇಚ್ಛೆಯಿದೆ. ಆದರೆ ಈಗ ಬರಲಾಗುವುದಿಲ್ಲ. ಮುಂದಿನ ಸಲ ಬಂದಾಗ ಖಂಡಿತ ನಿಮ್ಮೂರಿಗೆ ಬರುವೆ" ಎಂದು ತಿಳಿಸಿದರು. ನವಾಬನು ಖ್ವಾಜಾ ಮೀರ ಅಹಮ್ಮದ ಆಲೀಖಾನನೊಂದಿಗೆ ಬೇಟೆಯ ಗಿಡಗವನ್ನು ಧಾರವಾಡಕ್ಕೆ ಕಳಿಸಿ, ಒಂದು ಸಮಯ ಕಮೀಶನರರು ಬೇಟೆಗೆ ಹೋಗುವ ಇಚ್ಛೆಯನ್ನು ವ್ಯಕ್ತಪಡಿಸಿದರೆ, ಅವರಿಗೆ ಈ ಗಿಡಗವನ್ನು ಕೊಡಬೇಕೆಂದು ಹೇಳಿ ಕಳಿಸಿದ್ದನು. ಈ ಪಕ್ಷಿಯನ್ನು ನೋಡಿ ಸಾಹೇಬರಿಗೆ ಬಾಯಲ್ಲಿ ನೀರೂರಿದವು. ಅವರು ನವಾಬರ ಆಳಿನೊಂದಿಗೆ ಬೇಟೆಗೆ ಹೋದರು. ನವಾಬನು ಕಳಿಸಿದ ಗಿಡಗವು ಎರಡು ಗಂಡು ಜಿಂಕೆಗಳೊಂದಿಗೆ ಹೋರಾಡಿ ಕೊಂದಾಗ, ಕಮೀಶನರರಿಗೆ ಎಲ್ಲಿಲ್ಲದ ಖುಷಿ. ಮಿ॥ ವಿಲಿಯಮ್ ಲಿಗೆಟ್‌ನು ನವಾಬನಿಗೆ ೧೮೫೪ರಲ್ಲಿ ಪತ್ರವನ್ನು ಬರೆದು,ಅವನ ಗಿಡಗದ ಸಾಹಸದ ಬಗ್ಗೆ ಪ್ರಶಂಸೆಯನ್ನು ವ್ಯಕ್ತಪಡಿಸಿದನು. ಈ ಪತ್ರವನ್ನು ನೋಡಿ ನವಾಬ ದಿಲೇರಖಾನನಿಗೆ ಆನಂದವಾಯಿತು.

## ನವಾಬನ ದಿನಚರಿ

ಅಬ್ದುಲ್ ದಿಲೇರಖಾನ ನವಾಬನು ಅತ್ಯಂತ ಧಾರ್ಮಿಕ ಪ್ರವೃತ್ತಿಯವನಿದ್ದನು. ತನ್ನ ಅರಮನೆಯ ಸಮೀಪದಲ್ಲಿಯೇ ಒಂದು ಮಸೀದಿಯನ್ನು ಕಟ್ಟಿಸಿಕೊಂಡು, ನಿತ್ಯವೂ ನಡೆಯುತ್ತ ಅಲ್ಲಿಗೆ ಹೋಗಿ ಪ್ರಾರ್ಥನೆಗಳನ್ನು ಸಲ್ಲಿಸುತ್ತಿದ್ದನು. ಧಾರ್ಮಿಕ ಗ್ರಂಥಗಳ ಅಭ್ಯಾಸವೆಂದರೆ ನವಾಬನಿಗೆ ಅತ್ಯಂತ ಪ್ರೀತಿ. ಅವನು ಮುಂಜಾನೆ ಹನ್ನೊಂದು ಗಂಟೆಯ ಹೊತ್ತಿಗೆ ದರಬಾರನ್ನು ಸೇರಿಸಿ, ಸಚಿವರು, ಸರದಾರರು ಮತ್ತು ಅಧಿಕಾರಿಗಳೊಡನೆ ರಾಜ್ಯದ ವಿಷಯಗಳನ್ನು ಕುರಿತು ಚರ್ಚಿಸುತ್ತಿದ್ದನು. ಅವನ ದರಬಾರದಲ್ಲಿ ಮುಸಲ್ಮಾನ ಮತ್ತು ಬ್ರಾಹ್ಮಣ ಅಧಿಕಾರಿಗಳಿರುತ್ತಿದ್ದರು. ವಾರದಲ್ಲಿ ಎರಡು ದಿವಸ ದಿವಾಣಿ ಪ್ರಕರಣಗಳನ್ನು ಹಾಗೂ ಎರಡು ದಿವಸ ಪೌಜಧಾರಿ ಪ್ರಕರಣಗಳನ್ನು ಚರ್ಚಿಸಿ ನಿರ್ಣಯವನ್ನೀಯುತ್ತಿದ್ದನು.

ನವಾಬನು ತನ್ನ ರಾಜ್ಯದ ಉತ್ಪನ್ನವನ್ನು ಹೆಚ್ಚಿಸಲು ಕೆರೆಯ ಹತ್ತಿರದ ನವಾಬಾಗದಲ್ಲಿ ಒಂದು ಲಕ್ಷ ತೆಂಗಿನ ಗಿಡಗಳನ್ನು ಎರಡು ಲಕ್ಷ ಅಡಿಕೆ ಗಿಡಗಳನ್ನು, ಅಸಂಖ್ಯ ಹಣ್ಣಿನ

ಗಿಡಗಳನ್ನು ಹಚ್ಚಿಸಿದ್ದನು. ಸವಣೂರಲ್ಲಿ ಏಲಕ್ಕಿ, ದ್ರಾಕ್ಷಿ, ವಿಳೇದೆಲೆಗಳನ್ನು ಬೆಳೆಯುತ್ತಿದ್ದನು. ನವಾಬನ ಬಳಿ ನಾಲ್ಕು ನೂರು ಅನುಭವಿಕ ತೋಟಗಾರರಿದ್ದರು.

ಆಡಳಿತೆಯಲ್ಲಿ ಅವನು ಸಾಕಷ್ಟು ಸುಧಾರಣೆಯನ್ನು ಮಾಡಿದ್ದನು. ಬುದ್ಧಿವಂತನಾಗಿದ್ದ ಮಹಮ್ಮದ ಗೌಸಖಾನನನ್ನು ಸವಣೂರು ರಾಜ್ಯದ ಅತ್ಯುಚ್ಚ ಸ್ಥಾನವಾದ ದಿವಾಣಗಿರಿ ಪದವಿಗೆ ನಿಯಮಿಸಲ್ಪಟ್ಟಿದ್ದನು. ಪೀರಖಾನ ಕಾಸೀಮಖಾನ ಸೂರನನ್ನು ರಿಸಾಲದಾರನೆಂದು, ಖಾದರಖಾನ ಭಕ್ಷಿಯನ್ನು ಭಕ್ಷಿ ಪದವಿಗೆ (ಹಣಕಾಸನ್ನು ವಿತರಿಸುವ ಅಧಿಕಾರಿ), ಧರ್ಮಶಾಸ್ತ್ರದಲ್ಲಿ ಪರಿಣಿತನಿದ್ದ ಮೌಲವಿ ಕರೀಮುದ್ದೀನ ಸಾಹೇಬನನ್ನು ನ್ಯಾಯ ನಿರ್ಣಯಾಧಿಕಾರಿಯೆಂದು ಹಾಗೂ ಸರಕಾರದ ಆಜ್ಞೆಗಳನ್ನು ಜನರು ಸರಿಯಾಗಿ ಪಾಲಿಸುವಂತೆ ನೋಡಿಕೊಳ್ಳಲು ಬಾಬೂಖಾನ ತರೀನ ಅನ್ನುವವನನ್ನು ಜಮಾದಾರನೆಂದು, 'ದಿಲೇರಜಂಗ ದಿಲೇರಬಹದ್ದೂರ' ಅನ್ನುವ ಐತಿಹಾಸಿಕ ಕಾವ್ಯವನ್ನು ಪ್ರಕಟಿಸಿದ ಮೊಹಮ್ಮದ ಅಜೀಮುದ್ದೀನ ದಳವಿಯನ್ನು ಮುನಸಿಯೆಂದು, ಶಿವರಾಮ ನಾರಾಯಣ ಅನ್ನುವವನನ್ನು ಪತ್ರಗಳಿಗೆ ಸರಕಾರಿ ಉತ್ತರ ಬರೆಯುವ ಅಧಿಕಾರಿಯೆಂದು, ರಾಮಚಂದ್ರ ವೆಂಕಾಜಿ ಅನ್ನುವವನನ್ನು ಶಿರಸ್ತೇದಾರನೆಂದು, ವೆಂಕಟರಾವ ಅನ್ನುವವನನ್ನು ಕಂದಾಯದ ದಾಖಲೆಗಳನ್ನಿಡಲು, ಶ್ರೀನಿವಾಸರಾವ ಅನ್ನುವವನನ್ನು ಹೊರಗಿನಿಂದ ಬರುವ ಹಾಗೂ ಇಲ್ಲಿಂದ ಹೊರಗೆ ಹೋಗುವ ಕಾಗದಗಳ ದಾಖಲೆಗಳನ್ನಿಡುವ ಅಧಿಕಾರಿಗಳೆಂದು ನಿಯಮಿಸಿದ್ದನು. ದಿವಾಣಿ ಹಾಗೂ ಪೌಜದಾರಿ ಪ್ರಕರಣಗಳನ್ನು ವಾದಿಸಲು ದುರ್ಗಾಪ್ರಸಾದ ಮಿಶ್ರಾ ಹಾಗೂ ಸುಬ್ಬರಾವ ಅನ್ನುವವನನ್ನು ಸರಕಾರಿ ವಕೀಲನೆಂದು, ಸುರಜ ಮಲ್ಲನನ್ನು ಜಮೇದಾರನೆಂದು, ರಾಘವೇಂದ್ರರಾಯನನ್ನು ಸರಕಾರೀ ಭೂಮಿಗಳ ಕಂದಾಯವನ್ನು ವಸೂಲಿ ಮಾಡುವ ಅಧಿಕಾರಿಯೆಂದು ನಿಯಮಿಸಿದ್ದರೆ, ಬಸಪ್ಪ ಕುಲಕರ್ಣಿ ಅನ್ನುವವನನ್ನು ಪೋಲೀಸ್ ವ್ಯವಸ್ಥೆಯನ್ನು ನೋಡಿಕೊಳ್ಳಲು ನಿಯಮಿಸಿಕೊಂಡಿದ್ದನು. ಹೀಗೆ ರಾಜ್ಯದಲ್ಲಿ ವಿವಿಧ ಅಧಿಕಾರಿಗಳಿಗೆ ವಿಧವಿಧದ ಹೊಣೆಗಾರಿಕೆಗಳನ್ನು ಹೊರೆಸಿ, ಅಧಿಕಾರವನ್ನು ಒಂದು ರೀತಿ ವಿಕೇಂದ್ರೀಕರಿಸಿ ಕೊಂಡಿದ್ದನು.

ನವಾಬ ದಿಲೇರಖಾನ ಬಹದ್ದೂರನು ಕಾಮನಷ್ಟು ಸುಂದರನಿದ್ದನು. ಚಂದ್ರನಷ್ಟು ಅಹ್ಲಾದಕರನಿದ್ದನು. ಅವನ ಸೌಂದರ್ಯವನ್ನು ನೋಡಿ ಆಮೋದಿಸಲು ಅನೇಕ ಹೆಣ್ಣು ಮಕ್ಕಳು ತವಕಪಡುತ್ತಿದ್ದರು. ನವಾಬ ಸಾಹೇಬನು ಧಾರ್ಮಿಕ ಪ್ರವೃತ್ತಿಯವನಿದ್ದುದರಿಂದ ನಿತ್ಯವೂ ನಮಾಜು ಮಾಡುತ್ತಿದ್ದನು. ಒಂದು ದಿವಸ ನವಾಬನು ಅರಮನೆಯಿಂದ ನಡೆಯುತ್ತ ಮಸೀದಿಗೆ ಹೋಗುವಾಗ ದುಷ್ಕರ್ಮಿಯೊಬ್ಬನು ಅವನನ್ನು ಕೊಲ್ಲಲು ಒಂದು ಒಳಸಂಚನ್ನು ಹೂಡಿ ಗುಂಡು ಹಾರಿಸಲು ಅಡಗಿ ನಿಂತಿದ್ದನು.ಇದನ್ನು ಕಂಡುಹಿಡಿದ ಅರಮನೆಯ ಗುಪ್ತಚಾರರು ಅವನನ್ನು ಬಂಧಿಸಿ ನವಾಬನ ಎದುರು ತಂದು ನಿಲ್ಲಿಸಿದರು.

ನವಾಬನು ಅಲ್ಲಾನೇ ಅವನಿಗೆ ತಕ್ಕ ಶಿಕ್ಷೆಯನ್ನೀಯಲೆಂದು ಅವನನ್ನು ಬಂಧಮುಕ್ತ ಮಾಡಲು ಆಜ್ಞೆಯನ್ನಿತ್ತನು.

ನಮಾಜು ಮುಗಿದ ಮೇಲೆ ಅಶ್ವಸವಾರಿ ಮಾಡಿ ಬಂದು, ಹುಕ್ಕಾ ಸೇದುತ್ತಿದ್ದನು. ನವಾಬನು ನಿತ್ಯವೂ ತನ್ನ ಅರಮನೆಯ ಗ್ರಂಥಭಂಡಾರದಲ್ಲಿ ಕುಳಿತು ಅಬ್ದುಲ್ ಹಮೀದನ "ವಿದ್ಯಮಾನ" ಎಂಬ ಧರ್ಮನೀತಿ ಬೋಧಿಸುವ ಗ್ರಂಥವನ್ನು ಅಭ್ಯಸಿಸುತ್ತಿದ್ದನು.

ನವಾಬನು ಭೋಜನ ಸ್ವೀಕರಿಸುವಾಗ ಎಲ್ಲ ಬಳಗದವರನ್ನು ಸ್ನೇಹಿತರನ್ನು ಆಹ್ವಾನಿಸುತ್ತಿದ್ದನು. ಆಗ ಪರಿವಾರದೊಂದಿಗೆ ಕುಶಲ ಮಾತುಗಳನ್ನಾಡುತ್ತಿದ್ದನು. ನಂತರ ಕಚೇರಿಗೆ ಹೋಗಿ ರಾಜ್ಯದ ಆಡಳಿತೆಯನ್ನು ನೋಡಿಕೊಳ್ಳುತ್ತಿದ್ದನು. ಹೀಗಾಗಿ ಸವಣೂರಲ್ಲಿ ನ್ಯಾಯದಾನವು ವಿಳಂಬವಾಗುತ್ತಿರಲಿಲ್ಲ. ನವಾಬ ದಿಲೇರಖಾನನ ಕರ್ತೃತ್ವ ಶಕ್ತಿ, ಕಾಯಿದೆಜ್ಞಾನ, ಆಡಳಿತೆಯ ಅನುಭವವನ್ನು ಗುರುತಿಸಿದ ಬ್ರಿಟಿಶ ಸರಕಾರವು, ೧೮೬೨ರಲ್ಲಿ ನವಾಬನನ್ನು ಮುಂಬೈ ವಿಧಾನ ಪರಿಷತ್ತಿನ ಸದಸ್ಯನೆಂದು ನಾಮಕರಣ ಮಾಡಿತು. ಅಬ್ದುಲ್ ದಿಲೇರಖಾನ ದಿಲೇರಜಂಗನು ತನ್ನ ಸಂಸ್ಥಾನದ ಎಲ್ಲ ಹಳ್ಳಿಗಳ ಹೊಲಗಳನ್ನು ಮೋಜಣಿ ಮಾಡಿಸಿ,ಹೊಸ ಭೂಕಂದಾಯ ಪದ್ಧತಿಯನ್ನು ಜಾರಿಗೆ ತಂದನು.

ನವಾಬನು ಕತ್ತಿವರಸೆಯಲ್ಲಿ ಪ್ರಸಿದ್ಧರಾದ ಹಲವಾರು ಶೂರ ಸರದಾರರನ್ನು ತನ್ನ ಬಳಿ ಇಟ್ಟುಕೊಂಡಿದ್ದನು. ಅಲ್ಲದೆ, ಸರಕಾರದ ಸೇವೆಯಲ್ಲಿ, ಭಾರವೆತ್ತುವಲ್ಲಿ ಅತ್ಯಂತ ವಿಖ್ಯಾತನಾಗಿದ್ದ ಅಬೂಬಕರಖಾನ ಅನ್ನುವ ಪೈಲವಾನ ಹಮಾಲನಿದ್ದನು. ಇವನದು ಬಕಾಸುರನ ಆಹಾರ, ಭೀಮನ ಶಕ್ತಿ, ಅವನು ಬೆಳಗಿನ ಉಪಹಾರಕ್ಕೆ ಹದಿನಾರು ಸೇರು ಹಿಟ್ಟಿನ ಗೋದಿ ರೊಟ್ಟಿಗಳನ್ನು ತಿನ್ನುತ್ತಿದ್ದನು. ಮಧ್ಯಾಹ್ನದ ಊಟವೆಂದರೆ ಇದರ ಎರಡು ಪಟ್ಟು.

ಒಂದು ದಿವಸ ಅಬೂಬಕರನು ತೋಟಕ್ಕೆ ಹೋದಾಗ, ಕಪ್ಪಲಿ ಹೊಡೆಯುತ್ತಿದ್ದ ಕೋಣಗಳು ದಣಿದು ನಡೆಯಲು ಬರದಂತಾಗಿ ಕಪ್ಪಲಿ ನಿಲ್ಲಿಸಿದ್ದವು. ಆಗ ಅರ್ಧ ತೋಟದಲ್ಲಿ ಕೂಡ ನೀರಾಡಿರಲಿಲ್ಲ. ತೋಟಿಗನು ಚಿಂತಾತುರನಾದಾಗ, ಈ ಹಮಾಲನು ಅಲ್ಲಿಗೆ ಹೋಗಿ "ನಿಮ್ಮ ತೋಟಕ್ಕೆಲ್ಲ ನೀರು ಹಾಯಿಸಿ ಕೊಡುತ್ತೇನೆ. ನೀವು ನನಗೆ ಏನನ್ನು ಕೊಡುತ್ತೀರಿ?"ಎಂದು ಕೇಳಿದನು.

"ನನ್ನ ತೋಟದಲ್ಲಿರುವ ಹಣ್ಣುಗಳನ್ನು ಹೊಟ್ಟೆ ಹಿಡಿಯುವಷ್ಟು ತಿಂದು,ನಿನ್ನ ಕೈಗೆ ಎಟಕುವಷ್ಟು ಕಿತ್ತುಕೊಂಡು ಮನೆಗೆ ಹೋಗು"ಎಂದನುತೋಟಿಗ.

ಸರಿ, ಈ ಮಾತು ಇಬ್ಬರಿಗೂ ಒಪ್ಪಿಗೆಯಾಯಿತು. ಅಬೂಬಕರನು ಕೋಣಗಳನ್ನು ಕಪ್ಪಲಿಯಿಂದ ಬಿಚ್ಚಿ, ತಾನೇ ಕಪ್ಪಲಿ ಹಗ್ಗವನ್ನು ತನ್ನ ತಲೆಗೆ ಕಟ್ಟಿಕೊಂಡು ಕೋಣನಂತೆ

ಕಪ್ಪಲಿ ಎಳೆದರೆ, ಮಧ್ಯಾಹ್ನದ ಹೊತ್ತಿಗೆ ತೋಟದ ತುಂಬಾ ನೀರಾಡಿತ್ತು. ಅದನ್ನು ನೋಡಿ ತೋಟಿಗನು ಸಂತೋಷಪಟ್ಟು, "ನಿನಗೆ ಇಷ್ಟವಾದಷ್ಟು ತೋಟದಲ್ಲಿರುವ ಹಣ್ಣು ಕಾಯಿಪಲ್ಲ್ಯಗಳನ್ನು ತಿನ್ನು"ಎಂದು ಹೇಳಿದನು. ಅಬೂಬಕರಖಾನನು ಅಂದು ತುಂಬಾ ಹಸಿದಿದ್ದನು. ತೋಟದಲ್ಲಿ ಹೊಕ್ಕು ಹೊಟ್ಟೆ ಬಿರಿಯುವಷ್ಟು ತಿಂದನು. ಮನೆಗೆ ಬರೀ ಕೈಗಳಿಂದ ನಡೆದಾಗ, "ಯಾಕೆ? ಮನೆಗೆ ಏನನ್ನಾದರೂ ಒಯ್ಯುವುದಿಲ್ಲವೇ?"ಎಂದು ತೋಟಿಗನು ಕೇಳಿದನು.

"ಒಯ್ಯಲು ಏನಿದೆ ತೋಟದಲ್ಲಿ"ಎಂದು ನಕ್ಕು ಈ ಹಮಾಲನು ಮನೆ ಹಾದಿಯನ್ನು ಹಿಡಿದನು. ತೋಟಿಗನು ತೋಟ ಹೊಕ್ಕು ನೋಡಿದರೆ, ತೋಟವೆಲ್ಲ ಫಲರಹಿತವಾಗಿತ್ತು. ಕಾಯಿ ಪಲ್ಲ್ಯಗಳೆಲ್ಲಾ ಮಾಯವಾಗಿದ್ದವು. ಮುಂದೆ ತೋಟಿಗನು ಈ ಹಮಾಲನನ್ನು ಎಂದೂ ಈ ಕಾರ್ಯಕ್ಕೆ ಬಳಸಿಕೊಳ್ಳಲಿಲ್ಲ.

ಇನ್ನೊಮ್ಮೆ ಸಕ್ಕರೆ ಚೀಲಗಳನ್ನು ಹೇರಿಕೊಂಡು ಹೊರಟ ವ್ಯಾಪಾರಸ್ಥನ ಚಕ್ಕಡಿಯ ಎತ್ತುಗಳು ಹುದಲಲ್ಲಿ ಸಿಕ್ಕು, ಮುಂದೆ ಹೋಗಲಾರದೆ ತೊಳಲಾಡುತ್ತಿದ್ದವು. ಚಕ್ಕಡಿ ಹೊಡೆಯುವವನು ಆ ಹಾದಿಯಲ್ಲಿ ಹೋಗುವವರಿಗೆ ಸಹಾಯಕ್ಕಾಗಿ ಯಾಚಿಸಹತ್ತಿದನು. ಆದರೆ ಯಾರಿಗೂ ಆ ಚಕ್ಕಡಿಯನ್ನು ಹುದಲಿನಿಂದ ಹೊರಕ್ಕೆ ಎಳೆಯುವ ಸಾಮರ್ಥ್ಯವಿರಲಿಲ್ಲ. ಅದೇ ಹಾದಿಯಿಂದ ನಡೆದಿದ್ದ ಅಬೂಬಕರಖಾನನು ಬಂಡಿಯವನ ಪೇಚಾಟವನ್ನು ನೋಡಿ, "ಅಯ್ಯಾ ನಾನು ಈ ಸಕ್ಕರೆ ಗಾಡಿಯನ್ನು ಹೊರಗೆ ತೆಗೆದುಕೊಟ್ಟರೆ ನನಗೇನು ಕೊಡುವಿ?" ಎಂದು ಪ್ರಶ್ನಿಸಿದನು. ಗಾಡಿಯವನು ನಕ್ಕು "ನನ್ನ ಬಳಿ ಕೊಡಲು ಏನೂ ಇಲ್ಲ. ಆದರೆ ನೀನು ಊರು ಮುಟ್ಟುವ ತನಕ ಈ ಸಕ್ಕರೆ ಚೀಲಗಳ ಮೇಲೆ ಕುಳಿತು ನನ್ನೊಡನೆ ಬಾ. ಆಗ ನೀನು ಬೇಕಾದಷ್ಟು ಸಕ್ಕರೆ ತಿನ್ನು. ನಾನು ನಿನ್ನನ್ನು ಗಾಡಿಯ ಮೇಲೆ ಕೂಡಿಸಿಕೊಂಡು ಊರ ಹೊರಗೆ ಬಿಡುತ್ತೇನೆ"ಎಂದನು. ಹೆಚ್ಚು ಹೆಚ್ಚೆಂದರೆ ಈ ಹಮಾಲನು ಒಂದೆರಡು ಸೇರು ಸಕ್ಕರೆ ತಿನ್ನಬಹುದು ಎಂದು ಬಾಡಿಗೆ ಬಂಡಿ ಹೊಡೆಯುವವನ ವಿಚಾರವಾಗಿತ್ತು. ಅಬೂಬಕರಖಾನನು ಇದಕ್ಕೊಪ್ಪಿ, ಹುದಲಿಗೆ ಹೋಗಿ, ಆ ಎರಡೂ ಎತ್ತುಗಳನ್ನೂ ನೊಗದಿಂದ ಬಿಚ್ಚಿ ಒಂದು ಗಿಡಕ್ಕೆ ಕಟ್ಟಿದನು. ನಂತರ ತಾನೇ ಎತ್ತುಗಳಂತೆ ಆ ಗಾಡಿಯನ್ನು ಎಳೆದು ಹೊರಗೆ ತಂದನು. ಗಾಡಿಯವನಿಗೆ ಅತ್ಯಂತ ಖುಷಿಯಾಯಿತು. ಈ ಹಮಾಲನನ್ನು ಗಾಡಿಯ ಮೇಲಿನ ಚೀಲಗಳ ಮೇಲೆ ಕೂಡಿಸಿಕೊಂಡು ತಾನು ಮೂಕದ ಮೇಲೆ ಕುಳಿತು ಬಂಡಿಯನ್ನು ಮುಂದೆ ಬಿಟ್ಟನು. ಗಾಡಿ ಊರಿಗೆ ತಲುಪಿದಾಗ ಗಾಡಿಯಲ್ಲಿ ಕೇವಲ ಖಾಲೀ ಚೀಲಗಳು ಉಳಿದ್ದಿದವು. ಸಕ್ಕರೆ ಅಬೂಬಕರಖಾನನ ಹೊಟ್ಟೆಯನ್ನು ಸೇರಿತ್ತು. ಅದನ್ನು ನೋಡಿ ಆ ಬಂಡಿ ಹೊಡೆಯುವವನು ತಲೆಯನ್ನು ಜಜ್ಜಿಕೊಂಡನು. ನಂತರ ಅವನು ತನ್ನ ಎತ್ತು ಚಕ್ಕಡಿಗಳಾದರೂ ಸುರಕ್ಷಿತವಾಗಿ ಊರಿಗೆ ಬಂದವಲ್ಲಾ ಎಂದು ಸಂತೋಷಪಟ್ಟನು. ಆದರೆ,

ಮಾಲೀಕನಿಗೆ ಸಕ್ಕರೆ ಚೀಲಗಳನ್ನು ಒಪ್ಪಿಸಲು ಸಾಧ್ಯವಾಗದ್ದಕ್ಕೆ ಮೈ ಹುಳಿಯುವಂತೆ ಹೊಡೆಸಿಕೊಳ್ಳಬೇಕಾಯಿತು.

ಸವಣೂರು ರಾಜ್ಯದಲ್ಲಿ ದಿಲೇರಖಾನ ನವಾಬನು ಅತ್ಯಂತ ದಕ್ಷ ಪೋಲೀಸ್ ದಳವನ್ನು ಇಟ್ಟಿದ್ದನು. ಪೋಲೀಸರಿಗೆಲ್ಲ ಸಾಲು ಮನೆಗಳನ್ನು ಕಟ್ಟಿಸಿ ವಸತಿಯನ್ನು ಒದಗಿಸಿದ್ದನು. ನವಾಬ ಅಬ್ದುಲ್ ಮಜೀದಖಾನನಿಗೆ ಮಾತ್ರ ಮುಂಬೈ ಸರಕಾರವು ಬಂಗಾಲದಲ್ಲಿದ್ದ ಕಂಪನಿ ಸರಕಾರದ ಅನುಮತಿ ಪಡೆದು, ಎಲ್ಲ ಫೌಜಧಾರಿ ಅಧಿಕಾರಿಗಳನ್ನು ಕೊಟ್ಟಿತ್ತು. ಈಗ ಮತ್ತೆ ಮುಂಬೈ ಸರಕಾರವು ಒಂದು ಅಜ್ಞೆಯನ್ನು ಹೊರಡಿಸಿ "ನಿನ್ನ ರಾಜ್ಯದಲ್ಲಿ ಯಾರಾದರೂ ಗುನ್ಹೆ ಮಾಡಿದರೆ ಅವರ ನ್ಯಾಯ ವಿಚಾರಣೆ ಮಾಡುವ ಅಧಿಕಾರ ನಿನಗಿದೆ. ಅವರು ಮಾಡಿದ ಅಪರಾಧಕ್ಕೆ ಅವರಿಗೆ ಫಾಶೀ ಶಿಕ್ಷೆಯನ್ನು ಕೊಟ್ಟರೂ ನೀನು ಪೊಲಿಟಿಕಲ್ ಏಜಂಟನ ಅನುಮತಿಯನ್ನು ಪಡೆಯಬೇಕಿಲ್ಲ. ಆದರೆ, ಯಾವುದೇ ಬ್ರಿಟಿಶ ಪ್ರಜೆ ಅಥವಾ ನಿನ್ನ ರಾಜ್ಯದಲ್ಲಿಯ ಜಹಗೀರದಾರರು ಅಪರಾಧವನ್ನೆಸಗಿದರೆ, ಅಂತಹವರ ನ್ಯಾಯ ವಿಚಾರಣೆ ಮಾಡುವ ಮುನ್ನ ಪೊಲಿಟಿಕಲ್ ಏಜಂಟನ ಅನುಮತಿಯನ್ನು ನೀನು ಪೂರ್ವಭಾವಿಯಾಗಿ ಪಡೆಯಬೇಕು"ಎಂದು ತಿಳಿಸಿತ್ತು. ಹೀಗಾಗಿ ನವಾಬನ ಜೊತೆ ಬ್ರಿಟಿಶ್ ಸರಕಾರವು ಗುರುತರವಾದ ಹೊಣೆಗಾರಿಕೆಯನ್ನು ಹೊರೆಸಿತ್ತು. ಈ ಅಧಿಕಾರವನ್ನು ನವಾಬನಿಗೆ ೧೮೫೭ರಲ್ಲಿಯೇ ಕೊಡಲಾಗಿತ್ತು. ಪ್ರಾಯಶಃ ಸಿಪಾಯಿ ಬಂಡಾಯದ ಗಾಳಿಯಲ್ಲಿ ಸರಕಾರವು ಈ ನಿರ್ಣಯವನ್ನು ತೆಗೆದುಕೊಂಡಿರಬೇಕು.

ನವಾಬ ಅಬ್ದುಲ್ ದಿಲೇರಖಾನನು ಆಗಸ್ಟ್ ೩೦, ೧೮೬೨ರಂದು ನಿಧನಹೊಂದಿದನು. ಇವನಿಗೆ ಒಳ್ಳೇ ಇಂಗ್ಲೀಶ್ ಶಿಕ್ಷಣವು ದೊರೆಕಿತ್ತು. ಅದರಿಂದ ಇಂಗ್ಲೀಶ್ ಭಾಷೆಯ ಮೇಲೆ ಇವನಿಗೆ ತುಂಬಾ ಪ್ರಭುತ್ವವಿತ್ತು. ಹೀಗಾಗಿ ಅಂಗ್ಲರ ಮೇಲೆ ಇವನ ಪ್ರಭಾವವೂ ಬಿದ್ದಿತು.

## ಎರಡನೇ ಅಬ್ದುಲ್ ಖೈರಖಾನ (೧೮೬೨-೧೮೬೮)

ಅಬ್ದುಲ್ ದಿಲೇರಖಾನನು ಇಪ್ಪತ್ತೆಂಟು ವರುಷ ಆಳಿ ತೀರಿಕೊಂಡ ಮೇಲೆ ಅವನ ಮಗನಾದ ಎರಡನೇ ಖೈರಖಾನನು ಸವಣೂರು ಸಿಂಹಾಸನವನ್ನೇರಿದನು. ಇವನು ಮದಿರಾ, ಮದಿರಾಕ್ಷಿಯರ ವ್ಯಾಮೋಹಕ್ಕೊಳಗಾಗಿ ಆಡಳಿತೆಯನ್ನು ಕಡೆಗಣಿಸಿದನು. ಅದರಿಂದ ರಾಜ್ಯವು ಸಾಲದಲ್ಲಿ ಮುಳುಗಿತು. ಇವನ ಕಾಲಕಿರ್ದಿಯಲ್ಲಿ ಯಾವ ಮಹತ್ವದ ಘಟನೆಗಳೂ ನಡೆಯಲಿಲ್ಲ. ಇವನು ಕ್ಷಯರೋಗ ಪೀಡಿತನಾಗಿ ಮೇ ೧೧, ೧೮೬೮ರಲ್ಲಿ ಮೃತ್ಯುವನ್ನಪ್ಪಿ ಖಾದರಬಾಗ ರಾಜ ರುದ್ರಭೂಮಿಯಲ್ಲಿ ಚಿರನಿದ್ರೆಯನ್ನು ಮಾಡುತ್ತಿದ್ದಾನೆ.

## ಭೋಟಾ ದಿಲೇರಖಾನ (೧೮೬೮-೧೮೮೪)

ಎರಡನೇ ಅಬ್ದುಲ್ ಖೈರಖಾನನು ತೀರಿಕೊಂಡಾಗ ಅವನ ಮಗನಾದ ಅಬ್ದುಲ್ ದಿಲೇರಖಾನ ಅಥವಾ ಭೋಟಾ ದಿಲೇರಖಾನನು ಅಲ್ಪವಯಿ ಇದ್ದುದರಿಂದ ಇವನು ೧೮೬೮ರಲ್ಲಿ ಪಟ್ಟವನ್ನೇರಲಿಲ್ಲ. ಇವನು ಅಪ್ರಾಪ್ತವಯಸ್ಕನಾಗಿದ್ದರಿಂದ, ಧಾರವಾಡ ಕಲೆಕ್ಟರನಾಗಿದ್ದ ಮಿ॥ ಇ.ಪಿ. ರಾಬರ್ಟ್‌ಸನ್‌ನು ಭೋಟಾ ದಿಲೇರಖಾನನನ್ನು ಧಾರವಾಡಕ್ಕೆ ಕರೆದೊಯ್ದು ದೊಡ್ಡ ಬಂಗ್ಲೆಯಲ್ಲಿರಿಸಿ, ಶಿಕ್ಷಣದ ವ್ಯವಸ್ಥೆ ಮಾಡಿದನು. ಭೋಟಾ ದಿಲೇರಖಾನನು ಅವನ ಮಾವನಾದ ಮಹಮ್ಮದ ಹಾತಖಾನನ ರಕ್ಷಣೆಯಲ್ಲಿ ಬೆಳೆದನು. ಅವನು ತನ್ನ ಜೊತೆ ಸವಣೂರಿಂದ ಹುಸೇನಖಾನ ಸಾಹೇಬ ಬಪದ್ದೂರ ಹಾಗೂ ಮೋದೀನಖಾನ ತರೀನ ಅನ್ನುವವರನ್ನು ಧಾರವಾಡಕ್ಕೆ ಕರೆದುಕೊಂಡು ಬಂದಿದ್ದನು. ಹುಸೇನಖಾನ ಮತ್ತು ಮೋದಿನಖಾನರು ನಿತ್ಯವೂ ರಾಜಕುಮಾರ ಭೋಟಾ ದಿಲೇರಖಾನನನ್ನು ಧಾರವಾಡದಲ್ಲಿ ಮರಾಠಿ ಶಾಲೆಗೆ ಕರೆದೊಯ್ದು ಶಾಲೆ ಬಿಟ್ಟ ಮೇಲೆ ಮರಳಿ ಬಂಗ್ಲೆಗೆ ಕರೆತರುತ್ತಿದ್ದರು. ರಾಜಕುಮಾರನು ಎಂಟು ಹತ್ತು ವರುಷಗಳ ಕಾಲ ಧಾರವಡದಲ್ಲಿ ಮರಾಠಿಯನ್ನು ಕಲಿತನು. ಆಮೇಲೆ ಕಲೆಕ್ಟರ್ ರಾಬರ್ಟಸನ್‌ನು ರಾಜಕುಮಾರ ಭೋಟಾ ದಿಲೇರಖಾನನನ್ನು ಇಂಗ್ಲಿಶ್ ಅಭ್ಯಾಸಕ್ಕೆಂದು ರಾಜಕೋಟದಲ್ಲಿದ್ದ ರಾಜಕುಮಾರ ಕಾಲೇಜಿಗೆ ಕಳಿಸಿದನು. ಅವನ ಜೊತೆ ಇಬ್ಬರು ಸೇವಕರಿದ್ದರು. ಅಲ್ಲಿ ಇವನ ಅಭ್ಯಾಸವು ಮುಂದುವರೆಯಿತು. ೧೮೮೨ರಲ್ಲಿ ಭೋಟಾ ದಿಲೇರಖಾನನು, ಕಕ್ಕನಾಗಿದ್ದ ಅಬ್ದುಲ್ ಸರೀಫಖಾನನ ಮಗಳೊಂದಿಗೆ ವಿವಾಹವಾದನು. ಮುಂದೆ ೧೮೮೩, ಜೂನ್ ೧೩ ರಂದು ರಾಜಕುಮಾರನು ಪ್ರಾಪ್ತವಯಸ್ಕನಾಗಿದ್ದರಿಂದ ಸವಣೂರಿನ ಸಿಂಹಾಸನವನ್ನೇರಿದನು. ಇವನು ಸಿಂಹಾಸನವನ್ನೇರಿದ ಕೂಡಲೇ, ಇವನು ಬಾಲಕನಿರುವಾಗ ಆಡಳಿತೆಯನ್ನು ನಡೆಸುತ್ತಿದ್ದ ದಿವಾಣ ಮಹಮ್ಮದ ಗೌಸನಿಂದ ಎಲ್ಲ ಅಧಿಕಾರವನ್ನು ತಾನೇ ವಹಿಸಿಕೊಂಡನು.

ಇವನು ಅಧಿಕಾರವನ್ನು ವಹಿಸಿಕೊಂಡೊಡನೆ,ಮಾಡಿದ ಮೊದಲನೇ ಕೆಲಸವೆಂದರೆ, ರಾಜ್ಯದಲ್ಲಿದ್ದ ಬ್ರಿಟಿಶ್ ಪೋಲೀಸರನ್ನು ತೆಗೆದು, ಸವಣೂರಿನವರನ್ನೇ ಪೋಲೀಸ್ ಖಾತೆಗೆ ನಿಯಮಿಸಿಕೊಂಡನು. ಮೀರಮಹಮ್ಮದ ಆಲೀಖಾನನಿಗೆ ಪೋಲೀಸ್ ವ್ಯವಸ್ಥೆಯನ್ನು ವಹಿಸಿಕೊಟ್ಟನು. ಖಲೇದರಖಾನನನ್ನು ನಾಯಕನನ್ನಾಗಿ ನಿಯಮಿಸಿದನು. ಈ ವ್ಯವಸ್ಥೆ ಕೆಲಕಾಲ ನಡೆಯಿತು. ನವಾಬನು ಆಹಾರವನ್ನು ಸ್ವೀಕರಿಸುವಾಗ ಅವನ ಜೊತೆ ಹುಸೇನ ಹಾಫೀಜಖಾನ, ಅಹಮ್ಮದಖಾನ ನಿತ್ಯವೂ ಇರುತ್ತಿದ್ದರು. ನವಾಬನು ಪರಿವಾರದೊಂದಗೆ ಯಾವಗಲಾದರೂ ಗಳಗನಾಥಕ್ಕೆ ವಿಹಾರಕ್ಕೆಂದು ಹೋಗಿ ಬರುತ್ತಿದ್ದನು. ನವಾಬನಿಗೆ ಬೇಟೆಯ ಗೀಳಿತ್ತು. ಹೀಗಾಗಿ, ಊಟದ ಹೊತ್ತಿನವರೆಗೂ ಬೇಟೆಯಲ್ಲಿ ಕಾಲ ಕಳೆಯುತ್ತಿದ್ದನು.

ಭೋಟಾ ದಿಲೇರಖಾನನು ಸವಣೂರಲ್ಲಿಯೇ ತನ್ನ ವಿವಾಹವನ್ನು ನೆರವೇರಿಸಿಕೊಂಡನು. ಈ ವಿವಾಹದ ಜೊತೆ ತನ್ನ ಸೋದರಿಯ ವಿವಾಹವನ್ನು ಮಾಡಿದನು. ಈ ವಿವಾಹಗಳಿಗೆ ಮೂವತ್ತೆರಡು ಸಾವಿರ ರೂಪಾಯಿಗಳು ಖರ್ಚಾದವು. ಬೇಂಡಬಾಜಾ, ಮದ್ದುಗುಂಡುಗಳು, ಗುಲಾಲಗಳಿಂದ ವಿವಾಹಗಳು ಅದ್ದೂರಿಯಾಗಿ ನಡೆದವು. ಈ ವಿವಾಹಕ್ಕೆ ಧಾರವಾಡದಿಂದ ಕಮೀಶನರ್, ಕಲೆಕ್ಟರ್, ಪೊಲಿಟಿಕಲ್ ಏಜೆಂಟ್ ಮೊದಲಾದವರು ಬಂದಿದ್ದರು.

ವಿವಾಹದ ನಂತರ ಭೋಟಾ ದಿಲೇರಖಾನನಿಗೆ ಒಂದು ಗಂಡು ಹಾಗೂ ಒಂದು ಹೆಣ್ಣು ಮಗು ಹುಟ್ಟಿದವು. ೧೮೮೨ರಲ್ಲಿ ವಿವಾಹವಾದ ನವಾಬನು ಮುಂದೆ ಒಂದೇ ವರುಷದಲ್ಲಿ ಕ್ಷಯರೋಗದಿಮದ ಬಳಲಹತ್ತಿದನು. ಇವನ ಹಿರಿಯ ಮಗನು ಕೂಸಿರುವಾಗಲೇ ಹುಲಗೂರು ಉರುಸಿಗೆ ಹೋದಾಗ ತೀರಿಕೊಂಡನು. ಎರಡನೇ ಮಗಳು ಹುಟ್ಟುವ ಹೊತ್ತಿಗೆ ಇವನ ಕ್ಷಯ ರೋಗ ಹೆಚ್ಚಾಗಿತ್ತು. ಇವನಿಗೆ ಬಹುಕಾಲ ಬದುಕಿ ಉಳಿಯುವ ಭರವಸೆ ಇಲ್ಲದಾಯಿತು. ತನಗೆ ಗಂಡು ಮಕ್ಕಳಿಲ್ಲದ್ದರಿಂದ ತನ್ನ ನಂತರ ತನ್ನ ಅಣ್ಣ (ಚಿಕ್ಕಪ್ಪನಮಗ) ರಫೀಖಾನನ ಮಗನಾದ ಅಬ್ದುಲ್ ಎರಡನೇ ದಿಲೇರ ಖಾನನಿಗೆ ಪಟ್ಟವು ದೊರೆಯಬೇಕೆಂದು ಒಂದು ಮೃತ್ಯುಪತ್ರವನ್ನು ಬರೆದನು. ಅದಕ್ಕೆ ಧಾರವಡ ಕಲೆಕ್ಟರನು ಸಾಕ್ಷಿಯನ್ನು ಹಾಕಿದನು. ನವಾಬ ಸಾಹೇಬನು ಮುಂದೆ ಐದಾರು ತಿಂಗಳ ಮಗಳನ್ನು ಹಾಗೂ ಬೀಬೀ ಸಾಹೀಬಾಳನ್ನು ಬಿಟ್ಟು ಆಗಸ್ಟ್ ೧೧, ೧೮೮೪ರಲ್ಲಿ ತೀರಿಕೊಂಡನು. ಭೋಟಾ ದಿಲೇರಖಾನನು ಬದುಕಿದ್ದೇ ಇಪ್ಪತ್ತು ವರುಷ. ಪಟ್ಟದ ಮೇಲೆ ಕುಳಿತದ್ದು ಕೇವಲ ಒಂದು ವರುಷ ಎರಡು ತಿಂಗಳು. ಇವನು ಅಲ್ಪಕಾಲ ಆಳಿದರೂ ರಾಜ್ಯದಲ್ಲಿ ಸ್ಥಾನಿಕ ಪೋಲೀಸ ವ್ಯವಸ್ಥೆಯನ್ನು ಸರಿಯಾಗಿ ಇಟ್ಟಿದ್ದನು. ನವಾಬ ಅಬ್ದುಲ್ ಭೋಟಾ ದಿಲೇರಖಾನನು ಬರೆದಿಟ್ಟ ಮೃತ್ಯು ಪತ್ರವು ಈ ರೀತಿ ಇದೆ:

೧. ನಮ್ಮ ಅಜ್ಜನಾದ ಹಜರತ್ ಜನತ್ ಮೀಯಾ ನವಾಬ ಅಬ್ದುಲ್ ದಿಲೇರಖಾನನು ಆಗಸ್ಟ್ ೩೦, ೧೮೬೨ರಲ್ಲಿ ಮೃತನಾದನು. ಅವನ ನಂತರ ನನ್ನ ತಂದೆ ಎರಡನೇ ಅಬ್ದುಲ್ ಖೈರಖಾನನು ಸವಣೂರ ಗಾದೆಗೆ ಬಂದನು. ಅವನು ಆರು ವರುಷ ರಾಜ್ಯವಾಳಿ, ಮೇ ೧೧, ೧೮೬೮ರಲ್ಲಿ ಮೃತನಾದನು. ನನ್ನ ತಂದೆ ಸತ್ತಾಗ ನಾನು ಅಲ್ಪವಯಿ ಇದ್ದೆ. ನಾನು ಅಪ್ರಾಪ್ತ ವಯಸ್ಕರನಿದ್ದಾಗಲೇ ಮುಂಬೈ ಸರಕಾರವು ನನ್ನನ್ನು ಗಾದೆಯ ಒಡೆಯನೆಂದು ಪ್ರಕಟಿಸಿ, ಸಂಸ್ಥಾನದ ಆಡಳಿತೆಯನ್ನು ತನ್ನ ಕಡೆ ಇಟ್ಟುಕೊಂಡಿತು. ನಾನು ಶಿಕ್ಷಣವನ್ನು ಪೂರೈಸಿ, ಸವಣೂರಿಗೆ ಬಂದೊಡನೆ ಪ್ರಾಪ್ತ ವಯಸ್ಕರನಾಗಿ, ಜೂನ್ ೧೧, ೧೮೮೩ರಲ್ಲಿ ಸವಣೂರು ಸಿಂಹಾಸನವನ್ನೇರಿದೆನು.

೨. ನಾನು ಸಜ್ಞಾನನಾದೊಡನೆ ಮುಂಬೈ ಸರಕಾರವು, ಧಾರವಾಡದ ದಕ್ಷಿಣ ಭಾಗದ ಕಮೀಷನರ್‌ನು ಪೊಲಿಟಿಕಲ್ ಏಜೆಂಟನಿಗೆ, ದರ್ಬಾರವನ್ನು ಸೇರಿಸಿ, ನನಗೆ ರಾಜ್ಯದ

ಅಧಿಕಾರವನ್ನು ವಹಿಸಿಕೊಡಬೇಕೆಂದು ಅಜ್ಞಾಪಿಸಿದನು. ಅದರಂತೆ ನಾನು ಅಧಿಕಾರವನ್ನು ವಹಿಸಿಕೊಂಡೆ.

೩. ನನ್ನ ದೇಹಾರೋಗ್ಯವು ಸರಿಯಾಗಿ ಇರದ್ದರಿಂದ ನಾನು, ಯಾವುದೇ ಕ್ಷಣದಲ್ಲಿ ಸಾಯಬಹುದು. ಅದಕ್ಕೆ ನಾನು ಸತ್ತ ಮೇಲೆ ನನ್ನ ರಾಜ್ಯದ ವ್ಯವಸ್ಥೆ ಹೇಗಿರಬೇಕೆಂದು ನಾನೀಗ ನನ್ನ ಇಚ್ಛೆಯನ್ನು ವ್ಯಕ್ತಪಡಿಸಿದ್ದೇನೆ. ಅದರಂತೆ ಬ್ರಿಟೀಶ್ ಸರಕಾರದ ಮಹಾರಾಣಿ ವಿಕ್ಟೋರಿಯಾ ಸರಕಾರದವರುಕೂಡ ನಡೆದುಕೊಳ್ಳುವಲ್ಲಿ ನನಗೆ ಸಂಶಯವಿಲ್ಲ. ನಾನು ಈ ಮೃತ್ಯು ಪತ್ರವನ್ನು ಮನಃಪೂರ್ವಕವಾಗಿ ಬರೆದಿದ್ದೇನೆ.

೪. ನಾನು ಜೀವಿಸಿರುವ ವರೆಗೆ ಈಗಿನ ವ್ಯವಸ್ಥೆಯಲ್ಲಿ ಯಾವ ಸ್ಥಿತ್ಯಂತರಗಳೂ ಆಗುವಂತಿಲ್ಲ. ನನ್ನ ಬೀಬೀಸಾಹೀಬಳ ಹೊಟ್ಟೆಯಲ್ಲಿ ಒಬ್ಬ ಮಗನು ಹುಟ್ಟಿ ಮೃತನಾದನು. ನನಗೀಗ ಶಮೀಶಾಜಹಾ ಬೇಗಂ ಅನ್ನುವ ಒಬ್ಬಳೇ ಮಗಳಿದ್ದಾಳೆ. ಮುಂದೆ ನಮ್ಮ ಹೊಟ್ಟೆಯಲ್ಲಿ ಗಂಡು ಮಗು ಹುಟ್ಟಿದರೆ, ಅವನೇ ನನ್ನ ವಾರಸುದಾರನು ಆಗುತ್ತಾನೆ. ಆದರೆ, ನನಗೆ ಗಂಡು ಮಗು ಹುಟ್ಟುವ ಮುನ್ನವೇ ನಾನು ಸತ್ತರೆ ಕೆಳಗಿನಂತೆ ರಾಜ್ಯದ ವ್ಯವಸ್ಥೆ ನಡೆಯಬೇಕು.

೫. ನನ್ನ ಖಾಸಾ ಚಿಕ್ಕಪ್ಪ ಅಬ್ದುಲ್ ರಫೀಖಾನನ ಮಗನಾದ ಅಬ್ದುಲ್ ದಲೇಲಖಾನನು ಈಗ ಹನ್ನೊಂದು ವರ್ಷದವನಿರುವನು. ಈ ಹುಡುಗನು ನಮ್ಮ ವಾರಸುದಾರನಿದ್ದು, ನಾನು ಮತ್ತು ನನ್ನ ಹೆಂಡತಿ ಇವನನ್ನು ಪ್ರೀತಿಯಿಂದ ಸಂರಕ್ಷಿಸಿದ್ದೇವೆ. ನನ್ನ ನಂತರ ಇವನು ಸಿಂಹಾಸನವನ್ನೇರಿ ನನ್ನೆಲ್ಲ ಸ್ಥಾವರ ಮತ್ತು ಜಂಗಮ ಆಸ್ತಿಗೆ ಹಕ್ಕುದಾರನಾಗುತ್ತಾನೆ. ಇವನು ಸಜ್ಞಾನನಾಗುವವರೆಗೆ, ಸರಕಾರವು ಇವನನ್ನು ತಮ್ಮ ರಕ್ಷಣೆಯಲ್ಲಿ ಬೆಳೆಸಬೇಕು. ಸಜ್ಞಾನನಾದ ಮೇಲೆ ಇವನಿಗೆ ಸವಣೂರು ರಾಜ್ಯವನ್ನು ವಹಿಸಿಕೊಡಬೇಕು. ಇವನು ಸಜ್ಞಾನನಾಗುವವರೆಗೂ ಇವನ ಶಿಕ್ಷಣದ ಮತ್ತು ಪಾಲನ ಪೋಷಣೆಯ ವೆಚ್ಚವನ್ನು ಸವಣೂರು ರಾಜ್ಯವೇ ಕೊಡಬೇಕು. ಸಜ್ಞಾನನಾದ ಮೇಲೆ, ಪೂರ್ವದಲ್ಲಿ ರಾಜ್ಯವನ್ನು ಆಳಿದಂತೆ ಇವನು ಆಳಬೇಕು.

೬. ಮೇಲೆ ಹೇಳಿದ ಹಕ್ಕುದಾರನಾದ ಅಬ್ದುಲ್ ರಫೀಖಾನನ ಮಗ ಅಬ್ದುಲ್ ದಲೇಲಖಾನನನ್ನು ಬಿಟ್ಟು ಬೇರಾರಿಗೂ ರಾಜ್ಯವು ದೊರೆಯಬಾರದೆಂದು ನಾನು ಶಾಸನವನ್ನು ಮಾಡುತ್ತೇನೆ. ಬ್ರಿಟಿಶ ಸರಕಾರವು ಇದನ್ನು ಮನ್ನಿಸಲೇಬೇಕು.

೭. ಮೇಲೆ ಬರೆದ ವಿಷಯವನ್ನು ಅತ್ಯಂತ ಪ್ರೀತಿ ಮತ್ತು ಅಂತಃಕರಣದಿಂದ ಬರೆಸಲಾಗಿದೆ. ಈ ಮೃತ್ಯು ಪತ್ರದ್ಲಲಿ ಮಿ॥ ಆರ್.ಮಿಡಲ್‌ಟನ್‌ರ ಹಸ್ತಾಕ್ಷರವಿದೆ. ಈ ಪತ್ರದಲ್ಲಿ

ಬರೆದದ್ದನ್ನು ಮಹಾರಾಣಿ ವಿಕ್ಟೋರಿಯಾಳು ಮಾನ್ಯ ಮಾಡಬೇಕೆಂದು ನನ್ನ ಪ್ರಾರ್ಥನೆ.

ದಿನಾಂಕ ಏಳು, ತಿಂಗಳು ಆಗಸ್ಟ್, ಇಸವಿ ೧೮೮೪
ಮುಕ್ಕಾಮು :ಸವಣೂರು
ನವಾಬ ದಿಲೇರಖಾನನು ಸತ್ತದ್ದು ದಿನಾಂಕ ೧೧, ತಿಂಗಳು
ಆಗಸ್ಟ್, ೧೮೮೪

ಹಸ್ತಾಕ್ಷರ
ನವಾಬ ಅಬ್ದುಲ್ ದಿಲೇರಖಾನ ಸಾಹೇಬ
ಹಜರೇಜಂಗ ಬಹದ್ದೂರ

ಈ ಮೃತ್ಯು ಪತ್ರವಿದ್ದರೂ, ಛೋಟಾ ದಿಲೇರಖಾನನು ಮರಣವನ್ನಪ್ಪಿದಾಗ ಇಂಗ್ಲಂಡದ ಮಹಾರಾಣಿ ಸರಕಾರವು, ಅಬ್ದುಲ್ ರಫೀಖಾನನ ಮಗನಾದ ಅಬ್ದುಲ್ ದಲೇಲಖಾನನನ್ನು ಸವಣೂರು ಗಾದೆಗೆ ನಿಯಮಿಸಲಿಲ್ಲ. ಬದಲಿಗೆ ಛೋಟೋ ದಲೇಲಖಾನನವಾಬನ ಇನ್ನೊಬ್ಬ ಚಿಕ್ಕಪ್ಪನಾಗಿದ್ದ ಖಾಸುಮ್ ಖಾನನ ಮಗನಾದ ಅಬ್ದುಲ್ ತಬ್ರೇಜಖಾನನನ್ನು ಸಿಂಹಾಸನಾಧಿಕಾರಿಯಾಗಬೇಕೆಂದು ಬ್ರಿಟಿಶ್ ಸರಕಾರವು ಆಜ್ಞೆಯನ್ನು ಹೊರಡಿಸಿತು.

## ಅಬ್ದುಲ್ ತಬ್ರೇಜಖಾನ (೧೮೮೫-೧೮೯೨)

ಮುಂಬೈ ಸರಕಾರದ ಆಜ್ಞೆಯು ಬಂದೊಡನೆ, ತಬ್ರೇಜಖಾನನು ೧೮೮೫ರ ಪ್ರಾರಂಭದಲ್ಲಿ ಸರಕಾರವು ವಿಧಿಸಿದಂತೆ ರಾಜ್ಯದ ಅರ್ಧ ಉತ್ಪನ್ನವಾದ ೨೮೭೯೦ ರೂಪಾಯಿ ನಜರಾಣೆಯನ್ನು ಸರಕಾರಕ್ಕೆ ಕೊಟ್ಟು ಸವಣೂರು ಸಿಂಹಾಸನವನ್ನೇರಿದನು. ರಾಜಕೋಟದ ರಾಜಕುಮಾರ ಕಾಲೇಜಿನಲ್ಲಿ ಶಿಕ್ಷಣವನ್ನು ಪಡೆದಿದ್ದ ತಬ್ರೇಜಖಾನನು ಅತ್ಯಂತ ಸುಸಂಸ್ಕೃತನಿದ್ದನು. ಇವನ ಕಾಲದಲ್ಲಿ ವಿಶೇಷ ಸುಧಾರಣೆಗಳು ಆಗದಿದ್ದರೂ,ಕೆಲ ವರುಷಗಳಿಂದ ಆಡಳಿತೆಯಲ್ಲಿ ಕಂಡುಬಂದಿದ್ದ ಶಿಥಿಲತೆಯನ್ನು ಬಿಗಿಗೊಳಿಸಿ, ರಾಜ್ಯದಲ್ಲಿ ಶಾಂತಿಯನ್ನು ಸ್ಥಾಪಿಸಿದನು. ಇವನು ಪಟ್ಟವೇರಿದ ಐದೇ ವರುಷಗಳಲ್ಲಿ ರುಗ್ಣನಾಗಿ ಚಿಕಿತ್ಸೆ ಪಡೆಯಹತ್ತಿದನು.ಚಿಕಿತ್ಸೆಗೆಂದು ನವಾಬ ತಬ್ರೇಜ ಖಾನನನ್ನು ಧಾರವಾಡಕ್ಕೆ ಕರೆತರಲಾಯಿತು. ಆಗ ಅವನ ಹೆಂಡತಿ ವಜೀರಬೀ ಬೀಬೀಸಾಹೀಬಾ ಮನಃಪೂರ್ವಕವಾಗಿ ಗಂಡನ ಶುಶ್ರೂಷೆ ಮಾಡಿದಳು. ಆದರೆ ತಬ್ರೇಜಖಾನನ ಆಯುಷ್ಯವು ಮುಗಿದಿತ್ತು. ಅವನು ೧೮೯೨ರಲ್ಲಿ ಧಾರವಾಡದಲ್ಲಿಯೇ ಕೊನೆಯುಸಿರನ್ನೆಳೆದನು. ಆಗ ಅಲ್ಲಿಯೇ ಇದ್ದ ಅವನ ಬೀಬೀ ಸಾಹೀಬಾ ಗಂಡನ ಮರಣವನ್ನು ಸಹಿಸಲಾರದೇ, ವಜ್ರವನ್ನು ಅರೆದು ಕುಡಿದು

ಅಲ್ಲಿಯೇ ಪ್ರಾಣವನ್ನು ಬಿಟ್ಟಳು. ನಂತರ ಇಬ್ಬರ ಶವಗಳನ್ನೂ ಸವಣೂರಿಗೆ ತಂದು ಖಾದರಬಾಗ ರುದ್ರಭೂಮಿಯಲ್ಲಿ ಹೂಳಲಾಯಿತು.

ತಬ್ರೇಜಖಾನ ನವಾಬನು ತೀರಿಕೊಂಡಾಗ ಅವನಿಗೆ ಹಸೀನಾ ಪಾಶಾ, ನಯೀಮಾ ಪಾಶಾ, ರಸೀದಾ ಎಂಬ ಮೂವರು ಹೆಣ್ಣು ಮಕ್ಕಳು ಮತ್ತು ಅಬ್ದುಲ್ ಮಜೀದಾಖಾನ ಎಂಬ ಒಬ್ಬ ಗಂಡು ಮಗನೂ ಇದ್ದರು. ಮಕ್ಕಳೆಲ್ಲರೂ ಅಲ್ಪವಯಿ ಇದ್ದುದರಿಂದ, ಧಾರವಾಡ ಕಲೆಕ್ಟರನೇ ಮಜೀದಖಾನನಿಗೆ ಅಲ್ಪವಯಿ ಸಂರಕ್ಷದಾರನಾದನು. ಸಿಂಹಾಸನವನ್ನೇರಬೇಕಿದ್ದ ಅಬ್ದುಲ್ ಮಜೀದಖಾನನು (ಜನನ ೨-೧೦-೧೮೯೦) ತಂದೆ ತಬ್ರೇಜಖಾನನು ತೀರಿಕೊಂಡಾಗ (ಮರಣ:೨೭-೦೭-೧೮೯೨) ಕೇವಲ ಹತ್ತೊಂಬತ್ತು ತಿಂಗಳ ಮಗು. ಹೀಗಾಗಿ, ಧಾರವಾಡದಲ್ಲಿದ್ದ ಪೊಲಿಟಿಕಲ್ ಏಜೆಂಟನೇ ಅಲ್ಪವಯಿ ಸಂರಕ್ಷಣದಾರನೆಂದು ನಿಯಮಿಸಲ್ಪಟ್ಟನು. ಪೊಲಿಟಿಕಲ್ ಏಜೆಂಟನು, ತಕ್ಷಣ ರಾಜಕುಮಾರ ಅಬ್ದುಲ್ ಮಜೀದಖಾನನ್ನು ಧಾರವಾಡಕ್ಕೆ ಕರೆತಂದು, ಯುರೋಪಿಯನ್ ದಾಯಿಯ ರಕ್ಷಣೆಯಲ್ಲಿ ಪ್ರಾಥಮಿಕ ಶಿಕ್ಷಣವನ್ನು ಪ್ರಾರಂಭಿಸಿದನು.

೧೯೦೦ರ ವರೆಗೂ ಅಬ್ದುಲ್ ಮಜೀದಖಾನನ ಶಿಕ್ಷಣವ ಧಾರವಾಡದಲ್ಲಿ ನಡೆಯಿತು. ನಂತರ ಅವನನ್ನು ಮುಂದಿನ ಶಿಕ್ಷಣಕ್ಕಾಗಿ ರಾಜಕೋಟದಲ್ಲಿದ್ದ ರಾಜಕುಮಾರ ಕಾಲೇಜಿಗೆ ಕಳಿಸಲಾಯಿತು. ಮುಂದೆ ಇವನ ಮೂವರೂ ಸಹೋದರಿಯರ ವಿವಾಹಗಳು ನೆರವೇರಿ, ಅವರಿಗೆ ಸರಕಾರದಿಂದ ತಲಾ ಐವತ್ತು ರೂಪಾಯಿಗಳಂತೆ ಮಾಸಾಶನವನ್ನು ದಯಪಾಲಿಸಲಾಯಿತು. ಹಿರಿಯ ರಾಜಕುಮಾರಿಯನ್ನು ಭೂಪಾಳದ ನವಾಬಜಾದಾ ಸೈಯದುರುಘುರಖಾನನಿಗೆ ಕೊಡಲಾಗಿತ್ತು.

## ಅಬ್ದುಲ್ ಮಜೀದಖಾನ(೧೯೧೨-೧೯೪೮)

ತಂದೆ ಅಬ್ದುಲ್ ತಬ್ರೇಜಖಾನನು ೧೮೯೨ರಲ್ಲಿ ತೀರಿಕೊಂಡಾಗ, ಅಬ್ದುಲ್ ಮಜೀದಖಾನನು ಸಣ್ಣ ಕೂಸಾಗಿದ್ದರಿಂದ, ರಾಜ್ಯವು ಇಪ್ಪತ್ತು ವರುಷಗಳ ಕಾಲ(೧೮೯೨ ರಿಂದ ೧೯೧೨) ಅಲ್ಪವಯಿ ಸಂರಕ್ಷಣದಾರನಾಗಿದ್ದ ಪೊಲಿಟಿಕಲ್ ಏಜೆಂಟನ ಆಡಳಿತೆಯಲ್ಲಿತ್ತು.

ಸವಣೂರು ರಾಜ್ಯವನ್ನು ಸ್ಥಾಪಿಸಲು ಪ್ರಯತ್ನಿಸಿದ ಅಬ್ದುಲ್ ಕರೀಮಖಾನ (೧೬೭೨-೧೬೭೮) ನಿಂದ ಹದಿನೈದನೇ ನವಾಬನಾಗಿದ್ದ ಎರಡನೇ ಅಬ್ದುಲ್ ಮಜೀದಖಾನನು ಸವಣೂರಿನ ಕೊನೆಯ ನವಾಬನಾಗಬಹುದೆಂದು ಇವನು ಹುಟ್ಟಿದಾಗ ಯಾರೂ ಭಾವಿಸಿರಲಿಲ್ಲ. ಪೊಲಿಟಿಕಲ್ ಏಜೆಂಟನು ನವಾಬನ ಅಬ್ದುಲ್ ಮಜೀದಖಾನನನ್ನು ಧಾರವಾಡಕ್ಕೆ ಕರೆದುಕೊಂಡು ಬಂದು,ಯುರೋಪಿಯನ್ ದಾಯಿಯ ರಕ್ಷಣೆಯಲ್ಲಿ ಪ್ರಾಥಮಿಕ ಶಿಕ್ಷಣವನ್ನು ಪ್ರಾರಂಭಿಸಿದನು. ೧೯೦೦ರವರೆಗೂ ಧಾರವಾಡದಲ್ಲಿ ಕಲಿತ

ಅಬ್ದುಲ್ ಮಜೀದಖಾನನು, ಮೊದಲು ರಾಜಕೋಟದ ರಾಜಕುಮಾರ ಕಾಲೇಜಿಗೆ, ನಂತರ ಅಜಮೀರದ ಮೇಯೋ ಕಾಲೇಜಿಗೆ ಹೋಗಿ ಶಿಕ್ಷಣವನ್ನು ಪಡೆದನು. ನಂತರ ೧೯೦೯ರಲ್ಲಿ ಡೆಹರಾಡೂನಕ್ಕೆ ಹೋಗಿ ೧೯೧೨ರ ವರೆಗೂ ಸೈನಿಕ ತರಬೇತಿಯನ್ನು ಪಡೆದನು. ಒಳ್ಳೇ ಕ್ರೀಡಾಪಟುವಾಗಿದ್ದ ನವಾಬನು, ೧೯೧೧ರಲ್ಲಿ ದಿಲ್ಲಿಯಲ್ಲಿ ನಡೆದ ಅಖಿಲ ಭಾರತ ಪೋಲೋ ಟೂರ್ನಮೆಂಟದಲ್ಲಿ ಪ್ರಥಮ ಪ್ರಶಸ್ತಿಯನ್ನು ಗಳಿಸಿದನು.

ಶಿಕ್ಷಣವನ್ನು ಪೂರೈಸಿ ನವಾಬ ಮಜೀದಖಾನನು ಸವಣೂರಿಗೆ ಬಂದು ೧೯೧೨ ಸೆಪ್ಟೆಂಬರದಲ್ಲಿ, ಹೈದರಾಬಾದ ನಿಜಾಮನ ಮಹಾದಂಡನಾಯಕನಾಗಿದ್ದ ಸರ್ ಆಫಸರ್ ಜಂಗ್ ಉಲ್ಕ-ಮುಲ್ಕ ಅವರ ಮೊಮ್ಮಗಳಾದ ಖಲೀಕುನ್ನೀಸಾ ಬೇಗಂಳೊಂದಿಗೆ ವಿವಾಹವಾದನು.

ನವಾಬ ಅಬ್ದುಲ್ ಮಜೀದಖಾನನು ಅಲ್ಪವಯಿ ಇರುವಾಗ, ಬಾಗಿಲಕೋಟೆಯ ಶ್ರೀ ರಾಜೇರಾವ ವಿಠ್ಠಲರಾವ ಮಂಗಳವೇಢೇ ಅವರು, ಜನವರಿ ೧೩, ೧೯೦೩ರಂದು ಸವಣೂರು ದಿವಾಣರೆಂದು ಅಧಿಕಾರವನ್ನು ವಹಿಸಿಕೊಂಡರು. ಬ್ರಿಟಿಶ್ ಸರಕಾರದ ಸೇವೆಯಲ್ಲಿದ್ದ ಅವರನ್ನು ಸರಕಾರವು ಸವಣೂರು ಸಂಸ್ಥಾನದ ಸೇವೆಗೆ ಎರವಲು ಕೊಟ್ಟಿತ್ತು.

ರಾಜೇರಾಯರು ಅತ್ಯಂತ ದಕ್ಷ ಆಡಳಿತಗಾರರಿದ್ದರು. ಇವರು ಪ್ರತಿಯೊಂದು ಹಳ್ಳಿಯಲ್ಲಿಯೂ ಧರ್ಮಶಾಲೆಯನ್ನು ಕಟ್ಟಿಸಿದ್ದರಲ್ಲದೆ, ಹಳ್ಳಿಗಳಿಗೆ ಹೋಗುವ ಮಾರ್ಗಗಳನ್ನೆಲ್ಲ ಸುವ್ಯವಸ್ಥಿತಗೊಳಿಸಿದರು. ಇವರ ಕಾಲದಲ್ಲಿಯೇ ನವಾಬಾಗ ಭೂಮಿಗಳನ್ನು ರೈತರಿಗೆ ಕೊಟ್ಟು, ಸರಕಾರದ ಉತ್ಪನ್ನವನ್ನು ಹೆಚ್ಚಿಸಲಾಯಿತು. ಮೊದಲು ಈ ಭೂಮಿಗಳನ್ನು ವಾರ್ಷಿಕ ಲಾವಣಿಯ ಮೇಲೆ ಕೊಡಲಾಗುತ್ತಿತ್ತು. ಅನಾರೋಗ್ಯಕರ ಹವೆ, ಅನಿಶ್ಚಿತ ಮಳೆಯಿಂದ ಪ್ರತಿ ವರುಷವೂ ಬರುತ್ತಿದ್ದ ಉತ್ಪನ್ನವು ಹೆಚ್ಚು ಕಡಿಮೆಯಾಗುತ್ತಿತ್ತು. ಒಂದೊಂದು ವರುಷ ಉತ್ಪನ್ನವೇ ಬರುತ್ತಿರಲಿಲ್ಲ. ಇದೇ ಕಾಲದಲ್ಲಿ ರಾಜೇರಾಯರು ಹತ್ತೀ ಬೆಳೆಗೆ ಉತ್ತೇಜನವನ್ನು ನೀಡಿದರು. ಇಲ್ಲಿ ಬೆಳೆಯುತ್ತಿದ್ದ ಹತ್ತಿಯನ್ನು ಇಲ್ಲಿಯೇ ಹಿಂಜಿ, ಅರಳೆ ಮಾಡುವ ಉದ್ದೇಶದಿಂದ,ಸವಣೂರು ಪೊಲಿಟಿಕಲ್ ಏಜಂಟನಾಗಿದ್ದ ಮಿ॥ ಹಡಸನ್‌ನು ಹಾಗೂ ಅಸಿಸ್ಟೆಂಟ್ ಪೊಲಿಟಿಕಲ್ ಏಜೆಂಟನಾಗಿದ್ದ ಪೇಂಟರನು, ಮಂಗಳವೇಡೇ ರಾಜೇರಾಯರೊಂದಿಗೆ ಸಮಲೋಚಿಸಿ, ಸರದಾರ ಮಹಬೂಬ ಆಲಿಖಾನರಿಗೆ ಸವಣೂರು ಸರಕಾರದಿಂದ ಕಡಿಮೆ ಬಡ್ಡಿದರದಲ್ಲಿ ೨೫ ಸಾವಿರ ರೂಪಾಯಿ ಸಾಲವನ್ನು ಕೊಡಿಸಿ, ಅವರಿಂದ ಹತ್ತಿ ಅರೆಯುವ ಕಾರ್ಖಾನೆಯನ್ನು ಸವಣೂರಲ್ಲಿ ಸ್ಥಾಪಿಸಿದರು. ಮಹಬೂಬ ಆಲಿಖಾನರು ಸವಣೂರಿನವರೇ ಇದ್ದು, ಹುಬ್ಬಳ್ಳಿಯಲ್ಲಿ ಅರಳೆ ವ್ಯಾಪರವನ್ನು ಮಾಡುತ್ತಿದ್ದರು. ೧೯೦೭ರಲ್ಲಿ ಹತ್ತಿ ಅರೆಯುವ ಕಾರ್ಖಾನೆಯು ಸವಣೂರಲ್ಲಿ ಪ್ರಾರಂಭವಾಗಿ, ರೈತರಿಗೆ ವ್ಯಾಪಾರಿಗಳಿಗೆ,

ಕೂಲಿಕಾರರಿಗೆ ತುಂಬಾ ಉಪಕಾರವಾಯಿತು. ಸವಣೂರು ಸುತ್ತಲಿನ ಕಪ್ಪು ಭೂಮಿ ಹತ್ತಿ ಬೆಳೆಗೆ ಅನುಕೂಲವಾಗಿದ್ದರಿಂದ ಕಾರ್ಖಾನೆಯ ಸಹಾಯದಿಂದ ರೈತರು ಹೆಚ್ಚು ಹೆಚ್ಚು ಹತ್ತಿ ಬೆಳೆದು ಶ್ರೀಮಂತರಾದರು. ರಾಜೇರಾವ್ ಮಂಗಳವೇಢೇ ಅವರು ಹನ್ನೊಂದು ವರುಷ ಸವಣೂರು ಸಂಸ್ಥಾನದ ದಕ್ಷ ದಿವಾಣರೆಂದು ಕಾರ್ಯಮಾಡಿ ೧೯೧೪ರಲ್ಲಿ ಮರಳಿ ತಮ್ಮ ಬ್ರಿಟಿಶ್ ಸೇವೆಗೆ ಹೋದರು. ಇವರ ನಂತರ ದಿವಾಣರಾಗಿ ಬಂದ ಆರ್.ಬಿ. ಪುಣೇಕರ ಹಾಗೂ ಆರ್.ಎಸ್. ಕುಲಕರ್ಣಿಯವರು ಸಂಸ್ಥಾನದ ಉತ್ಪನ್ನವನ್ನು ಹೆಚ್ಚಿಸುವ ಯಾವ ಪ್ರಯತ್ನವನ್ನೂ ಮಾಡಲಿಲ್ಲ. ಬ್ರಿಟಿಶ್ ಭಾಗದಲ್ಲಿ ಮಾಮಲೇದಾರರೆಂದು ನಿವೃತ್ತರಾದ ಅಧಿಕಾರಿಗಳೇ ದಿವಾಣರಾಗಿ ನಿಯಮಿಸಲ್ಪಡುತ್ತಿದ್ದರು.

ಅಬ್ದುಲ್ ಮಜೀದಖಾನನು ಈ ಮೊದಲೇ ಹೇಳಿದಂತೆ ೨-೦೯-೧೯೧೨ರಲ್ಲಿ ಹೈದ್ರಾಬಾದದ ಸುಪ್ರಸಿದ್ಧ ಮನೆತನವಾಗಿದ್ದ ಕರ್ನಲ್ ಅಫಸರ್‌ಜಂಗ್ ಉಲ್ಕ-ಮುಲ್ಕ ಮನೆತನದ ಖಲೀಕುನ್ನೀಸಾಳೊಡನೆ ವಿವಾಹವಾದನು. ಈ ವೈವಾಹಿಕ ಸಂಬಂಧವನ್ನು ಹೊಂದಿಸಿ ಕೊಟ್ಟವನು ಧಾರವಾಡದ ಕಲೆಕ್ಟರನಾಗಿದ್ದ ಮಿ॥ ಇ.ಮೆಕೋನಾನ್ಸಿ. ಬೇಗಂ ಖಲೀಕುನ್ನೀಸಾ ಆಕ್ಸ್‌ಫರ್ಡ್ ವಿದ್ಯಾಲಯದ ಪಧವೀದರಳಾಗಿದ್ದು, ಆಡಳಿತದಲ್ಲಿ ತುಂಬಾ ಪರಿಜ್ಞಾವನ್ನು ಪಡೆದಿದ್ದಳು. ಅವಳನ್ನು ವಿವಾಹವಾದ ಎರಡೇ ತಿಂಗಳಲ್ಲಿ ೧೨-೧೧-೧೯೧೨ರಲ್ಲಿ ಅಬ್ದುಲ್ ಮಜೀದಖಾನನು ಹದಿನೈದನೇ ನವಾಬನಾಗಿ ಪಟ್ಟಾಭಿಷಿಕ್ತನಾದನು. ಪಟ್ಟಾಭಿಷೇಕದ ಎಲ್ಲ ವ್ಯವಸ್ಥೆಯನ್ನು ದಿವಾಣರಾಗಿದ್ದ ಮಂಗಳವೇಢೆ ರಾಜೇರಾಯರು ಮಾಡಿದ್ದರು.

ಎರಡನೇ ಮಜೀದಖಾನ ನವಾಬನ ಸಿಂಹಾಸನಾರೋಹಣಕ್ಕೆ ಧಾರವಾಡಕ್ಕೆ ಕಲೆಕ್ಟರ್ ಸರ್‌ಇವ್ಹಾನ್ ಮೇಕೋನಾನ್ಸಿ, ಸಾಂಗ್ಲೀ ಮಹಾರಾಜ ಚಿಂತಾಮಣಿರಾವ್ ಪಟವರ್ಧನರು ಬಂದಿದ್ದರು.

ಅಬ್ದುಲ್ ಮಜೀದಖಾನ ನವಾಬನು ೧೯೧೪ರಲ್ಲಿ,ಮೊದಲನೇ ಮಹಾಯುದ್ಧದಲ್ಲಿ ಸ್ವಯಂ ಸ್ಫೂರ್ತಿಯಿಂದ ಸೈನ್ಯವನ್ನು ಸೇರಿದನು. ಇರಾಕಕ್ಕೆ ಹೋಗಿ ಬ್ರಿಟಿಶ್‌ರ ಪರವಾಗಿ ಹೋರಾಡಿದನು. ಯುದ್ಧಕಾಲದಲ್ಲಿ ಹೆಚ್ಚಾಗಿ ಇವನು ಮೆಸಪೊಟೋಮಿಯಾದಲ್ಲಿದ್ದನು. ಆಗ ಇವನ ವಿವಾಹವಾಗಿ ಮೂರು ವರುಷಗಳಾಗಿದ್ದವು. ಬೇಗಂ ಸಾಹೀಬಾ ನವಾಬನಿಗೆ ಪ್ರೋತ್ಸಾಹವಿತ್ತು ಸೈನ್ಯಕ್ಕೆ ಹೋಗಿ ಸೇವೆ ಸಲ್ಲಿಸಲು ಮನ ಒಲಿಸಿದಳು.ನವಾಬನು ಯುದ್ಧಕ್ಕೆ ಹೋದಾಗ, ಬೇಗಂ ಸಾಹೀಬಾಳೇ ಸಂಸ್ಥಾನದ ರಾಜ್ಯ ಸೂತ್ರಗಳನ್ನು ವಹಿಸಿಕೊಂಡು ಯೋಗ್ಯ ರೀತಿಯಲ್ಲಿ ಆಳಿದಳು.

ನವಾಬ ಸಾಹೇಬನು ಸೈನ್ಯದಲ್ಲಿ ಸೇವೆ ಸಲ್ಲಿಸಿದ ಸ್ಮರಣಾರ್ಥ ಬ್ರಿಟಿಶರು ಇವನಿಗೆ ೨೫-೦೯-೧೯೩೧ರಂದು ಮೇಜರ ಪದವಿಯನ್ನು ದಯಪಾಲಿಸಿದರು. ಅಂತಲೇ ಇವನನ್ನು

ಮೇಜರ್ ಅಬ್ದುಲ್ ಮಜೀದಖಾನ್ ನವಾಬನೆಂದೇ ಸಂಬೋಧಿಸುತ್ತಿದ್ದರು.

ಅಬ್ದುಲ್ ಮಜೀದಖಾನನು ಮೊದಲು ಗವ್ಹರ್ನರ್ ಲಾರ್ಡ್ ವಿಲಿಂಗಡನ್‌ರ .ಡಿ.ಸಿ. ಆಗಿ, ನಂತರ ಗವ್ಹರ್ನರ್ ಜನರಲ್‌ರಿಗೆ ಏ.ಡಿ.ಸಿ. ಆಗಿ ಕಾರ್ಯವೆಸಗಿ ಸವಣೂರಿನಂತಹ ಸಣ್ಣ ಸಂಸ್ಥಾನಕ್ಕೆ ಗೌರವನ್ನು ತಂದನು.

ಮೂರು ಸರಕಾರ, ಇಪ್ಪತ್ತೆರಡು ಮಹಲುಗಳಷ್ಟು ವಿಶಾಲವಾದ ಸವಣೂರು ರಾಜ್ಯವು ಹಕೀಮಖಾನನ ಕಾಲಕ್ಕೆ ಉತ್ತರದಲ್ಲಿ ಯಾದವಾಡ ಹಾಗೂ ಬೀಳಿಗಿಯಿಂದ ದಕ್ಷಿಣಕ್ಕೆ ರಟ್ಟೀಹಳ್ಳಿ, ಮಾಸೂರು, ಹರಿಹರದವರೆಗಿತ್ತು. ಒಂದೆಡೆ ಘಟಪ್ರಭಾ ನದಿ ಇದ್ದರೆ, ಇನ್ನೊಂದೆಡೆ ತುಂಗಭದ್ರಾ ನದಿಯಿತ್ತು.ಪೂರ್ವ ಪಶ್ಚಿಮವಾಗಿ ಬಾದಾಮಿಯಿಂದ ಅಝಮ್ ನಗರದ(ಬೆಳಗಾವಿ) ವರೆಗೆ ಹಬ್ಬಿತ್ತು. ಅದು ಅಬ್ದುಲ್ ಹಕೀಮಖಾನನ ಅಂತಿಮ ಕಾಲಕ್ಕೆ ಇಪ್ಪತ್ತೈದು ಹಳ್ಳಿಗಳ ಜಹಗೀರಾಗಿ ಕೇವಲ ಎಪ್ಪತ್ತಮೂರು ಚದುರ ಮೈಲಿಗಳ ಪ್ರದೇಶವಾಗಿ ಸಣ್ಣ ಸಂಸ್ಥಾನವಾಯಿತು. ೧೯೪೧ರಲ್ಲಿ ಸವಣೂರು ಸಂಸ್ಥಾನದ ಜನಸಂಖ್ಯೆ ೨೨,೪೫೮ ರಷ್ಟಿದ್ದು, ಉತ್ಪನ್ನವು ೧,೫೬,೩೨೭ ರೂಪಾಯಿಗಳಷ್ಟಿತ್ತು. ೧೮೫೭ರಲ್ಲಿ ನಡೆದ ಸಿಪಾಯಿ ಬಂಡಾಯದಿಂದಲೇ ಬ್ರಿಟಿಶರು ರಾಜಮಹಾರಾಜರನ್ನು ನಿಜಾಮ ನವಾಬನರನ್ನು ತಮ್ಮ ಅಂಕಿತದಲ್ಲಿ ಇಟ್ಟುಕೊಂಡಿದ್ದರು. ಸಂಸ್ಥಾನಗಳ ಆಡಳಿತೆಯಲ್ಲಿ ತಾವು ಹಸ್ತಕ್ಷೇಪ ಮಾಡುವುದಿಲ್ಲವೆಂದು ಬ್ರಿಟಿಶ್‌ರು ತಮ್ಮ ಧೋರಣೆಯನ್ನು ತಾಳಿದ್ದರು. ಸರಕಾರವು "The Hon'ble company's Government on their part here by declare that they have no manner of concern with any of His Highness children, religions, subjects or servants with respect of whom His Highness is absolute" ೧೮೧೫ರಲ್ಲಿ ಹೈದ್ರಾಬಾದ್ ನಿಜಾಮನಿಗೆ (ಮಾನ್ಯ ಕಂಪನಿಸರಕಾರವು ಜಾಹೀರುಪಡಿಸುವುದೇನೆಂದರೆ, ನಿಜಾಮನ ಮಕ್ಕಳು, ಧರ್ಮ, ಪ್ರಜೆಗಳ ಅಥವಾ ಸೇವಕರ ಮೇಲೆ ಅವನ ಅಧಿಕಾರವಿದೆಯೇ ವಿನಃ ನಮ್ಮ ಅಧಿಕಾರವಿಲ್ಲ) ಎಂದು, ಹೇಳುತ್ತ ಬಂದಿದ್ದರೂ, ೧೮೧೮ರ ಹೊತ್ತಿಗೆ, ಸೂರ್ಯವಂಶದವರು ಅಥವಾ ಚಂದ್ರವಂಶದವರು ಎಂದು ಹೇಳಿಕೊಳ್ಳುತ್ತಿದ್ದ ರಜಪೂತರ, ನಿಜಾಮ-ನವಾಬರ, ಪಂಜಾಬಿಗಳ-ಬ್ರಾಹ್ಮಣರ ೫೬೩ ರಷ್ಟು ಸಂಸ್ಥಾನಗಳನ್ನು ಬ್ರಿಟಿಶ್‌ರು ತಮ್ಮ ಕಪಿಮುಷ್ಟಿಯಲ್ಲಿಟ್ಟುಕೊಂಡೇ ಆಳಿದರು. ಸಂಸ್ಥಾನಗಳು ಇದ್ದರೂ ತಮ್ಮ ಅಸ್ತಿತ್ವಗಳನ್ನೇ ಕಳೆದುಕೊಂಡಿದ್ದವು. ಸವಣೂರು ಸಂಸ್ಥಾನವು ದಿಲೇರಖಾನನ ನಂತರ ಆಡಳಿತೆಯಲ್ಲಿ ಬಿಗುವನ್ನು ಕಳೆದುಕೊಂಡಿತ್ತು. ಹೀಗೆ, ಬಿದು ಹೋದ ಸವಣೂರನ್ನು ಪುನರ್ ನಿರ್ಮಾಣ ಮಾಡಿದ ಕೀರ್ತಿ ಮನೆತನದ ಕೊನೆಯ ನವಾಬನಾಗಿದ್ದ ಎರಡನೇ ಅಬ್ದುಲ್ ಮಜೀದಖಾನನಿಗೆ ಸಲ್ಲಬೇಕು. ಇವನು ಸ್ವಲ್ಪ ವಿಕ್ಷಿಪ್ತ ಸ್ವಭಾವದವನಾಗಿದ್ದರೂ ಪ್ರಗತಿಪರ ಧೋರಣೆಯನ್ನು ತಳೆದಿದ್ದನು. ಉಳಿದ ಸಂಸ್ಥಾನಗಳಲ್ಲಿ

ನಡೆದ ಹುಚ್ಚಾಟಗಳು ಸವಣೂರಲ್ಲಿ ಅಷ್ಟು ಪ್ರಮಾಣದಲ್ಲಿ ನಡೆಯಲಿಲ್ಲ.

### ಕಟ್ಟಡಗಳು

ಅಬ್ದುಲ್ ಮಜೀದಖಾನನು ತನ್ನ ವಾಸಕ್ಕೆಂದು ಊರ ಹೊರಗೆ ೧೯೨೨ರಲ್ಲಿ ರೂ.೧,೪೪,೨೪೬ವ್ಯಯಿಸಿ ''ಮಜೀದ ಕ್ಯಾಸೆಲ್ ''ಎಂಬ ಸಣ್ಣ ಅರಮನೆಯನ್ನು, ೧೯೩೪ರಲ್ಲಿ ಇನ್ನೊಂದು ರಸೀದ ಮಂಜಿಲ್ ಎಂಬ ಕಟ್ಟಡವನ್ನು ಕಟ್ಟಿಸಿದನು. ೧೯೨೯ರಲ್ಲಿ ಚೌಡಾಳ ಕೆರೆಗೆ ರೂ.೩೪,೨೭೩ ವೆಚ್ಚ ಮಾಡಿ ಕಾಲುವೆಯನ್ನು ತೆಗೆಸಿ, ನೀರಾವರಿ ಅನುಕೂಲತೆಗಳನ್ನು ಕಲ್ಪಿಸಿದನು.ಅದೇ ವರುಷ ನವಾಬನು ರೂ.೨೩,೬೩೫ ವ್ಯಯಿಸಿ ಸವಣೂರಿಗೆ ವಿದ್ಯುದ್ದೀಪಗಳನ್ನು ಒದಗಿಸಿದನು. ಧಾರವಾಡ ಜಿಲ್ಲೆಯಲ್ಲಿ ವಿದ್ಯುದ್ದೀಪ ಕಂಡ ನಗರವೆಂದರೆ ಸವಣೂರು ನಗರವೇ ಮೊದಲನೆಯದು. ಮಸೀದಿ, ಚರ್ಚ್, ದೇವಾಲಯಗಳಿಗೆ ಉಚಿತ ವಿದ್ಯುದ್ದೀಪಗಳನ್ನು ಒದಗಿಸಿದ್ದನು. ಇಪ್ಪತ್ತು ಮೂವತ್ತರ ದಶಕಗಳಲ್ಲಿ ಕೊಳವೆ ಬಾವಿ ತೆಗೆಸಿ, ನಲ್ಲಿಯ ನೀರನ್ನು ಪೂರೈಸಿದನು. ನಂತರ ಬಾವಿಗಳಿಗೆ ಪಂಪ್ ಹಚ್ಚಿಸಿದ್ದನು.

### ವಾಣಿಜ್ಯ

ನವಾಬನು ವೀಳ್ಯದೆಲೆಯ ಉತ್ಪಾದನೆ ಹಾಗೂ ಮಾರಾಟ, ಅಲ್ಲದೇ ಹತ್ತಿಯ ಬೆಳೆ ಹಾಗೂ ಹತ್ತಿ ಅರೆಯುವ ಕೈಗಾರಿಕೆಗೆ ಹೆಚ್ಚಿನ ಪ್ರೋತ್ಸಾಹವನ್ನಿತ್ತನು. ಇದರಿಂದ ಮೂರು ನೂರಕ್ಕೂ ಹೆಚ್ಚಿದ್ದ ವೀಳ್ಯದೆಲೆಯ ತೋಟಗಳಲ್ಲಿ ಕೂಲಿಕಾರರಿಗೆ ಕೆಲಸ ದೊರೆಯಹತ್ತಿತು. ಮೋತೀತಲಾವ ಅಥವಾ ದೊಡ್ಡ ಕೆರೆಯೆಂದು ಕರೆಯಲ್ಪಡುವ ಜಲಸಂಚಯವು ಬೇಸಿಗೆ ಕಾಲದಲ್ಲಿ ತೋಟಗಳಿಗೆ ನೀರನ್ನು ಪೂರೈಸಲು ಅಸಮರ್ಥವಾದಾಗ, ೧೯೨೪ರಲ್ಲಿ, ನವಾಬನು ಮುಂಬೈ ಸರಕಾರದ ಕೃಷಿ ಇಲಾಖೆಯ ನಿರ್ದೇಶಕರೊಂದಿಗೆ ಸಮಾಲೋಚಿಸಿ, ಕೊಳವೆ ಬಾವಿ ತೋಡುವ ಯಂತ್ರವನ್ನು ತರಿಸಿ, ತೋಟಗಳಲ್ಲಿಯೇ ಬಾವಿಗಳನ್ನು ತೋಡಿಸಿದನು. ಈ ಬಾವಿಗಳನ್ನು ತೋಡಲು ತೋಟಗಾರರಿಗೆ ಸುಲಭ ಕಂತುಗಳಲ್ಲಿ ಸಾಲಗಳನ್ನು ಕೊಟ್ಟನು. ೧೯೨೮ರಲ್ಲಿ ೪೦೦೦೦ ರೂಪಾಯಿಗಳನ್ನು ವ್ಯಯಿಸಿ ತೋಟಗಳಿಗೆ ನೀರುಣಿಸುವ ಮೋತೀತಲಾವವನ್ನು ಸುಧಾರಿಸಿದನು. ಸವಣೂರು ವೀಳ್ಯೆದೆಲೆ ಅಂದರೆ ಅಂದು ಉತ್ತರ ಕರ್ನಾಟಕದಲ್ಲಿ ತುಂಬಾ ಪ್ರಸಿದ್ಧವಿತ್ತು. ''ಕರಾಚಿ ಪಾನ'' ಅನ್ನುವ ಕರಿ ವೀಳ್ಯೆದೆಲೆ ಪ್ರತಿ ವಾರ ಕರಾಚಿಗೆ ಹೋಗುತ್ತಿತ್ತು. ಆ ಎಲೆ ಅಲ್ಲಿಗೆ ತಲುಪಿದೊಡನೆ ಅದು ಹಳದಿ ವರ್ಣಕ್ಕೆ ತಿರುಗಿ ಅತ್ಯಂತ ರುಚಿಕರವಾದ ಎಲೆಯಾಗುತ್ತಿತ್ತು. ಸವಣೂರನ್ನು ಬಿಟ್ಟರೆ ಆಗ ಸುತ್ತ ಮುತ್ತ ವೀಳೆದೆಲೆ ಬೆಳೆಯುತ್ತಿರಲಿಲ್ಲ. ಹುಬ್ಬಳ್ಳಿಯಲ್ಲಿ ಹತ್ತಿ ವ್ಯಾಪರವನ್ನು ಮಾಡುತ್ತಿದ್ದ ಸರದಾರ ಮಹಬೂಬ ಆಲಿಖಾನರಿಗೆ ಮೊದಲು ೨೫೦೦೦ ರೂಪಾಯಿ ಸಾಲ, ನಂತರ ೭೫೦೦೦ ರೂಪಾಯಿ ಸಾಲವನ್ನಿತ್ತು ಹತ್ತೀ ಅರೆಯುವ ದೊಡ್ಡ

ಕಾರ್ಖಾನೆ ಸವಣೂರಲ್ಲಿ ತಲೆ ಎತ್ತಲು ಸಹಾಯ ಮಾಡಿದನು. ಇದರಿಂದ ಹತ್ತೀ ವ್ಯಾಪಾರಿಗಳು ಹಾಗೂ ಕೂಲಿಕಾರರಿಗೆ ಉದ್ಯೋಗಗಳು ದೊರೆತವು.

### ಶೈಕ್ಷಣಿಕ ಪ್ರಗತಿ

೧೯೧೦ರಷ್ಟು ಹಿಂದೆ ಸವಣೂರಲ್ಲಿ ನಾಲ್ಕನೇ ವರ್ಗದವರೆಗೆ ಕಲಿಸುವ ಇಂಗ್ಲೀಶ್ ಶಾಲೆಯಿತ್ತು. ೧೯೧೭-೧೮ರಲ್ಲಿ ಆ ಶಾಲೆಯಲ್ಲಿ ಆರನೆ ವರ್ಗದವರೆಗೆ ಕಲಿಸುವ ವ್ಯವಸ್ಥೆಯಾಯಿತು. ಅದರ ಮರು ವರುಷವೇ ಮಜೀದ ಹೈಸ್ಕೂಲು ಸವಣೂರಲ್ಲಿ ತೆರೆಯಲ್ಪಟ್ಟಿತು. ಇಲ್ಲಿಂದಲೇ ಮೆಟ್ರಿಕ್ ಪಾಸಾಗಿ ಹೋಗುತ್ತಿದ್ದ, ಸವಣೂರಿನವರನ್ನು ಸಂಸ್ಥಾನದ ವೆಚ್ಚದಲ್ಲಿ ಅಲೀಗಡ ಕಾಲೇಜಿಗೆ ಕಳಿಸಿ, ಪದವೀಧರರನ್ನಾಗಿ ಮಾಡಿ, ಶಿಕ್ಷಕರೆಂದು ನಿಯಮಿಸುವ ಪದ್ಧತಿ ಸವಣೂರಲ್ಲಿ ಇದ್ದಿತು. ಬಡವಿದ್ಯಾರ್ಥಿಗಳಿಗೆ ಹಾಗೂ ಬುದ್ಧಿವಂತ ವಿದ್ಯಾರ್ಥಿಗಳಿಗೆ ಶಾಲೆಯಲ್ಲಿ ಯಾವ ಶುಲ್ಕವೂ ಇರುತ್ತಿರಲಿಲ್ಲ. ಮಜೀದ ಹೈಸ್ಕೂಲಿನಿಂದ ಪಾಸಾದ ವಿದ್ಯಾರ್ಥಿಗಳು ಉನ್ನತ ಪದವಿಗಳನ್ನು ಪಡೆದರು. ೧೯೨೦ರಲ್ಲಿ ಶ್ರೀ ವಿ.ಕೃ. ಗೋಕಾಕರು ಇದೇ ಹೈಸ್ಕೂಲಿನಿಂದ ಮ್ಯಾಟ್ರಿಕ್ ಪಾಸಾದರು. ನವಾಬ ಅಬ್ದುಲ್ ಮಜೀದಖಾನನು, ಅಂದು ಭವ್ಯವೆನಿಸುತ್ತಿದ್ದ ಮಜೀದ ಹೈಸ್ಕೂಲಿಗೆ ಹೊಸ ಕಟ್ಟಡವನ್ನು ಕಟ್ಟಿಸಿದನು.

ದಿವಾಣ ಬಹದ್ದೂರ ರೋದ್ದ ಶ್ರೀನಿವಾಸರಾಯರು ಆರು ತಿಂಗಳು ಸವಣೂರು ಶಾಲೆಯಲ್ಲಿ ಶಿಕ್ಷಕರಾಗಿದ್ದರು ಎಂದು ಆತ್ಮಚರಿತ್ರೆಯಲ್ಲಿ ಬರೆದಿದ್ದಾರೆ. ಆದರೆ ಅದು ಯಾವ ವರುಷ ಎಂಬುದು ನಿಶ್ಚಿತವಾಗಿ ತಿಳಿದು ಬಂದಿಲ್ಲ. ಮಜೀದಖಾನನು ಗಂಡು ಮಕ್ಕಳ ಶಾಲೆ, ಹೆಣ್ಣು ಮಕ್ಕಳ ಶಾಲೆ ಹಾಗೂ ಉರ್ದು ಶಾಲೆಗಳಿಗೆ ಪ್ರತ್ಯೇಕ ಕಟ್ಟಡಗಳನ್ನು ಕಟ್ಟಿಸಿದನು. ಸವಣೂರು ನವಾಬನು ಶಿಕ್ಷಣಕ್ಕೆ ಮಹತ್ವವನ್ನು ಕೊಟ್ಟು ಸಂಸ್ಥಾನದ ಉತ್ಪನ್ನದಲ್ಲಿ ಶಿಕ್ಷಣದ ಮೇಲೆ ಕೆಲ ಭಾಗವನ್ನು ವ್ಯಯಿಸುತ್ತಿದ್ದನು.

ಸವಣೂರಲ್ಲಿ ನೂರು ವರುಷಗಳಿಗೂ ಹಳೆಯದಾದ ನಗರಸಭೆ ಇದೆ. ನಗರಸಭೆ ಮೊದಲು ಅಬ್ದುಲ್ ಮಜೀದಖಾನನ ಕಡೆಗಿತ್ತು. ೧೯೩೬-೩೭ರಲ್ಲಿ ನವಾಬನು ನಗರಸಭೆಯ ಆಡಳಿತೆಯನ್ನು ಜನರ ನಿಯಂತ್ರಣಕ್ಕೆ ಬಿಟ್ಟುಕೊಟ್ಟನು. ನಗರಸಭೆಗೆ ಜನರಿಂದ ನಾಲ್ವರು ಸದಸ್ಯರು ಚುನಾಯಿತರಾದರೆ,ಎಂಟು ಸದಸ್ಯರನ್ನು ನವಾಬನು ನಾಮಕರಣ ಮಾಡುತ್ತಿದ್ದನು.

ಸವಣೂರಲ್ಲಿ ಭಾವೈಕ್ಯತೆಯಿತ್ತು. ಕೋಮುವಾದ ಗಲಭೆಗಳು ನಡೆಯುತ್ತಿರಲಿಲ್ಲ. ಅಬ್ದುಲ್ ಮಜೀದಖಾನ ನವಾಬನು ಯೋಗ್ಯತೆ ಇಲ್ಲದ ಸ್ವಜಾತಿಯರಿಗೆ ಸರಕಾರದಲ್ಲಿ ಸ್ಥಾನವನ್ನು ಕೊಡುತ್ತಿರಲಿಲ್ಲ. ಸಂಸ್ಥಾನದ ಆಡಳಿತೆಯಲ್ಲಿ ಬ್ರಾಹ್ಮಣರಿಗೆ ಹೆಚ್ಚು ಪ್ರಾತಿನಿಧ್ಯವಿತ್ತು.

ಸಂಸ್ಥಾನದ ಇಪ್ಪತ್ತೈದು ಹಳ್ಳಿಗಳಿಗೂ ರಸ್ತೆಯ ಸಂಪರ್ಕವು ಲಭ್ಯವಾಗಿತ್ತು. ಕುಡಿಯುವ ನೀರಿನ ವ್ಯವಸ್ಥೆ ಸರಿಯಾಗಿತ್ತು. ಒಕ್ಕಲತನಕ್ಕೆ, ತೋಟಗಾರಿಕೆಗೆ, ವ್ಯಾಪಾರಸ್ಥರಿಗೆ ಉತ್ತೇಜನವಿತ್ತು. ಇದರಿಂದ ಸಂಸ್ಥಾನದ ಆರ್ಥಿಕ ವ್ಯವಸ್ಥೆ ಹೆಚ್ಚು ಕಡಿಮೆ ಸರಿಯಾಗಿತ್ತೆಂದೇ ಹೇಳಬಹುದು. ಸಂಸ್ಥಾನದ ವಾರ್ಷಿಕ ಉತ್ಪನ್ನವು ೧,೮೧,೭೩೫ ರೂಪಾಯಿಗಳಿರುವಾಗ, ನವಾಬನು ತನ್ನ ವೆಚ್ಚಕ್ಕೆ ಕೇವಲ ಇಪ್ಪತ್ತೈದು ಸಾವಿರ ರೂಪಾಯಿ ಬಳಸುತ್ತಿದ್ದನು. ಸವಣೂರಲ್ಲಿ ಸೊಶಿಯಲ್ ಕ್ಲಬ್ ಇತ್ತು. ಅಲ್ಲಿ ಟೆನಿಸ್ ಆಟಕ್ಕೆ ಅನುಕೂಲತೆಗಳಿದ್ದವು. ನವಾಬನು ಅಲ್ಲಿಗೆ ಆಗೀಗ ಬಂದು ನಾಗರೀಕರೊಡನೆ ಬೆರೆಯುತ್ತಿದ್ದನು.

ನವಾಬ ಸುಸಂಸ್ಕೃತನಿದ್ದನು.೧೯೧೬ ರಿಂದ ೧೯೧೯ರವರೆಗೆ ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘದ ಅಧ್ಯಕ್ಷನಿದ್ದನು. ಸಿಡುಕು, ದರ್ಪ, ಅಧಿಕಾರಮದ, ಇವುಗಳು ಎಲ್ಲ ಸಂಸ್ಥಾನಿಕರಂತೆ ಮಜೀದಖಾನನಲ್ಲಿ ಇದ್ದರೂ,ಅನೇಕ ಸಲ ಜನರಿಗೆ ಸಹಾಯ ಮಾಡುತ್ತಿದ್ದನು. ಸಂಸ್ಥಾನವು ಸಣ್ಣದಿದ್ದುದರಿಂದ ಸಂಸ್ಥಾನದಲ್ಲಿ ಸೂಜಿಬಿದ್ದರೆ ನವಾಬ ಮಜೀದಖಾನನ ಲಕ್ಷ್ಯಕ್ಕೆ ಬರುತ್ತಿತ್ತು. ಆದುದರಿಂದ ಪ್ರಜೆಗಳಿಗೆ ಸ್ವಲ್ಪ ತೊಂದರೆಯಾಗುತ್ತಿತ್ತು. ವಿಜಯಲಕ್ಷ್ಮಿ ಪಂಡಿತಳ ಗಂಡ ರಣಜಿತ್ ಪಂಡಿತನು ಅಬ್ದುಲ್ ಮಜೀದಖಾನನ ಸ್ನೇಹಿತನಿದ್ದನು. ಅನೇಕ ಸಲ ಗೋವೆಯಿಂದ ಅವನು ಸವಣೂರಿಗೆ ಬಂದು ಹೋಗುತ್ತಿದ್ದನು.

### ಪಶು ಅಭಿವೃದ್ಧಿ

ಉತ್ತಮ ತಳಿಯ ಆಕಳುಗಳನ್ನು ಬೇರೆ ಕಡೆಯಿಂದ ತಂದು ಸಂಸ್ಥಾನದ ಹಳ್ಳಿಗಳಲ್ಲಿ ರೈತರಿಗೆ ಹಂಚುತ್ತಿದ್ದನು. ಮೇಲಿಂದ ಮೇಲೆ ದನಕರುಗಳ ಪ್ರದರ್ಶನಗಳನ್ನು ಏರ್ಪಡಿಸುತ್ತಿದ್ದನಲ್ಲದೆ, ಹೊಸ ತಳಿಗಳಿಗಾಗಿ ಕಸಿಮಾಡುವ ಒಂದು ಸಾಕಾಣೆ ಕೇಂದ್ರವನ್ನು ೧೯೨೩ರಲ್ಲಿಯೇ ತೆಗೆದಿದ್ದನು. ಮೈಸೂರು ಸಂಸ್ಥಾನದ ಅಜ್ಜಂಪುರ ತಳಿ ಸಾಕಾಣಿಕೆ ಕೇಂದ್ರದಿಂದ ಹನ್ನೆರಡು ಅಮೃತಮಹಲ ಹೋರಿಗಳನ್ನು ಕೊಂಡು ನಂಬಿಕೆಯ ರೈತರಿಗೆ ಸಾಕಲು ಕೊಟ್ಟನು. ಸವಣೂರಿನ ದನಗಳು ಅನೇಕ ಪ್ರದರ್ಶನಗಳಲ್ಲಿ ಬಹುಮಾನಗಳನ್ನು ಗಿಟ್ಟಿಸಿದ್ದವು.

### ಪೋಲೀಸ್ ವ್ಯವಸ್ಥೆ

ಸವಣೂರು ಅಲ್ಲದೆ, ಸಂಸ್ಥಾನದ ಹಳ್ಳಿಗಳಾದ ಚಂದಾಪುರ, ಹೋತನಹಳ್ಳಿ, ಮುಳಕೇರಿ, ಕಬನೂರು, ಡೊಂಬರಮತ್ತೂರು ಮೊದಲಾದ ಹಳ್ಳಿಗಳಲ್ಲಿ ಪೋಲೀಸರನ್ನಿಟ್ಟಿದ್ದನು. ಈ ಪೋಲೀಸರು ಹಳ್ಳಿಗಳಲ್ಲಿ ನಡೆಯುವ ವಿದ್ಯಮಾನಗಳನ್ನು ನಿತ್ಯವೂ ಪೋಲೀಸ್ ಹಿರಯ ಅಧಿಕಾರಿಗೆ ಒಪ್ಪಿಸುತ್ತಿದ್ದರು.ಹಾಗೆಯೇ ಸವಣೂರಲ್ಲಿ ಎಂಟು ಪೋಲೀಸ್

ಚೌಕಿಗಳು ಇದ್ದು ಅಲ್ಲಿ ಸದಾ ಪೋಲೀಸರು ಇರುತ್ತಿದ್ದರು. ಅವರು ತಮ್ಮ ನೆರೆಯಲ್ಲ ನಡೆಯುವ ವಿಷಯವನ್ನು ಸಂಗ್ರಹಿಸಿ ಹಿರಿಯ ಪೋಲೀಸ ಅಧಿಕಾರಿಗೆ ತಿಳಿಸುತ್ತಿದ್ದರು. ಪೋಲೀಸ್ ಮುಖ್ಯಾಧಿಕಾರಿಯು, ಈ ಎಲ್ಲ ವಿಷಯಗಳನ್ನು ಸಂಗ್ರಹಿಸಿ ಪ್ರತಿದಿನ ಬೆಳಿಗ್ಗೆ ೬ ಗಂಟೆಗೆ ನವಾಬ ಸಾಹೇಬರ ನಿವಾಸಕ್ಕೆ ಹೋಗಿ, ವರದಿಯನ್ನು ಒಪ್ಪಿಸುತ್ತಿದ್ದನು. ಪ್ರತಿ ಶುಕ್ರವಾರ ಬೆಳಿಗ್ಗೆ ಏಳು ಗಂಟೆಗೆ ಇಲಾಖೆಯ ಮುಖ್ಯಾಧಿಕಾರಿಗಳು ನವಾಬನ ಬಂಗ್ಲೆಗೆ ತೆರಳಿ ತಮ್ಮ ತಮ್ಮ ಇಲಾಖೆಗಳ ವರದಿಯನ್ನು ಒಪ್ಪಿಸಬೇಕಿತ್ತು.

ನಿತ್ಯವೂ ಸವಣೂರಲ್ಲಿ ರಾತ್ರಿ ೯ಗಂಟೆಗ ಕಛೇರಿಯ ಮೇಲಿಂದ ತೋಪು ಹಾರುತ್ತಿತ್ತು. ನಂತರ ಎತ್ತರವಾದ ಸ್ಥಳದಲ್ಲಿ ಒಬ್ಬ ವ್ಯಕ್ತಿ ನಿಂತು ಧ್ವನಿವರ್ಧಕದಲ್ಲಿ 'ನವ್ ಬಜೇಕೆ ರಾತ್ 'ಎಂದು ಕೂಗುತ್ತಿದ್ದನು. ಈ ಸಂಜ್ಞೆಗಳು ಕೇಳಿಬಂದೊಡನೆ ಬೀದಿಯಲ್ಲಿಯ ಜನಸಂಚಾರ ಸ್ಥಬ್ಧಗೊಳ್ಳುತ್ತಿತ್ತು. ಅಕಸ್ಮಾತ್ತಾಗಿ ಯಾರಾದರೂ ಪೋಲೀಸರಿಗೆ ರಸ್ತೆಯಲ್ಲಿ ಸಿಕ್ಕರೆ, ಅವರ ವಿಚಾರಣೆ ನಡೆಯುತ್ತಿತ್ತು. ಅಪರಿಚಿತರೆಂದು ಕಂಡು ಬಂದರೆ,ಅವರನ್ನು ರಾತ್ರಿ ಪೋಲೀಸ್ ಠಾಣೆಯಲ್ಲಿ ಕೂಡಿಸಿ, ಮರುದಿವಸ ಬಿಡುತ್ತಿದ್ದರು.

**೧೯೧೪ರಲ್ಲಿ ಸವಣೂರಲ್ಲಿಯ ಪೋಲೀಸ್ ಸಂಖ್ಯೆ ಹೀಗಿತ್ತು**

೧೯೧೪ನೇ ವರುಷ

| ಹುದ್ದೆ | ಸಂಖ್ಯೆ | ಮಾಸಿಕ ಸಂಬಳ ರೂಪಾಯಿಗಳಲ್ಲಿ |
|---|---|---|
| ಪೋಲೀಸ್ ಮುಖ್ಯಾಧಿಕಾರಿ | ೧ | ೭೩ |
| ಜಮಾದಾರ | ೧ | ೩೫ |
| ತರಬೇತಿ ಅಧಿಕಾರಿ | ೧ | ೧೬ |
| ಹಾಲದಾರ ಹಾಗೂ ಕಾಯಿತ ಅಧಿಕಾರಿ | ೧ | ೧೫ |
| ನಾಯಕ | ೫ | |
| | | ೬೦(೧೨ ರೂ) |
| ಪ್ರಥಮ ದರ್ಜೆ ಪೋಲೀಸರು | ೭ | ೭೦ (೧೦ರೂ) |
| ಎರಡನೇ ದರ್ಜೆ ಪೋಲೀಸರು | ೧೪ | ೧೨೬ (೯ ರೂ) |
| ಮೂರನೇ ದರ್ಜೆ ಪೋಲೀಸರು | ೧೪ | ೧೧೨ (೮ರೂ) |
| ಕಾರಕೂನ | ೧ | ೧೫ |
| | ಒಟ್ಟು ೪೫ | ರೂ.೫೨೨ |

ಸಂಸ್ಥಾನದಲ್ಲಿ ಪೋಲೀಸ್ ಬಲವು ೪೫ ಇದ್ದು ಅವರ ವೆಚ್ಚವು ತಿಂಗಳಿಗೆ ರೂ.೫೨೨ ಇದ್ದಿತು.

ಅಬ್ದುಲ್ ಮಜೀದಖಾನನ ಮೂವತ್ತಾರು ವರುಷಗಳ ಆಳ್ವಿಕೆಯಲ್ಲಿ ಶಿಥಿಲತೆ ಅತ್ಯಂತ ಕಡಿಮೆ ಇದ್ದುದರಿಂದ, ಅಪರಾಧಗಳ ಸಂಖ್ಯೆ ಕೂಡ ಇಳಿಮುಖವಾಗಿತ್ತು. ಕಬನೂರಲ್ಲಿ ಒಂದು ಕೊಲೆಯಾಗಿತ್ತು. ಆ ಅಪರಾಧಿಗೆ ಮರಣದಂಡನೆಯನ್ನು ವಿಧಿಸಲಾಗಿತ್ತು. ನವಾಬ ಸಾಹೇಬನಿಗೆ ಜಿಲ್ಲಾ ಮತ್ತು ಸೆಸನ್ಸ್ ನ್ಯಾಯಾಧೀಶರ ಅಧಿಕಾರವಿತ್ತು. ಅವನು ಮರಣದಂಡನೆ ಶಿಕ್ಷೆಯನ್ನು ವಿಧಿಸುವ ಅಧಿಕಾರವನ್ನು ಹೊಂದಿದ್ದನು.

ಸವಣೂರು ಸಂಸ್ಥಾನದಲ್ಲಿ ಬ್ರಿಟಿಶ್ ಪ್ರಾಂತಗಳ ಕಾನೂನುಗಳೇ ಅನುಷ್ಠಾನದಲ್ಲಿದ್ದವು. ದಿವಾಣೀ ಹಾಗೂ ಫೌಜದಾರಿ ನ್ಯಾಯಾಲಯಗಳಿದ್ದವು. ಇದಲ್ಲದೇ, ಮೇಲ್ಮನವಿಯನ್ನು ಸಲ್ಲಿಸಲು ಎರಡು ಪ್ರತ್ಯೇಕ ನ್ಯಾಯಲಯಗಳಿದ್ದವು. ಅವುಗಳಲ್ಲಿ ಒಂದು ಜಿಲ್ಲಾ ನ್ಯಾಯಾಲಯ ಇನ್ನೊಂದು ಉಚ್ಚ ನ್ಯಾಯಲಯ, ಮೊದಲನೇ ದರ್ಜೆಯ ದಿವಾಣಿ ನ್ಯಾಯಾಧೀಶನು, ಮೊದಲನೇ ದರ್ಜೆಯ ದಂಡಾಧಿಕಾರದ ನ್ಯಾಯಾಧೀಶನೂ ಆಗುತ್ತಿದ್ದನು. ಸಂಸ್ಥಾನದ ದಿವಾಣನೇ ಜಿಲ್ಲಾ ನ್ಯಾಯಾಧೀಶ ಹಾಗೂ ಜಿಲ್ಲಾ ದಂಡಾಧಿಕಾರಿಯಾಗುತ್ತಿದ್ದನು.ನವಾಬ ಅಬ್ದುಲ್ ಮಜೀದಖಾನನೇ ಉಚ್ಚ ನ್ಯಾಯಾಲಯದ ನ್ಯಾಯಧೀಶನಾಗಿರುತ್ತಿದ್ದನು. ಆದರೆ, ಕಾಲಾನುಕ್ರಮದಲ್ಲಿ ಬ್ರಿಟಿಶ್ ಪ್ರಾಂತದ ನಿಷ್ಠಾವಂತ ಮತ್ತು ಸಮರ್ಥ ವಕೀಲರನ್ನು ನ್ಯಾಯಧೀಶರೆಂದು ನಿಯಮಿಸುವ ಪರಿಪಾಠವು ಸಂಸ್ಥಾನದಲ್ಲಿತ್ತು. ಬ್ಯಾರಿಸ್ಟರ್ ಎಂ.ಎಸ್. ಸರದಾರ ಹಾಗೂ ಮೀರ ಇಕ್ಬಾಲ್ ಹುಸೇನರು ಸವಣೂರಲ್ಲಿ ಕೆಲಕಾಲ ಉಚ್ಚನ್ಯಾಯಾಧೀಶರಾಗಿದ್ದರು. ಪುಣೆಯ ನಿವೃತ್ತ ನ್ಯಾಯಧೀಶ ಶ್ರೀ ವಿ.ಆರ್. ಮಂಗಳವೇಢೇಕರ ಹಾಗೂ ಧಾರವಾಡದ ವಕೀಲ ಎ.ಐ.ಪಠಾಣರೂ ಕೂಡ ಸವಣೂರಲ್ಲಿ ನ್ಯಾಯಾಧೀಶರೆಂದು ಕಾರ್ಯವನ್ನು ನಿರ್ವಹಿಸಿದರು. ಸವಣೂರ ಸಂಸ್ಥಾನದಲ್ಲಿ ಅಬ್ದುಲ್ ಮಜೀದಖಾನನ ಆಳ್ವಿಕೆಯ ಹಿಂದೆ, ಧಾರವಾಡದ ಕಲೆಕ್ಟರನೇ ರಾಜಕೀಯ ಕಾರಭಾರಿಯಾಗಿದ್ದು ನ್ಯಾಯಾಡಳಿತವನ್ನು ನಿರ್ವಹಿಸುತ್ತಿದ್ದನು. ಸಂಸ್ಥಾನದ ಮೇಲ್ಮನವಿಗಳನ್ನು ಧಾರವಾಡದ ಕಲೆಕ್ಟರನು ಇತ್ಯರ್ಥಗೊಳಿಸುತ್ತಿದ್ದನು. ನ್ಯಾಯಾಡಳಿತವು ನಿಯಮಿತವಾಗಿ ವ್ಯವಸ್ಥೆಗೊಂಡಿದ್ದೇ ಅಬ್ದುಲ್ ಮಜೀದಖಾನ ನವಾಬನ ಆಳ್ವಿಕೆಯಲ್ಲಿ.

ನವಾಬನು ಊರಿನ ಪ್ರಮುಖರ ಸಲಹೆ ಸೂಚನೆಗಳನ್ನು ಸಮಾಧಾನದಿಂದ ಕೇಳಿ, ಆಡಳಿತೆಯಲ್ಲಿ ಅಳವಡಿಸಿಕೊಳ್ಳುತ್ತಿದ್ದನು. ಮಹಮ್ಮದಸಾಬ ಹುಸೇನಸಾಬ ರಾಯಚೂರ ಅನ್ನುವವನು ಒಂದು ಬ್ಯಾಂಡ್ ಕಂಪನಿಯನ್ನು ಕಟ್ಟಿ, ಬಾರಿಸಲು ಬೇರೆ ಬೇರೆ ಜಿಲ್ಲೆಗಳಿಗೆ ಹೋಗಿ ಸವಣೂರಿನ ಖ್ಯಾತಿಯನ್ನು ಬೆಳೆಸಿದ್ದನು. ನವಾಬನಿಗೆ ಮಹಮ್ಮದಸಾಬನ ಬ್ಯಾಂಡನ್ನು ಕೇಳಿ, ಅವನಿಂದ ತನ್ನ ಪೋಲೀಸರಿಗೆ ಅದೇಕೆ ಬ್ಯಾಂಡನ್ನು ಕಲಿಬಾರದೆಂದು ಅನಿಸಿತು. ಸರಿ, ಅವನಿಗೆ ಪೋಲೀಸ್ ಖಾತೆಯಲ್ಲಿ ಒಂದು ನೌಕರಿಯನ್ನು ಕೊಟ್ಟನು. ಅದರಿಂದ ಅವನ ಬ್ಯಾಂಡ್ ಕಂಪನಿ ಸ್ಥಗಿತಗೊಂಡಿತು. ಇವನನ್ನೇ ನಂಬಿದ್ದ ಇತರ ಬ್ಯಾಂಡ್ ಮೇಳದವರು ನಿರ್ಗತಿಕರವರು. ಯಾರೋ ಈ ಸುದ್ದಿಯನ್ನು ನವಾಬನ ಕಿವಿಗೆ

ಒಯ್ದಾಗ, ನವಾಬನು ತಕ್ಷಣ ಬ್ಯಾಂಡ್ ಮಾಸ್ಟರ್ ಮಹಮ್ಮದ್ ಸಾಬನನ್ನು ಪುನಃ ಅವನ ಬ್ಯಾಂಡ್ ಕಂಪನಿಗೇ ಕಳಿಸಿದನು. ಅಷ್ಟರಲ್ಲಿ ಪೋಲೀಸರು ಬ್ಯಾಂಡ್ ಕಲಿತಿದ್ದರು.

ಸವಣೂರು ಪೋಲೀಸರಲ್ಲಿ ಶಿಸ್ತು, ಸಂಯಮ, ಕಠೋರತೆ, ಧೈರ್ಯಗಳಿದ್ದವು. ಬೆಳಿಗ್ಗೆ ಪ್ರತಿಯೊಬ್ಬ ಪೋಲೀಸನೂ ಆರು ಗಂಟೆಯಿಂದ ಎಂಟು ಗಂಟೆಯವರೆಗೂ ಕಡ್ಡಾಯದ ಕವಾಯತು ಮಾಡಬೇಕಿತ್ತು. ಕೆಲ ಪೋಲೀಸರನ್ನು ಧಾರವಾಡಕ್ಕೆ ತರಬೇತಿಗೆಂದು ಕಳಿಸಲಾಗುತ್ತಿತ್ತು. ೧೮೬೯ರಿಂದ ೧೯೪೮ರವರೆಗೆ ಪೋಲೀಸ್ ಖಾತೆಯ ಹಿರಿಯ ಅಧಿಕಾರಗಳ ಹುದ್ದೆಗಳಲ್ಲಿ ಹೇಗೆ ಬದಲಾವಣೆಯಾದವೆಂದು ಗಮನಿಸಲು ಮುಂದಿನ ಪಟ್ಟಿಯನ್ನು ನೋಡಿರಿ:

| ಹುದ್ದೆಗಳು | ಅವರು ಕಾರ್ಯಮಾಡಿದ ಕಾಲ |
|---|---|
| ಜಮಾದಾರ | |
| ೦೧. ರಾಮರಾವ | ೧೮೬೯ |
| ೦೨. ರಾಮಜಿ ವಾಮನಜಿ | ೧೮೬೯ |
| ೦೩. ಅಬ್ದುಲ್ ಖಾದರ ಮೋದಿನ ಸಾಹೇಬ | ೧೮೬೯ |
| ೦೪. ಜೀತಸಿಂಗ್ ತುಲಾಸಿಂಗ | ೧೮೬೯-೭೦ |
| ೦೫. ಶೇಖಮೋದಿನ ಶಬಾ ಸಾಹೇಬ | ೧೮೭೦-೭೧ |
| ೦೬. ಬಾಳಾರಾಮ ನಾರಾಯಣ | ೧೮೭೧-೭೨ |
| ೦೭. ಶೇಖಮಹಮ್ಮದ ಗೂಡೂಭೈ | ೧೮೭೨ |
| ೦೮. ಬಾಳನರಾಮ ನಾರಾಯಣ | ೧೮೭೨ |
| ೦೯. ಶೇಖಮದಾರ ಗೂಢ ಭೈ | ೧೮೭೩ |
| ೧೦. ಜೀತಸಿಂಗ್ ತುಲಾಸಿಂಗ್ | ೧೮೭೩ |
| ೧೧. ಬಾಳಾರಾಮ ನಾರಾಯಣ | ೧೮೭೩-೭೪ |
| ೧೨. ಅಬ್ದುಲ್ ಸಾಬ ಮಹಬೂಬ ಹುಸೇನಿ | ೧೮೭೪ |
| ೧೩. ಬಾಳಾರಾಮ ನಾರಾಯಣ | ೧೮೭೪-೭೫ |
| ೧೪. ಗೋವಿಂದರಾವ್ | ೧೮೭೬-೭೭ |

೧೫. ಸೈಯದ್ ಮೋದಿನ ೧೮೭೮-೭೯

೧೬. ಬಾಲಾಜಿ ಭೀಮಾಜಿ ೧೮೮೦-೧೮೮೨

೧೭. ಅಬ್ದುಲ್ ಸಾಬ ೧೮೮೨-೧೮೮೩

೧೮. ಮೀರಮಹಮ್ಮದ ಅಲೀಖಾನಸಾಹೇಬ ೧೮೮೩-೧೮೮೪

ಚೀಫ್ ಕಾನಸ್ಟೇಬಲ್

೧೯. ಕೃಷ್ಣಾಜಿ ೧೮೯೪-೯೫

೨೦. ಎಸ್.ಜಿ.ಗೋಡಬೊಲೆ ೧೮೯೫-೯೬

೨೧. ಮೀರಮಹಮ್ಮದ ಅಲಿಖಾನ ೧೮೯೬-೯೭

೨೨. ರಾಮದಯಾಳ ಸಿಂಗ ೧೯೦೧-೦೫

ಸಬ್ ಇನಸ್ಪೆಕ್ಟರ್

೨೩. ಶಾಂತಾರಾಮ ರಘುನಾಥ ೧೯೦೫-೦೯

೨೪. ಬಾಬಾರಾವ್ ರಾಮರಾವ್ ೧೯೦೯-೧೫

೨೫. ರಾಮರಾವ್ ಶ್ರೀನಿವಾಸರಾವ್ ೧೯೧೫-೧೯೧೯

೨೬. ಇಮಾಮಧೀನಖಾನ ಶಾಮಮಹಮದಖಾನ ೧೯೧೯-೨೧

೨೭. ಕೇಶವರಾವ ಖಂಡೋರಾವ ೧೯೨೧

೨೮. ಮಹಮ್ಮದಸಾಹೇಬ ಅಬ್ದುಲ್ ಖಾದರಸಾಬ ೧೯೨೧-೧೯೩೫

೨೯. ರಾಮಚಂದ್ರ ದುರ್ಗಿ ೧೯೩೫-೧೯೩೯

ಇನ್‌ಸ್ಪೆಕ್ಟರ್

೩೦. ಮಹಮ್ಮದ್ ಸಾಹೇಬ ಅಬ್ದುಲ್ ಖಾದರಸಾಹೇಬ ೧೯೩೯-೪೩

ಪ್ರಾಯಶಃ ಮಹಮ್ಮದ ಸಾಹೇಬ ಸಂಸ್ಥಾನದ ಕೊನೆಯ ಪೋಲೀಸ್ ಮುಖ್ಯಾಧಿಕಾರಿ ಇದ್ದಿರಬೇಕು. ಕಾರಣ ೧೯೪೩ ರಿಂದ ೧೯೪೮ರವರೆಗೆ ಯಾರಿದ್ದರೆಂಬ ವಿವರಗಳು ಲಭ್ಯವಿಲ್ಲ. ಇನಸ್ಪೆಕ್ಟರ್ ಅಬ್ದುಲ್ ಖಾದರ ಸಾಹೇಬನಿಗೆ ನವಾಬ ಅಬ್ದುಲ್ ಮಜೀದಖಾನನು "ಖಾನಸಾಹೇಬ"ಎಂಬ ಬಿರುದನ್ನು ದಯಪಾಲಿಸಿದ್ದನು. ಸಾಮಾನ್ಯವಾಗಿ ಈ ರೀತಿ ಬಿರುದು ಬಾವಲಿಗಳನ್ನು ಸಂಸ್ಥಾನಿಕರು ಕೊಡುತ್ತಿರಲಿಲ್ಲ. ಆದರೆ ಮೈಸೂರು

ಸಂಸ್ಥಾನದಲ್ಲಿ ಮಹಾರಾಜರು ಈ ರೀತಿ ಬಿರುದುಗಳನ್ನು ಕೊಡುತ್ತಿದ್ದರು. ಸಂಸ್ಥಾನವು ವಿಲೀನವಾದಾಗ ನವಾಬನು ಈ ಇನಸ್ಪೆಕ್ಟರ್ ಖಾನಸಾಹೇಬ ಮಹಮ್ಮದಸಾಹೇಬನಿಗೆ ವಾಸಿಸಲು ಏಳು ಸಾವಿರ ರೂಪಾಯಿ ಬೆಲೆಯ ಮನೆಯೊಂದನ್ನು ದಯಪಾಲಿಸಿದ್ದನು.

**ವಿಲೀನೀಕರಣ ತೆರೆಯ ಮರೆಯಲ್ಲಿ**

ದೇಶಕ್ಕೆ ಸ್ವಾತಂತ್ರ್ಯ ಬಂದ ಮೇಲೆ, ೧೯೪೭ರ ಕೊನೆಗೆ ಐದುನೂರಕ್ಕೂ ಮಿಕ್ಕಿದ ಸಂಸ್ಥಾನಗಳಲ್ಲಿ ವಿಲೀನೀಕರಣದ ಪ್ರಕ್ರಿಯೆ ಪ್ರಾರಂಭವಾಯಿತು. ಹೈದ್ರಾಬಾದ್, ಜುನಾಗಡ, ಕಾಶ್ಮೀರಗಳಂತಹ ಮೂರು ಸಂಸ್ಥಾನಗಳನ್ನು ಬಿಟ್ಟರೆ, ಉಳಿದೆಲ್ಲವುಗಳು ಭಾರತದ ಒಕ್ಕೂಟಕ್ಕೆ ತಕ್ಷಣ ಸೇರಿಕೊಂಡವು.

ಸವಣೂರು ಸಂಸ್ಥಾನವು ೧೯೪೮ ಮಾರ್ಚ್ ೮ರಂದು ಧಾರವಾಡ ಜಿಲ್ಲೆಯಲ್ಲಿ ವಿಲೀನವಾಗಿ ಶಿಗ್ಗಾವಿ ತಾಲೂಕಿಗೆ ಸೇರಿತು. ಸವಣೂರಿಗೆ ತಾಲೂಕ ಸ್ಥಾನವನ್ನು ಕೊಡ ಕೊಡಲಿಲ್ಲ. ನಂತರ ಶ್ರೀ ಎಸ್.ನಿಜಲಿಂಗಪ್ಪನವರು ಸವಣೂರು ಭಾಗದಿಂದ ಅವಿರೋಧವಾಗಿ ಶಾಸಕರೆಂದು ಆಯ್ಕೆಯಾಗಿ, ಮುಖ್ಯಮಂತ್ರಿಯಾದಾಗ ಸವಣೂರಿಗೆ ತಾಲೂಕಿನ ಸ್ಥಾನಮಾನಗಳು ದೊರೆತವು. ಸವಣೂರು ಅತ್ಯಂತ ಸಣ್ಣ ಸಂಸ್ಥಾನವಿತ್ತು. ಯಾವುದೇ ತೋಫಿನ ಸಲಾಮಿ ಗೌರವವನ್ನು ಪಡೆಯದಿದ್ದ ಎರಡು ನೂರು ಸಂಸ್ಥಾನ ಗಳಲ್ಲಿ ಸವಣೂರೂ ಒಂದಾಗಿತ್ತು. ಸವಣೂರು ವಿಲೀನವಾದಾಗ ನವಾಬನಿಗೆ ಪ್ರತಿ ವರುಷ ರೂ.೩೦,೩೧೬ ರಾಜಧನವು ಮಂಜೂರಾಯಿತು. ಸವಣೂರು ಸಂಸ್ಥಾನಕ್ಕಿಂತಲೂ ಸಣ್ಣ ಸಂಸ್ಥಾನಗಳಿದ್ದವು. ಕಟೋದಿಯಾ ಎಂಬ ಸಂಸ್ಥಾನಿಕನಿಗೆ ವರ್ಷಕ್ಕೆ ರೂ.೧೯೨ ರಾಜಧನವು ದೊರೆಯುತ್ತಿತ್ತು. ಗರಿಷ್ಠ ರಾಜಧನವನ್ನು ಪಡೆಯುತ್ತಿದ್ದ ಸಂಸ್ಥಾನವೆಂದರೆ ಹೈದ್ರಾಬಾದ. ಅಲ್ಲಿಯ ನಿಜಾಮನಿಗೆ ಪ್ರತಿ ವರುಷ ರೂ.೪೨,೮೫,೭೧೪ ರಾಜಧನವು ಮಂಜೂರಾಗಿತ್ತು.

೧೯೪೭ ಆಗಸ್ಟ್ ೧೪ರ ಮಧ್ಯರಾತ್ರಿ ಶೂನ್ಯ ವೇಳೆಯಲ್ಲಿ ದೇಶವು ಬ್ರಿಟೀಶರಿಂದ ತನ್ನ ಸ್ವಾತಂತ್ರವನ್ನು ಪಡೆದಾಗ ಸಂಸ್ಥಾನಿಕರು ತಮಗೂ ಬ್ರಿಟಿಶರು ಸಾರ್ವಭೌಮತ್ವವನ್ನು ಕೊಟ್ಟು ಹೋದರೆಂಬ ಭ್ರಮೆಯಲ್ಲಿದ್ದರು. ಸೂರ್ಯಚಂದ್ರರಿಂದ ಅಧಿಕಾರವನ್ನು ಪಡೆದ ತಾವು ಆಚಂದ್ರಾರ್ಕವಾಗಿ ತಮ್ಮ ಸಂಸ್ಥಾನಗಳನ್ನು ತಾವೇ ಆಳುವೆವು ಅನ್ನುವ ಕಲ್ಪನಾಲೋಕದಲ್ಲಿ ವಿಹರಿಸುತ್ತಿದ್ದರು.

ವಲ್ಲಭಭಾಯಿಪಟೇಲರು ಸಂಸ್ಥಾನಗಳನ್ನು ಭಾರತದ ಒಕ್ಕೂಟಕ್ಕೆ ಸೇರ್ಪಡೆ ಮಾಡಿಕೊಳ್ಳುವ ಪ್ರಕ್ರಿಯೆಯಲ್ಲಿರುವಾಗ, ಮುಂಬೈ ಪ್ರಾಂತ್ಯದ ದಕ್ಷಿಣ ಸಂಸ್ಥಾನಗಳಾದ ಸಾಂಗ್ಲಿ, ಅಕ್ಕಲಕೋಟೆ, ಔಂಧ, ಕುರಂದವಾಡ (ಹಿರಿ-ಕಿರಿ), ಕೊಲ್ಹಾಪುರ, ಜತ್ತ, ಮಿರಜ, ಬುದಗಾಂವ, ಮುಧೋಳ, ರಾಮದುರ್ಗ, ಸವಣೂರು ಹಾಗೂ ಜಮಖಂಡಿ ರಾಜರು ಸಂಸ್ಥಾನಿಕರ ಒಂದು ಒಕ್ಕೂಟವನ್ನು ರಚಿಸಿಕೊಂಡು ತಮ್ಮ ರಾಜ್ಯದ ಅಧಿಕಾರವನ್ನು ತಮ್ಮ

ಕೈಯಲ್ಲಿಯೇ ಇಟ್ಟುಕೊಳ್ಳುವ ಒಂದು ಹುನ್ನಾರು ಹೂಡಿದರು. ಆದರೆ, ಆಯಾ ಸಂಸ್ಥಾನಗಳಲ್ಲಿದ್ದ ಪ್ರಜಾ ಹಿತರಕ್ಷಕ ಸಂಘಗಳು ಅಥವಾ ಪ್ರಜಾ ಪರಿಷತ್ತುಗಳು ಇದನ್ನು ವಿರೋಧಿಸಹತ್ತಿದ್ದವು. ಯಾವ ಪ್ರಜೆಗೂ ರಾಜರ ಆಳ್ವಿಕೆ ಬೇಕಿರಲಿಲ್ಲ. ಈ ರಾಜಮಹಾರಾಜರು ತಮ್ಮ ತಮ್ಮ ಸಂಸ್ಥಾನಗಳಲ್ಲಿ ಪ್ರಾತಿನಿಧಿಕ ಸಂಸ್ಥೆಗಳನ್ನು ಸ್ಥಾಪಿಸಿ, ಜವಾಬ್ದಾರಿ ರಾಜ್ಯ ಪದ್ಧತಿಯನ್ನು ಆರಂಭಿಸಬೇಕೆಂದು ಈ ಹಿಂದೆ ಪ್ರಜಾ ಪರಿಷತ್ತಿನವರು ಕೇಳಿದಾಗ ರಾಜರು ನಿರಾಕರಿಸಿದ್ದರು. ಪ್ರಜೆಗಳ ಚಳುವಳಿ ಸ್ವಾತಂತ್ರ್ಯ ಪೂರ್ವದಲ್ಲಿ ಸಂಸ್ಥಾನೀ ಪ್ರದೇಶಗಳಲ್ಲಿ ಇರಲಿಲ್ಲ. ಕಾರಣ, ೧೯೨೨ರಿಂದಲೇ ಕಾಂಗ್ರೆಸ್ಸು ನಿರ್ಲಿಪ್ತ ಭಾವನೆಯನ್ನು ತಾಳಿ, ತಮ್ಮವರೇ ಆದ ರಾಜರ ವಿರುದ್ಧ ಹೋರಾಡುವುದು ಬೇಡವೆಂದು ನಿರ್ಧರಿಸಿತ್ತು. ೧೯೩೭ರಲ್ಲಿ ಕಲಕಲತ್ತಾದಲ್ಲಿ ಸೇರಿದ ಅಖಿಲ ಭಾರತ ಕಾಂಗ್ರೆಸ್ಸಿನ ಅಧಿವೇಶನದಲ್ಲಿ ಸಂಸ್ಥಾನಗಳಲ್ಲಿ ನಡೆಯುತ್ತಿದ್ದ ದಬ್ಬಾಳಿಕೆಯನ್ನು ಚಳುವಳಿಗಾರರು ಖಂಡಿಸಬೇಕು ಎಂಬ ಒಂದು ಗೊತ್ತುವಳಿ ಪಾಸಾಯಿತು. ಇದರಿಂದ ಸ್ವಲ್ಪ ನೊಂದುಕೊಂಡ ಗಾಂಧೀಜೀ ಕಾಂಗ್ರೆಸ್ ಪಕ್ಷಕ್ಕೆ ರಾಜಿನಾಮೆ ಕೊಟ್ಟರು. ಅವರಿಗೆ ನಮ್ಮ ಪ್ರದೇಶಗಳಲ್ಲಿ ನಮ್ಮ ರಾಜರ ವಿರುದ್ಧ ಚಳುವಳಿ ಬೇಡವಾಗಿತ್ತು.

ಸವಣೂರು ಸಂಸ್ಥಾನದಲ್ಲಿ ಚಳುವಳಿ ಕಾಲದಲ್ಲಿ ಪ್ರಜೆಗಳು ಸದಾ ಭೀತಿಯ ನೆರಳಲ್ಲಿಯೇ ಬಾಳುತ್ತಿದ್ದರು. ಸವಣೂರಲ್ಲಿ ಗಾಂಧೀ ಟೊಪ್ಪಿಗೆ ಧರಿಸುವದು ಒಂದು ಅಪರಾಧವಾಗಿತ್ತು. ಸವಣೂರಲ್ಲಿ ವಾಕ್ ಸ್ವಾತಂತ್ರ್ಯವಿರಲಿಲ್ಲ. ಪಠಾಣ ಕುಲದ ಮಜೀದಖಾನ ನವಾಬನು ಅತ್ಯಂತ ದುಡುಕು ಸ್ವಭಾವದವನಿದ್ದನು. ಅವನು ಹೇಳಿದ್ದೇ ಕಾನೂನು. ಅಧಿಕಾರಿಗಳು ಅವನಿಗೆ ಅಂಜುತ್ತಿದ್ದರು. ಯಾರದೋ ಚಾಡಿ ಮಾತು ಕೇಳಿ ಮಜೀದಖಾನನು ಪ್ರಜೆಗಳನ್ನು ಹಿಂಸಿಸುತ್ತಿದ್ದನು. ಇವನ ಆಳ್ವಿಕೆಯಲ್ಲಿ ಕೆಲವರು ಗಡೀಪಾರು ಆದರು. ಕೆಲವರು ಮೈ ಹುಳಿಯುವಷ್ಟು ಹೊಡೆಸಿಕೊಂಡರು. ಅನೇಕರು ಭೂಮಿಗಳನ್ನು ನವಾಬನು ಲಿಲಾವು ಮಾಡಿಸಿದನು. ತೋರಿಕೆಗೆ ಮಜೀದಖಾನನು ಒಳ್ಳೆಯವನಾಗಿಯೇ ಇದ್ದನು. ಅವನ ಕಾರು ಸವಣೂರಿನ ಬೀದಿಯಲ್ಲಿ ಹಾದು ಹೋದರೆ, ಅಂಗಡಿಗಳಲ್ಲಿ ಇದ್ದವರು ಹೊರಗೆ ಬಂದು,ನೆಲಕ್ಕೆ ಬಗ್ಗಿ ಸಲಾಮು ಮಾಡಬೇಕಿತ್ತು. ಹಾಗೆ ಯಾರಾದರೂ ಮಾಡದಿದ್ದುದು ನವಾಬನ ಲಕ್ಷ್ಯಕ್ಕೆ ಬಂದರೆ, ಅಂತಹವರಿಗೆ ಅಲ್ಲಿಯೇ ಪಾದರಕ್ಷೆಗಳ ಪ್ರಸಾದವನ್ನು ಕೊಡುತ್ತಿದ್ದನು. ಅವನ ಹಲವು ಒಳ್ಳೇ ಗುಣಗಳಲ್ಲಿ ಇಂತಹ ಕೆಲ ಕೆಟ್ಟ ಗುಣಗಳೂ ಸೇರಿಕೊಂಡಿದ್ದವು.

೧೯೪೭ರ ಸೆಪ್ಟೆಂಬರದಿಂದ, ಭಾರತ ಸರಕಾರವು ಸಂಸ್ಥಾನಗಳ ಭವಿಷ್ಯವನ್ನು ನಿರ್ಧರಿಸಲು ಒಂದು ಯೋಜನೆಯನ್ನು ಸಿದ್ಧಪಡಿಸಿತು. ರಾಜಧನವನ್ನು ಕೊಟ್ಟು ರಾಜಮಹಾರಾಜ ಹಾಗೂ ನಿಜಾಮ-ನವಾಬರ ಸಂಸ್ಥಾನಳನ್ನು ಭಾರತದ ಒಕ್ಕೂಟಕ್ಕೆ ಸೇರಿಸಿಕೊಳ್ಳುವುದೇ ಈ ಯೋಜನೆಯಾಗಿತ್ತು. 'Instrument of Accession' ಅನ್ನುವ

ಕರಾರು ಪತ್ರವನ್ನು ಸಿದ್ಧಪಡಿಸಿ, ಮಹಾರಾಜರೊಂದಿಗೆ ಕರಾರು ಪತ್ರ ಮಾಡಿಕೊಂಡು ಸಂಸ್ಥಾನೀ ಪ್ರದೇಶಗಳನ್ನು ಆಯಾ ರಾಜ್ಯಗಳ ಸಮೀಪದ ಜಿಲ್ಲೆಗೆ ಸೇರಿಸಿಕೊಳ್ಳುವುದೇ ಈ ವಿಲೀನಕರಣ ಧ್ಯೇಯವಾಗಿತ್ತು. ಬಡೋದಾ, ಹೈದ್ರಾಬಾದಗಳಂತಹ ಸಂಸ್ಥಾನದ ರಾಜಧಾನಿಗಳು ಪ್ರತ್ಯೇಕ ಪ್ರಾಂತಗಳಾದವು.

ದಕ್ಷಿಣ ಸಂಸ್ಥಾನಗಳ ಒಕ್ಕೂಟ ರಚಿಸಿಕೊಂಡು ಭಾರತ ಸರಕಾರಕ್ಕೆ ತಮ್ಮ ಸಾರ್ವಭೌಮತ್ವವನ್ನು ಒಪ್ಪಿಸಲು ಸಿದ್ಧರಾಗುವ ನವಾಬರು ಸವಣೂರಲ್ಲಿ ಫೆಬ್ರವರಿ ೨, ೧೯೪೮ರಲ್ಲಿ ಸಂಸ್ಥಾನದ ಸಂಸತ್ತಿನ ಸದಸ್ಯರನ್ನು ಕರೆದು "ನಮ್ಮ ಸಂಸ್ಥಾನದ ಪ್ರಜೆಗಳು ಸವಣೂರು ಸಂಸ್ಥಾನದ ಭವಿಷ್ಯವನ್ನು ನಿರ್ಧರಿಸಬೇಕು. ಸಂಸ್ಥಾನಿಕನಾದ ನಾನು ಹೇಗೆ ನಡೆದುಕೊಳ್ಳಬೇಕು ಎಂದು ನಿಮ್ಮನ್ನು ಕೇಳುತ್ತೇನೆ. ನೀವೆಲ್ಲರೂ ನಮ್ಮ ಸಂಸ್ಥಾನವು ಮುಂಬೈ ಪ್ರಾಂತ್ಯದಲ್ಲಿ ವಿಲೀನವಾಗಬೇಕೆಂದು ಬಯಸಿದರೆ ನನ್ನ ಅಭ್ಯಂತರವಿಲ್ಲ. ಇದನ್ನು ಜನತೆಯೇ ನಿರ್ಧರಿಸಬೇಕು. ನೀವು ಸಮಾಲೋಚಿಸಿ, ನನಗೆ ಖಚಿತವಾದ ಉತ್ತರವನ್ನಿತ್ತರೆ, ನಾನು ಸಂಸ್ಥಾನಗಳ ಸಚಿವ ಶಾಖೆಯನ್ನು ಸಂಪರ್ಕಿಸಿ, ಮುಂದಿನ ಕಾರ್ಯಕ್ಕೆ ಉದ್ಯುಕ್ತನಾಗುತ್ತೇನೆ. ಕಳೆದ ಹಲವಾರು ವರುಷಗಳಿಂದ ಸವಣೂರಿನ ಪ್ರಜೆಗಳು ಶಾಂತ ರೀತಿಯಲ್ಲಿ ವರ್ತಿಸಿದ್ದಕ್ಕೆ ಹಾಗೂ ಸಂಸ್ಥಾನೀ ಸಿಬ್ಬಂದಿ ವರ್ಗದವರು ನಿಷ್ಠರಾಗಿ ಸೇವೆಯನ್ನು ಸಲ್ಲಿಸಿದ್ದಕ್ಕೆ ನಾನು ತುಂಬಾ ಋಣಿಯಾಗಿದ್ದೇನೆ" ಎಂದು ಜನರಿಗೆ ಮೊರೆಯಿತ್ತನು. ಅಬ್ದುಲ್ ಮಜೀದಖಾನನು ತನ್ನ ಮೂವತ್ತಾರು ವರುಷಗಳ ಆಳ್ವಿಕೆಯಲ್ಲಿ ಇಷ್ಟು ನಮ್ರವಾಗಿ ನುಡಿದದ್ದು ಇದೇ ಮೊದಲು. ಸವಣೂರು ಸಂಸ್ಥಾನದ ಸಂಸತ್ ಸದಸ್ಯರು ಸಭೆಯಲ್ಲಿ ಯಾವ ಅಭಿಪ್ರಾಯವನ್ನೂ ವ್ಯಕ್ತಪಡಿಸಲಿಲ್ಲ. ಅವರಿಗಿನ್ನೂ ನವಾಬನ ಭಯವಿತ್ತು. ಆದರೆ ದೇಶದ ತುಂಬ ವಿಲೀನೀಕರಣದ ಗಾಳಿ ಬೀಸಿದಾಗ, ಸಂಸತ್ತು ಸದಸ್ಯರು ಧಾರವಾಡ ಜಿಲ್ಲೆಯಲ್ಲಿ ವಿಲೀನವಾಗಬೇಕೆಂದು ನಂತರ ನವಾಬನಿಗೆ ಹೇಳಿದರು. ನವಾಬನು ಸಂಸತ್ ಸದಸ್ಯರಿಗೆ ಸಂಸ್ಥಾನದ ಭವಿಷ್ಯ ಕುರಿತು ಕೇಳಿದ ಅಭಿಪ್ರಾಯವನ್ನು ಮುಂಬೈ ಟೈಮ್ಸ್ ಆಫ್ ಇಂಡಿಯಾ ಹಾಗೂ ಫ್ರಿಪ್ರೆಸ್ ಜರ್ನಲ್ ಪತ್ರಿಕೆಗಳು ತುಂಬಾ ಹೊಗಳಿದವು. ನವಾಬನನ್ನು ಆದರ್ಶ ಸಂಸ್ಥಾನಿಕನೆಂದು ಪ್ರಶಂಸಿದವು.

ಫೆಬ್ರವರಿ ಹತ್ತೊಂಬತ್ತು ೧೯೪೮ರಂದು, ವಲ್ಲಭಭಾಯಿ ಪಟೇಲರು ಕಾರ್ಯದರ್ಶಿ ಎಂ.ಜೆ.ದೇಸಾಯಿ, ಮಜೀದಖಾನನ್ನು ಮುಂಬೈಗೆ ಬುಲಾವ್ ಮಾಡಿದನು. ಇವನ ಜೊತೆ ದಕ್ಷಿಣ ಸಂಸ್ಥಾನದ ಹಲವಾರು ಮಹಾರಾಜರು ಬಂದಿದ್ದರು. ವಿಲೀನೀಕರಣ ಪ್ರಶ್ನೆಯನ್ನು ಈ ರಾಜರ ಮುಂದೆ ಇಡಲಾಯಿತು. ಮುಧೋಳ ಮತ್ತು ಕೊಲ್ಲಾಪುರ ಮಹಾರಾಜರು ಮೊದಲು ತಾವು ತಮ್ಮ ಸಿಂಹಾಸನಗಳನ್ನು ತ್ಯಜಿಸಿ, ತಮ್ಮ ಸಂಸ್ಥಾನಗಳನ್ನು ಭಾರತ ಒಕ್ಕೂಟಕ್ಕೆ ಸೇರಲು ಅನುಮತಿ ಕೊಟ್ಟೊಡನೆ, ಉಳಿದ ಸಂಸ್ಥಾನಿಕರು ವಿಲೀನೀಕರಣಕ್ಕೆ ಒತ್ತಾಯಪೂರ್ವಕವಾಗಿ ಒಪ್ಪಲೇಬೇಕಾಯಿತು. ವಲ್ಲಭಭಾಯಿ ಪಟೇಲರು ವಿಲೀನೀಕರಣದ

ಒಪ್ಪಂದ ಪತ್ರವನ್ನು ಸಿದ್ಧವಾಗಿರಿಸಿದ್ದರು. ಸರಿ, ನವಾಬ ಮಜೀದಖಾನನು ಗತ್ಯಂತರವಿಲ್ಲದೆ ಒಪ್ಪಂದಕ್ಕೆ ಸಹಿ ಹಾಕಿ ಸವಣೂರಿಗೆ ಬಂದನು. ನವಾಬನ ಹಸ್ತಾಕ್ಷರವಾದ ಎರಡು ಗಂಟೆಗಳಲ್ಲಿ, ಧಾರವಾಡದಿಂದ ಕಲೆಕ್ಟರರು ಹಿರಿಯ ಅಧಿಕಾರಿಗಳನ್ನು ಸವಣೂರಿಗೆ ಕಳಿಸಿ,ಹುಜೂರ ಟ್ರೇಝರಿಗೆ ಮೊಹರು ಮಾಡಿಸಿಬಿಟ್ಟರು.ನವಾಬ ಮಜೀದಖಾನನು ಮರಳಿ ಸವಣೂರಿಗೆ ಬಂದನು. ಅವನ ಮುಖ ಕಳಾಹೀನವಾಗಿತ್ತು. ಸವಣೂರು ಟ್ರೇಝರಿಯಲ್ಲಿ ಒಂಭತ್ತು ಲಕ್ಷ ರೂಪಾಯಿ ಶಿಲ್ಕ ಇತ್ತು. ಅದನ್ನು ಮಜೀದಖಾನನು ಮುಟ್ಟುವಂತಿರಲಿಲ್ಲ. ಹೀಗೆ ಸವಣೂರು ಸಂಸ್ಥಾನವು ನವಾಬ ಮಜೀದಖಾನನ ಜೀವಿತ ಕಾಲದಲ್ಲಿಯೇ ಭಾರತದ ಒಕ್ಕೂಟಕ್ಕೆ ಸೇರಿತು.

### ವಿಲೀನೀಕರಣ ಸಮಾರಂಭ

ಮಾರ್ಚ್ ೮, ೧೯೪೮ ರಂದು ಧಾರವಾಡದ ಕಲೆಕ್ಟರನು ಮಜೀದಖಾನನಿಂದ ಸವಣೂರು ಸಂಸ್ಥಾನವನ್ನು ಭಾರತ ಸರಕಾರದ ಪರವಾಗಿ ಸ್ವೀಕರಿಸಬೇಕೆಂದು ದಿಲ್ಲಿ ಸರಕಾರವು ನಿರ್ಧರಿಸಿತು. ಸವಣೂರಲ್ಲಿ ನಡೆದ ಇನ್ನೊಂದು ವಿಚಿತ್ರ ಘಟನೆಯೆಂದರೆ, ೧೯೪೭ ಆಗಸ್ಟ್ ೧೫ ರಂದು ಸರಕಾರೀ ಮಹಲಿನ ಮೇಲೆ ಬ್ರಿಟಿಶರ ಗುಲಾಮಗಿರಿ ಪ್ರತೀಕವಾಗಿದ್ದ ಯೂನಿಯನ್ ಜಾಕ್ ಧ್ವಜವು ಹಾರುತ್ತಿತ್ತು. ಸವಣೂರಲ್ಲಿ ಎಲ್ಲಿಯೂ ರಾಷ್ಟ್ರಧ್ವಜದ ಹಾರಾಟ ನಡೆಯಲಿಲ್ಲ. ಸವಣೂರ ಮಜೀದ ಹೈಸ್ಕೂಲಿನಲ್ಲಿ ನಾನಾಗ ವಿದ್ಯಾರ್ಥಿ. ವಿದ್ಯಾರ್ಥಿಗಳೆಲ್ಲರೂ ಸೇರಿ ಧ್ವಜಾರೋಹಣ ಮಾಡಬೇಕೆಂದು ಮುಖ್ಯಾಧ್ಯಾಪಕ ಶ್ರೀ ಭಾಸ್ಕರ ರಾಮಚಂದ್ರ ದೇವಧರ ಅವರನ್ನು ಆಗಸ್ಟ್ ಹದಿಮೂರು ೧೯೪೭ರಂದು ಕೇಳಿದೆವು. ಅವರು ಮಜೀದಖಾನರ ಅನುಮತಿ ಬೇಕು ಅಂದರು. ಸರಿ, ನಾನು ಮತ್ತು ಮಹಂತ ಶೆಟ್ಟಿ ಅನ್ನುವ ಇನ್ನೊಬ್ಬ ವಿದ್ಯಾರ್ಥಿ ಕೂಡಿ ಎಡಗೈಯಲ್ಲಿ ಜೀವ ಹಿಡಿದುಕೊಂಡು ನವಾಬನ ಮಜೀದ ಕ್ಯಾಶಲ್‌ಕ್ಕೆ ಹೋದೆವು. ನವಾಬನಿಗೆ ಆಶ್ಚರ್ಯ. ತಾನೇ ಸಾರ್ವಭೌಮನಾಗಿ ಮುಂದುವರೆಯುವ ಭರವಸೆ ಅವನ ಮುಖದ ಮೇಲಿತ್ತು. ಕೊನೆಗೆ ಪರವಾನಗಿ ದೊರೆಯಿತು. ಮಜೀದ ಹೈಸ್ಕೂಲದಲ್ಲಿ ಮೊಟ್ಟ ಮೊದಲು ರಾಷ್ಟ್ರಧ್ವಜ ಹಾರಿತು. 'ವಂದೇ ಮಾತರಂ' ಗೀತೆಯ ಶಬ್ದಗಳು ಕೇಳಿಬಂದವು. ದೇಶಕ್ಕೆ ಸ್ವಾತಂತ್ರ ಬಂದರೂ ಸವಣೂರಲ್ಲಿಯ ಪ್ರಜೆಗಳ ಭೀತಿ ಕಡಿಮೆಯಾಗಿರಲಿಲ್ಲ. ನಾನು ಧ್ವಜರೋಹಣದ ಅನುಮತಿ ಕೇಳಲು ಹೋದದ್ದಕ್ಕೆ, ನಾನು ಯಾರ ಮನೆಯಲ್ಲಿ ಇದ್ದು ಕಲಿಯುತ್ತಿದ್ದೇನೋ ಆ ಗೋಪಾಳರಾವ ಖಾರದ ಅವರು ತಮ್ಮ ಶಿಕ್ಷಕ ವೃತ್ತಿಯನ್ನು ಕಳೆದುಕೊಳ್ಳಬೇಕಾಯಿತು. ಮುಂದೆ ಫೆಬ್ರವರಿ ೧೯೪೮ರಂದು ವಿಲೀನೀಕರಣ ಪತ್ರಕ್ಕೆ ಸಹಿ ಹಾಕಿ ಬಂದ ಮೇಲೆ ಮರಳಿ ಅವರಿಗೆ ಮತ್ತೆ ನೌಕರಿ ಕೊಟ್ಟನು. ೧೯-೨-೧೯೪೮ ಮತ್ತು ೭-೫-೧೯೪೮ರ ಮಧ್ಯೆ ತನಗೆ ಬೇಕಾದವರಿಗೆ ಸಹಾಯ ಮಾಡಿದನು. ಆದರೆ ಸಂಸ್ಥಾನ ಅವನ ಕೈಬಿಟ್ಟಿತ್ತು.

ಮಾರ್ಚ ೭, ೧೯೪೮ರಂದೇ ಧಾರವಾಡದ ಕಲೆಕ್ಟರ್ ಮಿ॥ ಬೆಂಜಾಮಿನ್, ಆರಕ್ಷಕ ಅಧೀಕ್ಷಕರು ಹಾಗೂ ಒಂದು ನೂರು ಜನ ಆರಕ್ಷಕರು ಸವಣೂರಿಗೆ ಬಂದರು. ಮಾರ್ಚ್ ಎಂಟರಂದು ಮುಂಜಾನೆ ಪೋಲೀಸರು ಒಂದು ತಾಸು ಪಥಸಂಚಲನ ಮಾಡಿದರು. ಊರಿನ ಗಣ್ಯರೆಲ್ಲರೂ ನೆರೆದಿದ್ದರು. ಕೊಂಬು, ಕಹಳೆಗಳು ಮೊಳಗುತ್ತಿದ್ದವು. ನವಾಬ ಮಜೀದಖಾನನು ದರ್ಬಾರೀ ವೇಷ ಧರಿಸಿ, ಮಿಲಿಟರಿಯಲ್ಲಿ ಪಡೆದ ತನ್ನ ಪದಕಗಳನ್ನು ಎದೆಗೆ ಧರಿಸಿ ಧ್ವಜಾರೋಹಣಕ್ಕೆ ಸ್ವಲ್ಪ ಮೊದಲು ಬಂದನು. ಇದೇ ಅವನು ಕೊನೆಯ ಬಾರಿ ಧರಿಸಿದ ಸವಣೂರು ದರ್ಬಾರೀ ವೇಷವಾಗಿತ್ತು. ಮಜೀದಖಾನನು ಬಂದಾಗ ಸವಣೂರು ನಾಗರೀಕರು ಮೊದಲಿನಂತೆ ಉತ್ಸಾಹವನ್ನು ತೋರಿಸಲಿಲ್ಲ. ನೆಲಕ್ಕೆ ಕೈಹಚ್ಚಿ ಸಲಾಮನ್ನೂ ಮಾಡಲಿಲ್ಲ. ಸವಣೂರಿಗೆ ನಿಜವಾದ ಸ್ವಾತಂತ್ರ್ಯ ಇಂದು ಬಂದಿತ್ತು. ನವಾಬನ ಮುಖ ಬಾಡಿತ್ತು. ನಾನು ಸಮೀಪಕ್ಕೆ ನಿಂತಿದ್ದೆ. ನವಾಬನು ಯಾರೊಡನೆಯೂ ಮಾತನಾಡಲಿಲ್ಲ. ಧಾರವಾಡ ಕಲೆಕ್ಟರ ಬೆಂಜಾಮಿನ್‌ನು ಧ್ವಜಾರೋಹಣವನ್ನು ಮಾಡಿ, ಪೋಲೀಸ್ ಸಲಾಮಿಯನ್ನು ಸ್ವೀಕರಿಸಿದನು. ಆರಕ್ಷಕರು ಅಂದು ನವಾಬ ಮಜೀದಖಾನನಿಗೆ ಸಲಾಮನ್ನೀಯಲಿಲ್ಲ. ಕಾರಣ ಅಂದವನು ಕೇವಲ ಸವಣೂರಿನ ಒಬ್ಬ ಪ್ರಜೆಯಾಗಿದ್ದನು. ಧ್ವಜಾರೋಹಣವು ಮುಗಿದೊಡನೆ ನವಾಬನು ಧ್ವಜಸ್ತಂಬದ ಹತ್ತಿರ ನಿಂತ ಕಲೆಕ್ಟರ ಬೆಂಜಾಮಿನ್ನನ ಕೈಕುಲುಕಿ, ಸಮೀಪದಲ್ಲಿ ನಿಲ್ಲಿಸಿದ್ದ 'ಸವಣೂರು ಸ್ಟೇಟ್ ' ಎಂಬ ಬೋರ್ಡ್‌ನ್ನು ಹಾಕಿ ಕೊಂಡಿದ್ದ ಕೆಂಪು ಕಾರನ್ನು ಹತ್ತಿ ಬೆಂಗಳೂರಿಗೆ ಹೋದನು. ಸವಣೂರು ಸಂಸ್ಥಾನದ ನೆನಪೆಂದರೆ ಆ ಕಾರಿನ ಹಿಂದೆ ಮುಂದೆ ಅಂಟಿಸಿದ್ದ 'ಸವಣೂರು' ಅನ್ನುವ ನಾಮಫಲಕ. ಕಾರನ್ನೇರುವಾಗ ನವಾಬನು ತನ್ನ ಒಂದು ಕಾಲು ಕಾರಿನಲ್ಲಿಟ್ಟು ಇನ್ನೆಂದೂ ತನ್ನ ಕಾಲು ಸವಣೂರು ನೆಲವನ್ನು ಸ್ಪರ್ಶಿಸುವುದಿಲ್ಲವೆಂದು ಪ್ರತಿಜ್ಞೆ ಮಾಡಿದನು. ಅವನ ದೃಢ ನಿರ್ಧಾರದಿಂದ, ಕೊನೆಗೆ ಅವನ ಶವವು (ಸಾವು ೩೦-೫-೧೯೫೪) ಬೆಂಗಳೂರಿನಿಂದ ಮೇ ೩೧ಕ್ಕೆ ಸವಣೂರಿಗೆ ಬಂದಿತು. ಖಾದರಾಬಾಗದಲ್ಲಿ ಅವನ ಗೋರಿಯಾಯಿತು. ಅವನು ಬೆಂಗಳೂರಿನಲ್ಲಿ ಕಾಲ ಕಳೆಯುತ್ತಿರುವಾಗ ಸವಣೂರಿನ ಕೆಲ ಸಾಮಾಜಿಕ ಕಾರ್ಯಕರ್ತರು ಅವನ ಮೇಲೆ ಒಂದು ಸಿವಿಲ್ ಖಟ್ಲೆಯನ್ನು ಹಾಕಿದರು. ಅದಕ್ಕಾಗಿ ಅವನು ಸವಣೂರು ನ್ಯಾಯಾಲಯಕ್ಕೆ ಬಂದು ಸಾಕ್ಷಿಯನ್ನು ಹೇಳಬೇಕಾದ ಪ್ರಸಂಗವು ಒದಗಿ ಬಂದಿತು. ನ್ಯಾಯಾಲಯದ ಆಜ್ಞೆಯನ್ನು ತಿರಸ್ಕರಿಸುವಂತಿಲ್ಲ. ಅದಕ್ಕೆ ನವಾಬನು ತನಗಿದ್ದ ಸರ್ಕಾರದ ವಿಶೇಷ ಸವಲತ್ತಿನ ಪ್ರಯೋಜನ ಪಡೆದು ತನ್ನ ಹೇಳಿಕೆಯನ್ನು ಕೋರ್ಟ್ ಕಮೀಶನ್ನದ ಎದುರು ಸವಣೂರು ರೈಲ್ವೆ ನಿಲ್ದಾಣದಲ್ಲಿ ಪಡೆಯಬೇಕೆಂದು ಕೇಂದ್ರ ಸರ್ಕಾರಕ್ಕೆ ಕೇಳಿಕೊಂಡು ಅನುಮತಿಯನ್ನು ಪಡೆದನು. ಬೆಂಗಳೂರಿಂದ ರೈಲ್ವೆ ಸಲೂನಿನಲ್ಲಿ ಬಂದು ಹಾಗೆಯೇ ಅದೇ ಸಲೂನಿನಲ್ಲಿ ಮರಳಿ ಹೋದನು. ಅವನು ಅತ್ಯಂತ ಛಲವಾದಿ ಇದ್ದನು. ಹದಿನೈದನೇ ತಲೆಯವನಾದ ಅಬ್ದುಲ್ ಮಜೀದಖಾನನ ತಲೆಗೆ ಎರಡು ನೂರ ಎಪ್ಪತ್ತಾರು ವರುಷಗಳ (೧೬೮೬-೧೯೪೮) ಅವರ

ಮಿಯಾನಾ ಘರಾಣೇದ ಆಳ್ವಿಕೆ ಮತ್ತು ಅವನ ಮೂವತ್ತಾರು ವರುಷಗಳ ಆಳ್ವಿಕೆ ಅಂತ್ಯಗೊಂಡವು. ಸವಣೂರು ರಾಜ್ಯದ ದೀಪ ನಂದಿತು. ಸವಣೂರು ರಾಜ್ಯ ಸ್ಥಾಪನೆಗೆ ಅಬ್ದುಲ್ ರವೂಫಖಾನ ನವಾಬನು ಮೂಲ ಕಾರಣಕರ್ತನಾದರೆ, ಅಬ್ದುಲ್ ಮಜೀದಖಾನ ನವಾಬನು ಕೊನೆಗೆ ಲಯಕರ್ತನಾದನು. ಸವಣೂರು ನವಾಬರೆಂದರೆ ಒಂದು ದೃಷ್ಟಿಯಲ್ಲಿ ಉತ್ತರ ಕರ್ನಾಟಕದ ಒಡೆಯರು.

◆◆

## ಪರಿಶಿಷ್ಟ

ಕರ್ನಾಟಕಕ್ಕೆ ಸಂಬಂಧಿಸಿದ ಕಾಗದ ಪತ್ರಗಳ ಗಂಟು (ದಪ್ತರ)ಗಳಲ್ಲಿ ಸವಣೂರಿಗೆ ಸಂಬಂಧಿಸಿದ ಹಲವಾರು ವಿಧದ ಕಾಗದ ಪತ್ರಗಳು ಲಭ್ಯವಿವೆ. ಈ ಕಾಗದ ಪತ್ರಗಳು ಸಾಮಾಜಿಕ,ಆರ್ಥಿಕ, ಸಾಂಸ್ಕೃತಿಕ ಇತಿಹಾಸಾಭ್ಯಾಸಗಳಿಗೆ ಉಪಯೋಗ ಬೀಳುತ್ತವೆ. ಹೀಗಾಗಿ ಅವುಗಳನ್ನು ಮುಂದಿನ ಪರಿಶಿಷ್ಟಗಳಲ್ಲಿ ಕೊಡಲಾಗಿದೆ.

ತಾಳೆಬಂದ (ವಾರ್ಷಿಕ·ಜಮಾ- ಖರ್ಚು ಪಟ್ಟಿ) ವಾರ್ಷಿಕ,ಮಾಸಿಕ ಮತ್ತು ತಾತ್ಪೂರ್ತಿಕ (ಇಜಮಾಯಿಲ್) ಎಂಬ ಮೂರು ವಿಧದ ಜಮಾ ಖರ್ಚುಗಳು ಇರುತ್ತವೆ. ಸಾಮಾನ್ಯವಾಗಿ ಜಮಾ-ಖರ್ಚು (ಆಯ-ವ್ಯಯಗಳ ಪಟ್ಟಿ)ವರ್ಷಕ್ಕೆ ಒಂದು ಸಲ ತೆಗೆಯುವ ಪರಿಪಾಠವಿರುತ್ತದೆ. ಆದರೆ, ಮಾಸಿಕ ಜಮಾ-ಖರ್ಚಿನ ವಿವರಗಳನ್ನು ಜಿಲ್ಲಾಧಿಕಾರಿಗಳಿಗೆ ತಿಂಗಳಿನ ಅಂತ್ಯಕ್ಕೆ ಕಳಿಸುವ ಪದ್ಧತಿಯು ಅಂದು ರೂಢಿಯಲ್ಲಿತ್ತು. ಅವಶ್ಯಬಿದ್ದರೆ ತಾತ್ಪೂರ್ತಿಕ ಜಮಾ-ಖರ್ಚಿನ ವಿವರಗಳು ಸಿದ್ಧವಾಗುತ್ತಿದ್ದವು.

ತಾಳೇಬಂದ ಒಂದು ರೀತಿಯ ಕಾಗದ ಪತ್ರಗಳಾದರೆ ವಹಿವಾಟ (ವ್ಯವಸ್ಥೆ ಮಾಡುವುದು) ಇನ್ನೊಂದು ರೀತಿ ದಾಖಲೆ ಪತ್ರ. ವಹಿವಾಟ ಅಂದರೆ ಪ್ರಶಾಶನ ಅಥವಾ ವ್ಯವಸ್ಥಾಪನ. ಹೊಸದಾಗಿ ಗೆದ್ದ ಪ್ರದೇಶಗಳಲ್ಲಿ ತಮ್ಮ ಪ್ರಶಾಶನವನ್ನು ಹೇರುವ ಮೊದಲು ಆಯಾ ಪ್ರದೇಶಗಳಲ್ಲಿದ್ದ ನಿಯಮ, ನಿಬಂಧನೆಗಳನ್ನು, ನಡೆಸಿಕೊಂಡು ಆಡಳಿತೆಯನ್ನು ನಡಸಿಕೊಂಡು ಹೋಗುವುದೇ ವಹಿವಾಟ ಅರ್ಥಾತ್ ಬಳಕೆ ಮಾಡುತ್ತಾ ಇರುವುದು. ಈ ವಹಿವಾಟವನ್ನು ತಾಳೆಬಂದದ ಹಿಂದೆ ಹಚ್ಚಿ 'ವಹಿವಾಟ ತಾಳೇಬಂದ' ಎಂದು ಕರೆಯುತ್ತಾರೆ. ಸವಣೂರು ತಾಲೂಕಿನ ಕೆಲ ವಹಿವಾಟ, ತಾಳೇಬಂದಗಳು ಇಲ್ಲಿವೆ.

ಯಾದಿ ಅನ್ನುವ ಇನ್ನೊಂದು ದಾಖಲೆ ದೊರೆಯುತ್ತದೆ. "ಯಾದಿ"ಅಂದರೆ ಇಂಗ್ಲೀಷಿನ ಮೆಮೋರಾಂಡಮ್ ಅಥವಾ ಜ್ಞಾಪನಾ ಪತ್ರ. ಯಾದಿ ಎಂದರೆ ಮಹತ್ವದ ಖಾತೆಗಳ ವಿವರಗಳಿದ್ದ ಆಳತೆಯ ಪಟ್ಟಿಯೂ ಆಗಬಹುದು. ಯಾದಿ ಮಸಾಲಾ ಅನ್ನುವ ಶಬ್ದವನ್ನು ಈ ದಾಖಲೆಗಳಲ್ಲಿ ಬಳಸಿದ್ದಾರೆ. ಅಂದರೆ, ಆರೋಪವನ್ನು ಹೊತ್ತವರ ಕಡೆಯಿಂದ ಒತ್ತಾಯಪೂರ್ವಕವಾಗಿ ಹಣವನ್ನು ವಸೂಲು ಮಾಡಿದ ವಿವರಗಳ ಪಟ್ಟಿಯೂ ಇದಾಗಿರಬಹುದು. ಆದರೆ ಇಲ್ಲಿ ಕಂದಾಯವನ್ನು ವಸೂಲು ಮಾಡಿ ಕೊಡಲು ಕಳಿಸಿದ ಕೆಳ ದರ್ಜೆಯ ಅಧಿಕಾರಿಗಳಿಗಿತ್ತ ಪ್ರತಿಫಲದ (ಕೂಲಿ) ವಿವರಗಳ ಪಟ್ಟಿಯು ಇದಾಗಿದೆ.

ಇಲ್ಲಿ ಬರುವ ಇನ್ನೊಂದು ರೀತಿಯ ವಿವರಗಳ ಪಟ್ಟಿ ಎಂದರೆ ಜಾಬಾತ ಅಥವಾ ಜಾಬೀತ. ಅಂದರೆ, ಗ್ರಾಮಗಳ, ಜನರ, ಕಾಣಿಕೆ, ಅನುದಾನ ಅಥವಾ ಪ್ರತಿಫಲವಿದ್ದ ವಿವರಗಳ ಪಟ್ಟಿ, ಇಲ್ಲಿ ಸವಣೂರು ತಾಲೂಕಿನ ಬ್ರಾಹ್ಮಣರಿಗೆ ಕೊಡುತ್ತಿದ್ದ ವರ್ಷಾಶನ ಅಥವಾ ಪ್ರತಿಫಲದ ಪಟ್ಟಿ ಇದೆ.

## ದಾಖಲೆಗಳಲ್ಲಿ ಇರುವುದೇನು?

ಇಲ್ಲಿರುವ ಸವಣೂರು ತಾಲೂಕಿನ ದಾಖಲೆ ಪತ್ರಗಳು ಪೇಶ್ವೆಯವರು ಸರಕಾರವನ್ನು ನಡೆಸುತ್ತಿದ್ದ ಕಾಲಕ್ಕೆ ಸಂಬಂಧಿಸಿದವುಗಳು ಆಗಿವೆ. ಇಲ್ಲಿರುವ ದಾಖಲೆಗಳ ಕಾಲ ೧೭೮೧ ರಿಂದ ೧೮೧೪ವರೆಗೆ ಇವೆ.

## ಪರಿಶಿಷ್ಟ-೧

### ೧೭೯೧ನೇ ಇಸ್ವಿಯಲ್ಲಿ ಸವಣೂರು ತಾಲೂಕಿನ ಉತ್ಪನ್ನ ವೆಚ್ಚಗಳ ವಿವರಗಳು:

(ಪುಣೆ ಪತ್ರಾಗಾರದಲ್ಲಿಯ ಕರ್ನಾಟಕ ಪತ್ರಗಳ ಕಟ್ಟು ನಂ:೨೪೬)

ಶ್ರೀ

**ಪ್ರಸ್ತುತ ವರುಷದಲ್ಲಿ ಕೆಳಗಿನ ಮೂಲಗಳಿಂದ ಬಂದ ಆದಾಯ**

| ಉತ್ಪನ್ನ | ಹೊನ್ನುಗಳಲ್ಲಿ |
|---|---|
| ಅ) ಕಂದಾಯ | ೧,೫೭,೪೦೯-೫-೩ |
| ಬ) ಅಶ್ವ ಖಾದ್ಯ (ಘಾಸದಾಣ) | ೩೦,೫೭೦-೮-೨ |
| ಕ) ಜಕಾತಿ | ೫,೫೯೫-೧-೦ |
| ಡ) ಕಂದಾಯ ವಸೂಲು ಮಾಡುವಾಗ ಬಂದ ಅಹೇರುಗಳು | ೪೯೪-೦-೦ |
| ಇ) ಹಾನಗಲ್ ಪರಗಣಾದಲ್ಲಿ ವತನಾದಾರರ ಆಸ್ತಿಯನ್ನು ಮುಟ್ಟುಗೋಲು ಹಾಕಿದಾಗ ಬಂದ ಹಣ | ೧, ೩೫೩-೬-೦ |
| ಒಟ್ಟು ಹೊನ್ನು ಉತ್ಪನ್ನ | ೧,೯೫,೫೨೨-೫-೧ |
| ಸೈನಿಕರು ದಂಗೆಯೆದ್ದಾಗ ಬೆಳೆಗಳನ್ನು ಸುಟ್ಟಿದ್ದರಿಂದ ರೈತರಿಗೆ ಕಂದಾಯ ಬಿಟ್ಟಿದ್ದು - | ೨೧, ೧೫೩-೮-೦ |
| ಒಟ್ಟು ಹೊನ್ನುಗಳು | ೧,೭೪, ೩೬೮-೧೩-೧ |
| ಪ್ರತಿ ಹೊನ್ನಿಗೂ ರೂ.೩-೧೨-೦ದರದಲ್ಲಿ ರೂಪಾಯಿಗೆ ಪರಿವರ್ತಿತವಾದಾಗ ಬಂದ ಉತ್ಪನ್ನ ರೂ. | ೬,೫೩,೮೮೩-೧-೩ |
| ೩,೪೬೪-೦೮-೦ ಇಕ್ಕೇರಿ ಹೊನ್ನುಗಳನ್ನು ರೂಪಾಯಿಗೆ ಪರಿವರ್ತಿಸಿದಾಗ ಪ್ರತಿ ಹೊನ್ನಿಗೆ ನಾಲ್ಕಾಣೆಯಂತೆ ವಿನಿಮಯದರದಿಂದ ಬಂದದ್ದು | ೮೬೬-೦೨-೦ |
| (ಅ) | ೬,೫೪,೭೪೯-೦೩-೩ |

ಸುಬಾಗಳಿಂದ ಮಹಲುವಾರ ಬಂದ ನ್ಯಾಯಾಲಯ
ಶುಲ್ಕ ಕಂದಾಯ ವಸೂಲಿಗಾರರ ಶುಲ್ಕ
ಗೋಮಾಳ ಪಡಭೂಮಿಗಳ ಉತ್ಪನ್ನ
ಚಿಕ್ಕಪುಟ್ಟ ಮುಟ್ಟುಗೋಲುಗಳಿಂದ ಬಂದದ್ದು

ವಿನಿಮಯ ದರ, ಇತ್ಯಾದಿ (ಬ) ೧೮,೫೧೦-೧-೦

ಗ್ರಾಮಸ್ಥರು ನೀಡಿದ ಕಾಣಿಕೆ, ಕಾರಕೂನರ
ಸೇವೆಯನ್ನು ಒದಗಿಸಿದ ಬಾಬ್ತು, ಅಶ್ವಸವಾರರ
ಶುಲ್ಕ, ಇತರ ಬಾಬ್ತುಗಳಿಂದ ಬಂದದ್ದು ಇತ್ಯಾದಿ (ಕ) ೧೨,೨೨೭-೩-೦

ಕಾರಡಗಿ ಪರಗಣಾದ ಘುಟಗಾವ, ಕಲ್ಲೀಹಾಳದ
ಉತ್ಪನ್ನ (ಡ) ೬೧೬-೨-೦

ಇಝಾಪತ್ ಕಂದಾಯವನ್ನು ಹೆಚ್ಚಿಸಿದಾಗ ಹರಿ
ಗೋವಿಂದ ಪಾಠಕ ಸರದಾರನ ಆಡಳಿತೆಯ ಹರಪನಹಳ್ಳಿ
ತಾಲೂಕಿನಿಂದ, ಬಂಕಾಪುರ ಸರಕಾರದಿಂದ, ಅಪ್ಪಾಜಿ
ಗೋವಿಂದನ ಆಡಳಿತೆಯ ಸ್ವಾದಿ ತಾಲೂಕದಿಂದ, ಶ್ರೀಧರ
ರಾಮಚಂದ್ರನ ಆಡಳಿತೆಗೊಳಗಾದ ರಾಮದುರ್ಗ ತಾಲೂಕಿನಿಂದ
ಬಂದದ್ದು (ಇ) ರೂ. ೧೩,೮೫೫-೧-೦

ಸಾಲವಸ್ತಿತ್ತಿದ್ದರಿಂದ ಬಂದ ಹಣ (ಈ) ರೂ. ೩೪,೩೩೨-೧೨-೦

**ಸವಣೂರು ರಾಜ್ಯದ ಒಟ್ಟು ಉತ್ಪನ್ನ:**

(ಅ) ರೂ. ೬,೫೪,೭೪೯-೩-೩ ಮಹಲುಗಳಿಂದ

(ಬ) ರೂ. ೧೮,೫೧೦-೧-೦ ಸುಭಾಗಳಿಂದ

(ಕ) ರೂ. ೧೨, ೨೨೭-೩-೦

(ಡ) ರೂ. ೬೧೬-೨-೦ ಫುಟಗಾಂವ

(ಇ) ರೂ. ೧೩,೮೫೫-೧-೦ ಇಜಾಪತ್ (ಉಂಬಳಿಗ್ರಾಮ)

(ಈ) ರೂ. ೩೪, ೩೩೮-೧೨-೦ ಸಾಲಗಳಿಂದ

ಒಟ್ಟು ರೂ. ೭,೩೪,೨೯೦-೬-೩

**ಮಹಲುಗಳಿಗಾದ ವೆಚ್ಚ**

ಸಂಬಳ, ದೇವಾಲಯ-ವರ್ಷಾಶನ, ಅಶ್ವಸಾಕಾಣಿಕೆ
ಮದ್ದುಗುಂಡಗಳ ಖರೀದಿ (ಮಾಮಲೇದಾರರಿಗೆ,
ಕಾರಕೂನರಿಗೆ ಅಶ್ವಸವಾರರಿಗೆ, ಪದಾತಿಗಳಿಗೆ
ರಕ್ಷಾಗಾರರಿಗೆ ಹಾಗೂ ಇತರರಿಗೆ ಸುಭಾದಲ್ಲಿತ್ತ
ಸಂಬಳ)

ರೂ. ೨,೧೦,೬೩೮-೬-೩

ದಾನ-ಧರ್ಮ, ಆದರಾತಿಥ್ಯ, ಕಾಣಿಕೆ, ಕಚೇರಿ ವೆಚ್ಚ
ಸೀದಾವಿತರಣೆ, ದೀಪಾಲಂಕರ, ಖೈರಾತ (ಮಸೀದಿ
ಯಲ್ಲಿ ಕೊಡುವ ದಾನ, ಕೈದಿಗಳಿಗಾಗಿ ವ್ಯಯಿಸಿದ್ದು)
ಸಾಲದ ಮೇಲಿನ ಬಡ್ಡಿ, ಅಂಚೆ ವೆಚ್ಚ, ಕಟ್ಟಡಗಳಿಗಾಗಿ
ವ್ಯಯವಾದದ್ದು ಇತ್ಯಾದಿ ರೂ. ೩,೯೪೨-೮-೧

ಖಜಾನೆಯವರು ಹೊರಡಿಸಿದ ಹುಂಡಿಗಳ ವೆಚ್ಚ ರೂ. ೨,೮೬,೭೮೩-೫-೦

ಮುಜಾಫತ್ ಅರ್ಥಾತ್ ತಮ್ಮ ಅಥವಾ ಪರರಾಜ್ಯದ
ಅಧಿಕಾರಿಗಳಿಗಿತ್ತ ಕಾಣಿಕೆ, ಚಿತ್ರದುರ್ಗದ ಅಧಿಕಾರಿ
ಕೃಷ್ಣಾಜಿ ರಘುನಾಥ ಖರೆ ಮತ್ತು ರಾಯದುರ್ಗ
ಜಿಲ್ಲೆಯ ನಾಯಕಜಿ ಲುಗಡೆ ಅವರು ವ್ಯಯಿಸಿದ್ದು ರೂ. ೧೬,೩೯೦-೮-೦

ರಾಜ್ಯದಲ್ಲಿ ಒಟ್ಟು ವ್ಯಯವಾದದ್ದು ರೂ. ೫,೧೯,೭೫೪-೧೧-೩

## ಪರಿಶಿಷ್ಟ-೨

## ೧೭೬೧ರಲ್ಲಿ ಸವಣೂರು ತಾಲೂಕಿನಲ್ಲಿ ಬ್ರಾಹ್ಮಣರಿಗೆ ಕೊಡಮಾಡಿದ ವರ್ಷಾಶನಗಳ ವಿವರ

(ಪುಣೆ ಪತ್ರಗಾರದಲ್ಲಿಯ ಕರ್ನಾಟಕ ಕಾಗದಗಳ ೨೪೬ನೇ ಗಂಟಿನಲ್ಲಿದ್ದ ವಿವರಗಳು)

ಶ್ರೀ

ಈ ಗಂಟಿನಲ್ಲಿ ಪೇಶ್ವೆ ಸರಕಾರವು ಬ್ರಾಹ್ಮಣ ಪಂಡಿತರಿಗೆ ಕೊಡುತ್ತಿದ್ದ ವರ್ಷಾಶನಗಳ ಒಂದು ಸುದೀರ್ಘ ಪಟ್ಟಿಯಿದೆ. ಬ್ರಾಹ್ಮಣರು ಗಳಿಸಿದ್ದ ವಿದ್ವತ್ತು, ವೇದಾಧ್ಯಯನ ಹಾಗೂ ಅವರು ಸಾಂಸ್ಕೃತಿಕ ಕಾರ್ಯಗಳಲ್ಲಿ ಪಾಲ್ಗೊಳ್ಳುವುದನ್ನು ಗಣನೆಗೆ ತೆಗೆದುಕೊಂಡು ಈ ವರ್ಷಾಶನಗಳನ್ನು ನೀಡಲಾಗುತ್ತಿತ್ತು. ಸವಣೂರು ರಾಜ್ಯದ ಇಪ್ಪತ್ತೆಂಟು ಪರಗಣಾಗಳಲ್ಲಿ ಎಷ್ಟೆಷ್ಟು ಹಣವನ್ನು ವರ್ಷಾಶನದ ರೂಪದಲ್ಲಿ ವಿತರಿಸುತ್ತಿದ್ದರೆಂಬ ವಿವರಗಳು ಲಭ್ಯವಿದೆ.

ಈ ದಾಖಲೆಗಳನ್ನು ಪರಿಶೀಲಿಸಿದಾಗ, ಪೇಶ್ವೆ ಸರಕಾರವು ಜನರು ಸಾಮಾಜಿಕ, ಸಾಂಸ್ಕೃತಿಕ ಅಥವಾ ಧಾರ್ಮಿಕ ಕಾರ್ಯಗಳಲ್ಲಿ ಹೆಚ್ಚು ಹೆಚ್ಚು ಉತ್ಸಾಹದಿಂದ ಭಾಗವಹಿಸಲು ಉತ್ತೇಜನವನ್ನೀಯುತ್ತಿದ್ದರೆಂಬುದು ಸ್ಪಷ್ಟವಾಗುತ್ತದೆ. ಈ ಧನಸಹಾಯದಿಂದ ಜನರ ವಿದ್ಯೆ, ಸಂಸ್ಕೃತಿ, ನವನವೋನ್ಮೇಷಕ ವಿಚಾರಗಳಿಗೆ ಅನುಕೂಲವಾಗುತ್ತಿತ್ತು. ಇದರಿಂದ ಜನರಲ್ಲಿಯ ತಿಳುವಳಿಕೆ ಹೆಚ್ಚುತ್ತಿತ್ತು.

ವರ್ಷಾಶನವನ್ನು ಸ್ವೀಕರಿಸುತ್ತಿದ್ದ ವಿದ್ವಾಂಸರು, ರಾಜ್ಯದ ಬೇರೆ ಬೇರೆ ಪ್ರದೇಶಗಳಲ್ಲಿ ಕೆಲಕಾಲ ನಿಂತು, ಸಾಮಾನ್ಯರೊಡನೆ ವಿವಿಧ ವಿಷಯಗಳನ್ನು ಚರ್ಚಿಸಿ, ಅವರಲ್ಲಿ ಅರಿವನ್ನು ಮೂಡಿಸುತ್ತಿದ್ದರು. ಇದರಿಂದ ಜನತೆಗೆ ಅಪ್ರತ್ಯಕ್ಷವಾಗಿ ಶಿಕ್ಷಣವು ಲಭ್ಯವಾಗುತ್ತಿತ್ತು. ರಾಜ್ಯಭಾರದ ಅನುಕೂಲತೆಗಳನ್ನು ಗಮನಿಸಿ, ರಾಜ್ಯದಲ್ಲಿಯ ವಿವಿಧ ಪ್ರದೇಶಗಳನ್ನು ಭೌಗೋಳಿಕವಾಗಿ ವಿಭಜಿಸಿದ್ದರಿಂದ, ಈ ವರ್ಷಾಶನ ಹಂಚುವ ವಿಭಾಗಗಳನ್ನು ನೋಡಿದರೆ ಸವಣೂರು ರಾಜ್ಯವು ಅದೆಷ್ಟು ವಿಶಾಲವಿತ್ತೆಂಬುದರ ಕಲ್ಪನೆ ಬರುವದು.

ಪ್ರತಿಯೊಂದು ಪ್ರಶಾಸನ ವಿಭಾಗದಲ್ಲಿ ವಿತರಿಸುತ್ತಿದ್ದ ವರ್ಷಾಶನಗಳ ವಿವರಗಳು ಹೀಗಿವೆ:

| ಪ್ರಶಾಸನ | ವಿಭಾಗ ವರ್ಷಾಶನ (ರೂಪಾಯಿಗಳಲ್ಲಿ) |
|---|---|
| ೦೧. ಪರಗಣಾ ಗುತ್ತಲ | ೩೪೭-೧೩-೦ |

೦೨. ಪರಗಣಾ ಹಾನಗಲ್ಲ ೧೧೩೭-೦೩-೦

೦೩. ಪೇಠಾ ಕೋಡ ೨೯೨-೦೮-೦

೦೪. ಪರಗಣಾ ತಿಳವಳ್ಳಿ ೪೪೨-೦೮-೦

೦೫. ಪರಗಣಾ ಮಾಸೂರು ೪೧೦-೧೦-೦

೦೬. ಪರಗಣಾ ಐರಣಿ ೨೧೦-೦೯-೦

೦೭. ಪರಗಣಾ ನಿಡಸಂಗಿ ೫೮೮-೧೨-೦

೦೮. ಪರಗಣಾ ಕೆರೂರು ಖುರ್ದ(ಚಿಕ್ಕೇರೂರು) ೪೨೦-೦೦-೦

೦೯. ಪರಗಣಾ ರಾಣೇಬೆನ್ನೂರು ೧೩೨೨-೧೩-೦

೧೦. ಪರಗಣಾ ರಟ್ಟೇಹಳ್ಳಿ ೨೮೬-೦೧-೦

೧೧. ಪರಗಣಾ ಆಡೂರು ೧೨೨೬-೧೧-೨

೧೨. ಪರಗಣಾ ಶಿರಗಾಂವ ೪೩೧-೦೪-೦

೧೩. ಪರಗಣಾ ಕುಪ್ಪೇಲೂರು ೩೪೮-೧೨-೦

೧೪. ಪೇಠಾ ಹಾವೇರಿ ೨೩೬-೦೪-೦

೧೫. ಕಸಬಾ ಹಂಸಭಾವಿ ೯೪--೬-೦

೧೬. ಪರಗಣಾ ಕೇರೂರು ಬದ್ರೂಕ (ಹಿರೇಕೇರೂರು) ೪೮೭-೦೮-೦

೧೭. ಕಸಬಾ ಹಲಗೇರಿ ೯೨-೧೩-೦

೧೮. ಪರಗಣಾ ಕಾಗಿನೆಲ್ಲಿ ೧೬೬೧-೦೪-೦

(ಹೊನ್ನನ್ನು ರೂಪಾಯಿಯಲ್ಲಿ ಪರಿವರ್ತಿಸಲಾಗಿದೆ) ರೂ.೧೦,೦೨೭-೦೩-೦

ಒಬ್ಬ ವ್ಯಕ್ತಿಗೆ ಕನಿಷ್ಠ ವರ್ಷಾಶನವೆಂದರೆ ಒಂದು ಚವಲಿ (ರೂಪಾಯಿಯ ಅಷ್ಟಮಾಂಶ) ಗರಿಷ್ಠವೆಂದರೆ ರೂ.೧೫೦ ಇರುತ್ತಿತ್ತು. ವರ್ಷಾಶನಗಳ್ಳನು ಸ್ವೀಕರಿಸುತ್ತಿದ್ದ ಕೆಲ ಬ್ರಾಹ್ಮಣರು ಸವಣೂರು ರಾಜ್ಯದ ಹೊರಗೆ, ಬಳ್ಳಾರಿ ಹರಪನಹಳ್ಳಿಗಳಂತಹ ಊರುಗಳಲ್ಲಿದ್ದರು. ಸವಣೂರು ರಾಜ್ಯದಲ್ಲಿ ದೀಕ್ಷಿತರೆಂಬ ಹೆಸರಿನ ಅನೇಕ ಬ್ರಾಹ್ಮಣರು ಬಂಕಾಪುರ, ದೇವಗಿರಿ, ಲಕ್ಷ್ಮೇಶ್ವರ, ರಾಮತೀರ್ಥ, ಅಡೂರಗಳಂತಹ ಊರುಗಳಲ್ಲಿದ್ದರು. ಈ ಪಟ್ಟಿಯಲ್ಲಿ, ಮೃತ್ಯುಂಜಯ ದೀಕ್ಷಿತರ ಮಗ ರಾಮ ದೀಕ್ಷಿತ, ವಿಶ್ವನಾಥ ದೀಕ್ಷಿತ,

ನಾರಾಯಣ ದೀಕ್ಷಿತ, ರಾಮಪ್ಪ ದೀಕ್ಷಿತ, ನಾರಾಯಣ ದೀಕ್ಷಿತರ ಮಗ ರಾಮ ದೀಕ್ಷಿತ, ಶೇಷ ದೀಕ್ಷಿತರ ಮಗ ಶಿವ ದೀಕ್ಷಿತ, ದೇವಣ್ಣಾ ದೀಕ್ಷಿತ, ದಿವಾಕರ ದೀಕ್ಷಿತ ಮೊದಲಾದ ಹಲವಾರು ಹೆಸರುಗಳು ಉಲ್ಲೇಖಿಸಲ್ಪಟ್ಟಿವೆ.

ಪೇಶ್ವೆಯವರು ಸವಣೂರು ರಾಜ್ಯದಲ್ಲಿ ಈ ಪರಂಪರೆಯನ್ನು ಮುಂದುವರೆಸಿಕೊಂಡು ಬಂದರು. ಪರಂಪರಾಗತವಾಗಿ ಬಂದ ವ್ಯಾಸಪೂಜೆ ವರುಷದಲ್ಲಿ ಮೂರೂರು ಸಲ, ಕಾರ್ತಿಕ ಪೌರ್ಣಿಮೆ, ಮಾಘ ಪೌರ್ಣಿಮೆ, ವೈಶಾಖ ಪೌರ್ಣಿಮೆಗಳೆಂದು ನಡೆಯುತ್ತಿದ್ದವು. ಈ ಪೂಜೆಗಳಿಗೆ ಸರಕಾರವು ವಿವಿಧ ರೂಪದ ಧನಸಹಾಯವನ್ನು ಮಾಡುತ್ತಿತ್ತು. ವ್ಯಾಸಪೂಜೆಗೆ ಕೊಡುತ್ತಿದ್ದ ಹೆಚ್ಚಿನ ಮೊತ್ತವೆಂದರೆ ಶಿಗ್ಗಾವಿ ಹಾಗೂ ಹಾನಗಲ್ಲ ಪರಗಣಾಗಳಲ್ಲಿಯ ರೂ.೩೩-೧೨-೦, ಅತಿ ಕಡಿಮೆ ಮೊತ್ತವೆಂದರೆ, ಐರಣಿ ಮತ್ತು ಆಡೂರುಗಳಲ್ಲಿ ಕೊಡಲ್ಪಡುತ್ತಿದ್ದ ರೂ.೨೨-೮-೦. ರಾಜ್ಯದ ಎಲ್ಲ ಧಾರ್ಮಿಕ ಮುಖಂಡರಿಗೆ ವರ್ಷಾಶನವು ಸಲ್ಲುತ್ತಿತ್ತು. ರಟ್ಟೀಹಳ್ಳಿ ಪರಗಣಾದಲ್ಲಿ ಅಧಿಕ ಮೊತ್ತವಾದ ರೂ.೨೨-೧೨-೦ಗಳನ್ನು ಒಬ್ಬ ವ್ಯಕ್ತಿಗೆ ಕೊಡಲ್ಪಟ್ಟರೆ, ಇಷ್ಟೇ ಮೊತ್ತವನ್ನು ಶೃಂಗೇರಿ ಆಚಾರ್ಯರಾಗಿದ್ದ ಶಂಕರಭಾರತಿ ಸ್ವಾಮಿಗಳಿಗೆ ಸಲ್ಲಿಸಲಾಗುತ್ತಿತ್ತು. ಸವಣೂರಿನಲ್ಲಿದ್ದ ಸತ್ಯಬೋಧ ಮಠದ ಪೀಠಾಧಿಪತಿಗಳಾಗಿದ್ದ ಶ್ರೀ ಶ್ರೀ ಸತ್ಯಬೋಧ ಸ್ವಾಮಿಗಳಿಗೆ ಸವಣೂರು ಪರಗಣಾದಿಂದ ರೂ.೭-೮-೦, ಐರಣಿ ನಿಡಸಂಗಿ ಮತ್ತು ತಿಳವಳ್ಳಿ ಪರಗಣಾಗಳಿಂದ ರೂ.೨೨-೮-೦ ವರ್ಷಾಶನವು ಸಲ್ಲುತ್ತಿತ್ತು. ತಿಳವಳ್ಳಿ ಪರಗಣಾದಿಂದ ಸಂದಾಯವಾಗುತ್ತಿದ್ದ ವರ್ಷಾಶನದಲ್ಲಿ ಸತ್ಯಬೋಧ ಸ್ವಾಮಿಗಳ ಮಠದವರು ದೀಪಾರಾಧನೆಯನ್ನು ಮಾಡಬೇಕೆಂಬ ಕರಾರಿತ್ತು. ಸತ್ಯಬೋಧಸ್ವಾಮಿ ಮಠಕ್ಕೆ ಮಾಸೂರು ಪರಗಣಾದಿಂದ ರೂ.೫-೧೦-೦ ವರ್ಷಾಶನವಿತ್ತು. ಕೂಡಲಗಿಯಲ್ಲಿ ವಾಸಿಸುತ್ತಿದ್ದ ಪ್ರಮುಖ ಆಚಾರ್ಯರಿಗೆ ಕಾಗಿನೆಲ್ಲಿ ಪರಗಣಾದಿಂದ ರೂ.೧೧-೪-೦, ಹೀರೇಕೆರೂರು ಪರಗಣಾದಿಂದ ರೂ.೯-೬-೦ ಮತ್ತು ಐರಣಿ ಹಾಗೂ ಕುಪ್ಪೆಲೂರು ಪರಗಣಗಳಿಂದ ತಲಾ ರೂ.೭-೮-೦ ದೊರೆಯುತ್ತಿತ್ತು. ನಿಡಸಂಗಿ ಪರಗಣಾದಿಂದ ರಾಘವೇಂದ್ರ ಸ್ವಾಮಿಗಳ ಮಠಕ್ಕೆ ರೂ.೭-೮-೦ ದೊರೆಯುತ್ತಿತ್ತು. ತಿಳವಳ್ಳಿ ಪರಗಣಾದಿಂದ ದೀಪಾರಾಧನೆಗಾಗಿ ರಂಗಪುರ ಮಠದ ಬಿಂದಚಾರ್ಯ ಸ್ವಾಮಿಗಳಿಗೆ ರೂ.೩-೧೨-೦, ಕಾಗಿನೆಲ್ಲಿ ಪರಗಣಾದವರು ಉಡುಪಿಯ ಸುಬ್ರಹ್ಮಣ್ಯ ಸ್ವಾಮಿಗಳಿಗೆ ರೂ.೫೨-೮-೦ ವರ್ಷಾಶನವನ್ನಿತ್ತು ಅವರಿಗೆ ಗೌರವ ಸಮಾರಂಭವನ್ನು ಕೂಡ ಏರ್ಪಡಿಸುತ್ತಿದ್ದರು.

ಧಾರ್ಮಿಕ ಪ್ರಮುಖರಿಗೂ ಹಾಗೂ ಧರ್ಮಸಂಸ್ಥೆಗಳಿಗೂ, ಧಾರ್ಮಿಕ ಮತ್ತು ಶೈಕ್ಷಣಿಕ ಕಾರ್ಯಗಳಿಗೆ ವರ್ಷಾಶನವು ಮಂಜೂರಾಗಿತ್ತು. ಈ ವರ್ಷಾಶನವನ್ನು ಸ್ವೀಕರಿಸುತ್ತಿದ್ದವರು ಉತ್ಕರ್ಷ ಹೊಂದಿದ್ದು ಕಂಡುಬರುತ್ತದೆ. ಇವರಿಗೆ ಅನೇಕ ಪರಗಣಾಗಳಿಂದ ಧನಸಹಾಯವು ದೊರೆಯುತ್ತಿತ್ತು. ಇದರಿಂದ ಈ ವಿದ್ವಾಂಸರು ಮಾಡಿದ ಕಾರ್ಯ ಕೌಶಲ್ಯ ಹಾಗೂ ಅವರ ವಿಶಾಲವಾದ ಕಾರ್ಯಕ್ಷೇತ್ರಗಳ ಕಲ್ಪನೆ ಸಹಜವಾಗಿ ತಿಳಿದುಬರುತ್ತದೆ.

ಈ ಹಣವು ವಿದ್ವಾಂಸರ ವಿದ್ಯಾಭ್ಯಾಸ ಹಾಗೂ ಅವರು ಯಜ್ಞಯಾಗಗಳನ್ನು ಸಾಂಗಗೊಳಿಸಲು ಪೌರೋಹಿತ್ಯವನ್ನು ವಹಿಸಿದ್ದಕ್ಕಾಗಿ ಕೊಡಲ್ಪಡುತ್ತಿತ್ತು. ಶಂಕರಭಟ್ಟ ಅನ್ನುವವರಿಗೆ ೧೬ ಪರಗಣಾಗಳ ಪೈಕಿ ಎಂಟು ಪರಗಣಾಗಳಿಂದ ಒಟ್ಟು ರೂ.೬೭-೮೦ ವರ್ಷಾಶನವು ಬರುತ್ತಿತ್ತು. ಇದೇ ದೊಡ್ಡ ಮೊತ್ತವೆನಿಸಿತ್ತು. ಮಿಶ್ರೀಕೋಟೆಯಲ್ಲಿದ್ದ ಇನ್ನೊಬ್ಬ ಪ್ರಮುಖರೆಂದರೆ ಅಣ್ಣೈಯಾಚಾರ. ಹರಿಹರದಲ್ಲಿ ಉಮಾಪತಿ ಶಾಸ್ತ್ರಿ ಅನ್ನುವವರು ದೊಡ್ಡ ವಿದ್ವಾಂಸರಿದ್ದರು.ಪ್ರಾಯಶಃ ಆರಾಧ್ಯಶೈವರಿದ್ದ ಇವರಿಗೆ ಐರಣಿ, ಮಾಸೂರು,ಕೋಡಗಳಿಂದ ವರ್ಷಾಶನವು ದೊರೆಯುತ್ತಿತ್ತು. ಉಪಾಧ್ಯಾಯರಿಗೂ ಹಾಗೂ ವೈದಿಕರಿಗೂ ಪಾರಂಪರಿಕ ಪದ್ಧತಿಯಲ್ಲಿ ಶಿಕ್ಷಣವನ್ನೀಯಲಾಗುತ್ತಿತ್ತು. ಯಾರು ಶಿಕ್ಷಣ ಪ್ರಸಾರವನ್ನು ಮಾಡುತ್ತಿದ್ದರೋ ಅಂತಹ ಪಂಡಿತರಿಗೆ ಭೂಮಿ ಅಥವಾ ನಗದು ಹಣವನ್ನು ಕೊಡಲಾಗುತ್ತಿತ್ತು.

ಸವಣೂರು ರಾಜ್ಯದಲ್ಲಿ, ಪಾಂಡುರಂಗಿ ಮನೆತನದ ಹೆಸರಾಂತ ವಿದ್ವಾಂಸರಾಗಿದ್ದ ಬಾಳಾಚಾರ್ಯ ಮತ್ತು ರಾಮಾಚಾರ್ಯ ಅನ್ನುವವರಿಗೆ ಮಾಸೂರು ಪರಗಣಾದಲ್ಲಿ ಹೆಚ್ಚಿನ ಗೌರವು ದೊರೆಯುತ್ತಿತ್ತು. ಇವರಿಗೆ ಪೇಠಾ, ಹಾವೇರಿ, ಹಿರೇಕೆರೂರು, ಪರಗಣಾಗಳಾದ ಕಾಗಿನೆಲ್ಲಿ, ಕುಪ್ಪೇಲೂರು, ಶಿಗ್ಗಾವಿ, ರಟ್ಟೇಹಳ್ಳಿ, ಹಾಗೂ ಮಾಸೂರುಗಳಿಂದ ವರ್ಷಾಶನವು ದೊರೆಯುತ್ತಿತ್ತು. ಅಲ್ಲದೆ, ಇವರಿಗೆ ಅಲ್ಲಿ ಸತ್ಕಾರವೂ ನಡೆಯುತ್ತಿತ್ತು. ಹಾವೇರಿ ಪರಗಣಾದಿಂದ ಪಾಂಡುರಂಗಿ ವಿದ್ವಾಂಸರಿಗೆ ರೂ.೭-೮-೦ ವರ್ಷಾಶನ ಬಂದರೆ,ಮಾಸೂರು ಪರಗಣಾದಿಂದ ರೂ.೫೩-೪-೦ ಬರುತ್ತಿತ್ತು. ಪಾಂಡುರಂಗಿ ಮನೆತನದ ಮೂವರು ಆಚಾರ್ಯರಾದ ತಿಮ್ಮಣಾಚಾರ, ಶ್ರೀನಿವಾಸಾಚಾರ ಮತ್ತು ಅಣ್ಣಾಚಾರರು ಪಂಡಿತರಿದ್ದರೂ, ಅಷ್ಟು ಪ್ರಸಿದ್ಧಿ ಪಡೆದಿರಲಿಲ್ಲ. ಹಿರೇಕೆರೂರು ಗ್ರಾಮವು ವೆಂಕಟಶಾಸ್ತ್ರೀ ಅನ್ನುವ ಮಹಾ ವಿದ್ವಾಂಸರಿಗೆ ಜನ್ಮವನ್ನಿತ್ತಿತ್ತು. ಇವರಿಗೆ ಹಾನಗಲ್ಲ, ಬೆಳವಳ್ಳಿ, ಐರಣಿ, ಕೆರೂರು-ಖಿರ್ದು, ಕೆರೂರು-ಬದ್ರೂಕಗಳಿಂದ ವರ್ಷಾಶನದ ಹಳ್ಳವೇ ಹರಿದು ಬಂದಂತಾಗುತ್ತಿತ್ತು. ದೇವಗಿರಿ (ದೇವರ ಗುಡ್ಡ)ಯಲ್ಲಿದ್ದ ಇನ್ನೊಬ್ಬ ಖ್ಯಾತನಾಮರಾದ ಪಂಡಿತರೆಂದರೆ ವಿದ್ವಾನ್ ನಾರಾಯಣ ದೀಕ್ಷಿತರು. ಈ ದೀಕ್ಷಿತರು ವೈದಿಕದಲ್ಲಿ ಅತ್ಯಂತ ಪರಿಣಿತರಿದ್ದು, ಲಗ್ನಗಳಂತಹ ಧಾರ್ಮಿಕ ಕಾರ್ಯಗಳನ್ನು ವಿಧಿಪೂರ್ವಕವಾಗಿ ಮಾಡಿಸುವಲ್ಲಿ ಪರಿಣಿತರಿದ್ದರು.

ಸವಣೂರಲ್ಲಿ ಅಣ್ಣಾಚಾರ್ಯ ನವರತ್ನ ಅನ್ನುವ ಶ್ರೇಷ್ಠ ವಿದ್ವಾಂಸರಿದ್ದರು. ಇವರ ಮನೆತನದ ಪಾಂಡಿತ್ಯಕ್ಕೆ ಓಂದೆ ಒಂಭತ್ತು ರತ್ನಗಳನ್ನಿತ್ತು ಸನ್ಮಾನಿಸಿದ್ದರಿಂದ ಇವರನ್ನು 'ನವರತ್ನ' ಅನ್ನುವ ಅಡ್ಡ ಹೆಸರಿನಿಂದ ಗುರುತಿಸುತ್ತಿದ್ದರು. ಇವರಿಗೆ ಹಾವೇರಿ ಪೇಠಾ, ಕುಪ್ಪೇಲೂರ ಪರಗಣಾಗಳಿಂದ ವರ್ಷಾಶನವೂ ಸಲ್ಲುತ್ತಿತ್ತು. ಸವಣೂರು ರಾಜ್ಯದಲ್ಲಿ ಅನೇಕರು ಅಗ್ನಿಹೋತ್ರಿಗಳನ್ನಿಟ್ಟುಕೊಂಡಿದ್ದರು. ಇವರಲ್ಲಿ ಸವಣೂರಿನ ಬಾಳಬಂಭಟ್ಟರು, ಬಂಕಾಪುರದ ಶಿವದೀಕ್ಷಿತರು, ಹಾನಗಲ್ಲಿನ ತಿಮ್ಮಣ್ಣ ದೀಕ್ಷಿತರು ಪ್ರಸಿದ್ಧರಿದ್ದರು.

## ಪರಿಶಿಷ್ಟ-೩

### ಸವಣೂರು ತಾಲ್ಲೂಕಿನ ೧೭೯೨ರ ತಾತ್ಪೂರ್ತಿಕ ಅಥಾವೆ

(ಪುಣೆ ಪತ್ರಗಾರ, ಕರ್ನಾಟಕ ಪತ್ರದ ಕಟ್ಟು ೨೪೩)

ಅತಿ ಶೀಘ್ರವಾಗಿ ಉತ್ತರಿಸಲು ಬರುವಂತೆ ತಾತ್ಪೂರ್ತಿಕವಾಗಿ ಸಿದ್ಧಪಡಿಸಿದ ಸವಣೂರು ತಾಲೂಕಿನ ಅಥಾವೆ ಪತ್ರಿಕೆ. ಆಗ ಸವಣೂರು ಪೇಶ್ವೆಯವರ ಅಧೀನದಲ್ಲಿದ್ದು ಅವರ ಪ್ರತಿನಿಧಿ ಭಾಸ್ಕರ ಸಖದೇವನು ಆಡಳಿತೆಯನ್ನು ನೋಡಿಕೊಳ್ಳುತ್ತಿದ್ದನು.

ಹಿಂದಿನ ವರುಷದ ಕಂದಾಯವನ್ನು ಈ ವರುಷ
ವಸೂಲು ಮಾಡಲಾಯಿತು ಈ ಹಣವು ಪರಗಣಾ
ಹಾನಗಲ್ಲ ರಾಣೇಬೆನ್ನೂರು,ಗುತ್ತಲ, ಆಡೂರು,
ಕೆರೂರು-ಬದ್ರೂಕ, ಕೆರೂರು-ಖುರ್ದ,
ಮಾಸೂರು,ಕೋಡ, ತಿಳವಳ್ಳಿ, ಕಾರಡಗಿ,
ಕಸಬಾಗಳಾದ ಹಂಸಭಾವಿ ಮತ್ತು ಹಲಗೇರಿ,
ಪೇಠಾ ಹಾವೇರಿ, ಕೋಟೆ ಹಾವನೂರಿನಿಂದ
ಬಂದಿತು. . . . . . . . . ರೂ.೧,೪೧,೬೭೧-೧-೩

ಪ್ರಸ್ತುತ ವರುಷದ ಕಂದಾಯವು ಪರಗಣಾಗಳಾದ
ಹಾನಗಲ್ಲ, ರಾಣೇಬೆನ್ನೂರು,ಗುತ್ತಲ, ಕುಪ್ಪೇಲೂರು,
ಆಡೂರು, ಶಿಗ್ಗಾವಿ, ನಿಡಸಂಗಿ, ಐರಣಿ, ರಟ್ಟೀಹಳ್ಳಿ,
ಕೆರೂರು - ಬದ್ರೂಕ, ಕೆರೂರು-ಖುರ್ದ, ಮಾವುರ,
ಕೋಡ, ತಿಳವಳ್ಳಿ, ಕಾಗಿನೆಲ್ಲಿ, ಕಾರಡಗಿ, ಕಸಬಾಗಳಾದ
ಹಲಗೇರಿ, ಮೊರಬ, ಪೇಠಾಹಾವೇರಿ, ಫುಟಗಾವ,
ಉಗರಗೊರಳ ಮುಂತಾದವುಗಳು ಮತ್ತು ಕೋಟೆ
ಅಣ್ಣಿಗೇರಿ

| | |
|---|---|
| | ರೂ.೧೦,೩೭,೭೧೮-೧-೧ |
| ಸಾಲಗಳಿಂದ ಬಂದ ಹಣ | ರೂ. ೭೬,೧೪೮-೫-೨ |
| ಒಟ್ಟು ಅಯ | ರೂ.೧೨,೫೫,೫೩೭-೮-೨ |
| ಆ ವರುಷ ವ್ಯಯವಾದ ಹಣ | |
| ಸರಕಾರಕ್ಕಿತ್ತ ಹಣ | ರೂ.೫,೫೩,೫೨೨-೯-೦ |
| ವಿವಿಧ ಆಡಳಿತ ವಿಭಾಗಕ್ಕೆ ವೆಚ್ಚವಾದದ್ದು | ರೂ.೩,೩೪,೭೬೭-೭-೦ |

| | |
|---|---|
| ಸವಾರಿಗಾದ ವೆಚ್ಚ | ರೂ.೨೭,೭೧೦-೬-೦ |
| ಪಾಲುದಾರರಿಗೆ ಕೊಟ್ಟದ್ದು | ರೂ.೧೨,೨೫೦-೧೨-೦ |
| ಹಾವನೂರಿನ ಲಿಂಗನಗೌಡ ದೇಸಾಯಿಯಂತಹ ಜಮೀನುದಾರರ ಸಂರಕ್ಷಣೆಗಾದ ವೆಚ್ಚ | ರೂ.೧೧,೧೭೩-೧೨-೦ |
| ಜಹಗೀರದಾರರಿಗೆ ಕೊಟ್ಟದ್ದು | ರೂ.೧೩೨-೩-೦ |
| ಸಾಲಗಳನ್ನು ಮರಳಿ ಕೊಡಲು ನೀಡಿದ ಹಣ | ರೂ.೫೩,೦೩೯-೧೫-೩ |
| ಒಟ್ಟು ವೆಚ್ಚ | ರೂ.೯,೯೨,೫೯೭-೦-೩ |
| ಸರಕಾರದಲ್ಲಿ ಉಳಿದ ಹಣ | ರೂ.೨,೬೨,೯೪೧-೭=೩ |
| | ರೂ.೧೨,೫೫,೫೩೭-೮-೨ |

### ಪರಿಶಿಷ್ಟ-೩(ಅ)

### ೧೮೫೨ರಲ್ಲಿ ಸವಣೂರು ತಾಲೂಕಿನ ಅಯ-ವ್ಯಯಗಳ ಸಂಕ್ಷರಿಪಿದ (ಕರಡು) ಪತ್ರಿಕೆ

ತಕ್ಷಣವೇ ಉತ್ತರಿಸಲು ಬರುವಂತೆ ಸವಣೂರು ತಾಲೂಕಿನ ಅಯ-ವ್ಯಯಗಳ ಅಜಮಾಸು ಪತ್ರಿಕೆಯನ್ನು ೧೮೫೨ರಲ್ಲಿ ಸಿದ್ಧಪಡಿಸಲಾಗಿತ್ತು. ಸವಣೂರು ತಾಲೂಕು ಆಗ ಪೇಶ್ವೆಯವರ ಆಡಳಿತಕ್ಕೆ ಸೇರಿದ್ದು, ಅಬ್ದುಲ್ ಕರೀಮಖಾನ ನವಾಬನು ಗಾದೆಯ ಮೇಲೆ ವಿರಾಜಮಾನನಾಗಿದ್ದನು. ಪೇಶ್ವೆಯವರ ಪ್ರತಿನಿಧಿಯೆಂದು ಭಾಸ್ಕರ ಸಖದೇವ ಅನ್ನುವ ಮರಾಠಾ ಸರದಾರನು ಪ್ರಶಾಸಕನಾಗಿ ಸವಣೂರಲ್ಲಿ ನಿಂತು ಕಾರ್ಯಭಾರವನ್ನು ಮಾಡುತ್ತಿದ್ದನು.

#### ಅಯ

| | |
|---|---|
| ರೂ.೧,೪೧,೬೭೧-೧-೩ ಪೈ | ಹಾನಗಲ್ಲ,ರಾಣೇಬೆನ್ನೂರು, ಗುತ್ತಲ, ಆಡೂರು, ಕೆರೂರು-ಬದ್ರೂಕ, ಮಾಸೂರು, ಕೋಡ,ತಿಳವಳ್ಳಿ, ಕಾಗಿನೆಲ್ಲಿ, ಪೇಠಾಗಳು, ಕಸಬಾ,ಹಂಸಬಾವಿ, ಹಲಗೇರಿ ಪೇಠಾ ಹಾವೇರಿ ಹಾಗೂ ಹಾವನೂರು ದೇಶಗತಗಳಿಂದ ಹಿಂದಿನ ವರುಷ ಬಂದ ಉತ್ಪನ್ನ. |
| ರೂ.೧೦,೩೭,೭೧೮-೧-೧ ಪೈ | ಹಾನಗಲ್ಲ,ರಾಣೇಬೆನ್ನೂರು, ಗುತ್ತಲ, ಕುಪ್ಪೇಲೂರು, ಆಡೂರು,ಶಿಗ್ಗಾವಿ,ನಿಡಸಂಗಿ, ಐರಣಿ, ಕೆರೂರು-ಬದ್ರೂಕ, ಕೆರೂರು-ಖುರ್ದ, ರಟ್ಟೀಹಳ್ಳಿ, ಮಾಸೂರು, ಕೋಡ, ತಿಳವಳ್ಳಿ, ಕಾಗಿನೆಲ್ಲಿ, ಕಾರಡಗಿ, ಪೇಠಾಗಳಿಂದ ಕಸಬಾ ಹಂಸಭಾವಿ, ಹಲಗೇರಿ, ಮೊರಬ ಪೇಠಾ |

ಹಾವೇರಿ, ದೇಶಗತ ಹಾವನೂರು, ಫುಟಗಾಂವ್, ಉಗರಗೋಳ,ಮೊದಲಾದವುಗಳಿಂದ ಹಾಗೂ ಕುರ್ಯಾತ ಅಣ್ಣೀಗೇರಿಯಿಂದ ಈ ವರುಷ ಬಂದ ಉತ್ಪನ್ನ.

ರೂ.೩೭,೧೪೮-೫-೨ ಪೈ — ಸಾಲರೂಪದಿಂದ ಬಂದ ಉತ್ಪನ್ನ

ರೂ.೧೨,೫೫,೫೩೭-೮-೦ ಪೈ — ಒಟ್ಟು ಬಂದ ೧೭೯೨ನೇ ವರುಷದ ಉತ್ಪನ್ನ

## ಪರಿಶಿಷ್ಟ-೪

## ಸವಣೂರು ತಾಲೂಕಿನ ೧೭೯೨ರ ಆಯ-ವ್ಯಯಗಳ ಸಂಸ್ಕರಿಸಿದ ಪತ್ರಿಕೆ

ಶ್ರೀ

ಕ್ಷಿಪ್ರದಲ್ಲಿ ಉತ್ತರಿಸಲು ಬರುವಂತೆ ಸವಣೂರು ತಾಲೂಕಿನ ಸಂಸ್ಕರಿಸಿದ ಒಟ್ಟು ಪತ್ರಿಕೆಯನ್ನು ಸಿದ್ಧಪಡಿಸಲಾಗಿತ್ತು. ಆಗ ಸವಣೂರು ತಾಲೂಕು ಪೇಶ್ವೆಯವರ ಆಡಳಿತಕ್ಕೆ ಸೇರಿದ್ದು, ಭಾಸ್ಕರ ಸಖದೇವ ಅನ್ನುವ ಮರಾಠಾ ಸರದಾರನು ಪ್ರಶಾಸಕನಿದ್ದನು.

ರೂ.೧,೪೧,೬೭೧-೧-೩ ಪೈ — ಈ ಹಣವು ಪರಗಣಾಗಳಾದ ಹಾನಗಲ್ಲು, ರಾಣೇಬೆನ್ನೂರು, ಗುತ್ತಲ, ಆಡೂರು,ಕೆರೂರು-ಬದ್ರೂಕ, ಮಾಸೂರು, ಕೋಡ, ತಿಳವಳ್ಳಿ ಮತ್ತು ಕಾಗಿನೆಲ್ಲಿ, ಕಸಬಾ, ಹಂಸಭಾವಿ, ಹಲಗೇರಿ,ಪೇಠಾ ಹಾವೇರಿ ಹಾಗೂ ಹಾವನೂರ ದೇಶಗತಿಗಳಿಂದ ವರುಷದ ಉತ್ಪನ್ನವು ಬಂದಿತ್ತು.

ರೂ. ೧೦,೩೭,೭೧೮-೧-೧ — ಈ ವರುಷದ ಉತ್ಪನ್ನವೆಂದು ಪರಗಣಾ ಹಾನಗಲ್ಲ, ರಾಣೇಬೆನ್ನೂರು, ಗುತ್ತಲ ಕುಪ್ಪೇಲೂರು, ಆಡೂರು,ಶಿಗ್ಗಾವಿ, ನಿಡಸಂಗಿ, ಐರಣಿ, ಕೆರೂರು-ಬದ್ರೂಕು, ಕೆರೂರು-ಖುರ್ದ, ರಟ್ಟೇಹಳ್ಳಿ, ಮಾಸೂರು, ಕೋಡ. ತಿಳವಳ್ಳಿ, ಕಾಗಿನೆಲ್ಲಿ, ಕಾರಡಗಿ, ಕಸಬಾ, ಹಂಸಭಾವಿ, ಹಲಗೇರಿ, ಮೊರಬ, ಪೇಠಾ ಹಾವೇರಿ, ದೇಶಗತ, ಹಾವನೂರು, ಫುಟಗಾಂವ, ಉಗರಗೋಳ, ಮೊದಲಾದವುಗಳಿಂದ ಹಾಗೂ ಕುರ್ಯಾತ ಅಣ್ಣೀಗೇರಿಯಿಂದ ಬಂದಿತ್ತು.

| | |
|---|---|
| ರೂ.೭೬,೧೪೮-೫-೨ | ಸಾಲವೆಂದು ಬಂದ ಹಣ |
| ರೂ.೧೨,೫೫,೫೩೭-೮-೨ | ಒಟ್ಟು ಉತ್ಪನ್ನ |

**ಈ ಹಣದಲ್ಲಿ ವೆಚ್ಚ ಮಾಡಿದ ವಿವರಗಳು**

| | |
|---|---|
| ರೂ.೫,೫೩,೫೨೨-೯-೦ | ಸರಕಾರಕ್ಕೆ ಜಮಾ |
| ರೂ.೩,೩೪,೭೬೭-೭-೦ | ಪ್ರಶಾಸಕೀಯ ವೆಚ್ಚ (ವಿವರಗಳಿಗೆ) |
| ರೂ.೨೭,೭೧೦-೬-೦ | ಅಶ್ವದಳದ ವೆಚ್ಚ |
| ರೂ.೧೨,೨೫೦-೧೨-೦ | ಇನಾಮದಾರರಿಗೆ ಕೊಟ್ಟ ಪಾಲು |
| ರೂ.೧೧,೧೭೩-೧೨-೦ | ಲಿಂಗನಗೌಡ ದೇಸಾಯಿ, ಹಾವನೂರು ಅಂತಹವರಿಗೆ ಕೊಟ್ಟ ಪೋಟಗಿ. |
| ರೂ.೧೩೨-೩-೦ | ಜಹಗೀರದಾರರಿಗೆ ಕೊಟ್ಟದ್ದು |
| ರೂ.೫೩,೦೩೯-೧೫-೩ | ಸಾಲ ಮರಳಿ ಕೊಡಲು ವೆಚ್ಚವಾದದ್ದು |
| ರೂ.೯,೯೨,೫೯೭-೦-೩ | |
| ರೂ.೨,೬೨,೯೪೦-೭-೩ | ಶಿಲಕು |
| ರೂ:೧೨,೫೫,೫೩೭-೮-೦ | |

**ಸವಣೂರು ತಾಲ್ಲೂಕಿನ ದೇಹಝಾಡ (ಗ್ರಾಮಗಳ ವಿವರ) -೧೭೮೩**

**(ಪುಣೆ ಪತ್ರಾಗಾರದ ಕರ್ನಾಟಕ ದಾಖಲೆಗಳ ಗಂಟು-೨೪೬)**

ಈ ಕಾಗದ ಪತ್ರದಲ್ಲಿ ತಾಲೂಕಿನಲ್ಲಿರುವ ಇನಾಮದಾರರು ಅನುಭೋಗಿಸುತ್ತಿದ್ದ ಪರಗಣಾವಾರ,ತಾಲೂಕುವಾರ, ಗ್ರಾಮಗಳ ವಿವರಗಳಿವೆ. ಈ ಗ್ರಾಮಗಳ ದುಮಾಳ ಭೂಮಿ(ಸರಕಾರವು ಬೇಡಿದಾಗ ಮರಳಿಸಬೇಕಾದ ಭೂಮಿಗಳು) ಮತ್ತು ಖಾಲಸಾ ಭೂಮಿ (ಸರಕಾರದ ಒಡೆತನದಲ್ಲಿರುವ ಭೂಮಿಗಳು)ಗಳ ವಿವರ ಮತ್ತು ಅವುಗಳಿಂದ ಸರಕಾರಕ್ಕೆ ಬರುತ್ತಿದ್ದ ಕಂದಾಯದ ವಿವರಗಳು ಇವೆ:

೧೭೮೩ರಲ್ಲಿ ಸವಣೂರು ತಾಲ್ಲೂಕಿನಲ್ಲಿದ್ದ ೧೪ ಪರಗಣಾಗಳು, ೨ ಕಸಬಾ ಮತ್ತು ೧ ಪೇಠಾಗಳ ವಿವರ ಹೀಗಿವೆ:

| ಪರಗಣಾ | ಹಳ್ಳಿಗಳು | ದುಮಾಳ +ಖಾಲಸಾ |
|---|---|---|
| ೦೧. ಆಡೂರು | ೭೧ | ೯+೬೨ |
| ೦೨. ಹಾನಗಲ್ಲ | ೬೮ | ೨೪+ ೧೪ |
| ೦೩. ಶಿಗ್ಗಾಂವ | ೨೧ | ೩+ ೧೮ |
| ೦೪. ರಾಣೇಬೆನ್ನೂರು | ೬೬ | ೧೬+೫೦ |
| ೦೫. ನಿಡಸಂಗಿ | ೬೪ | ೧೩+೫೧ |
| ೦೬. ತಿಳವಳ್ಳಿ | ೩೭ | ೧೧+೨೬ |
| ೦೭. ರಟ್ಟೀಹಳ್ಳಿ | ೪೪ | ೨೦+೨೪ |
| ೦೮. ಕೆರೂರ ಖುರ್ದ | ೧೬ | ೩+೧೩ |
| ೦೯. ಕುಪ್ಪೇಲೂರು | ೪೩ | ೨+೪೧ |
| ೧೦. ಗುತ್ತಲ | ೪೮ | ೮+೪೦ |
| ೧೧. ಕೋಡ | ೪೦ | ೫+೩೫ |
| ೧೨. ಐರಣಿ | ೧೮ | ೧+೧೭ |
| ೧೩. ಕಾಗಿನೆಲ್ಲಿ | ೮೬ | ೭+೭೯ |
| ೧೪. ಮಾಸೂರು | ೧೬ | ೦+೧೬ |

**ಕಸಬಾ**

೦೧. ಹಂಸಭಾವಿ

೦೨. ಹಲಗೇರಿ

**ಪೇಠಾ**

೦೧. ಹಾವೇರಿ

ಅಡೂರು ಪರಗಣಾದ ೭೧ ಹಳ್ಳಿಗಳಲ್ಲಿ, ೬ ಇನಾಮದಾರರಿಗೆ ಸೇರಿದ್ದರೆ, ೩ ದುಮಾಳ ಮತ್ತು ೬೨ ಖಾಲಸಾ ಭೂಮಿಗಳಿದ್ದವು. ಇನಾಮದಾರರಲ್ಲಿ ಗುರುರಾವ ನರಸಿಂಹ ಅವರಿಗೆ ೨ ಹಳ್ಳಿಗಳ ಇನಾಮು, ಮುರಾರರಾವ ಗುರುರಾವರಿಗೆ ೨ ಹಳ್ಳಿಗಳ

ಇನಾಮು,ನಾಡಗೌಡ ಹಾವನೂರಕರ ದೇಸಾಯಿರಿಗೆ ೨ ಹಳ್ಳಿಗಳ ಕಂದಾಯವನ್ನಷ್ಟೇ ಅನುಭವಿಸುವ ಹಕ್ಕಿತ್ತು. ದುಮಾಳ ಭೂಮಿಗಳನ್ನು ಅಬ್ದೂಮೈಸ್ ಹಾದೀನ ಅನುಭವಿಸಿತ್ತಿದ್ದರೆ ಇಬ್ಬರು ಫಕೀರರು ಒಂದೊಂದು ಹಳ್ಳಿಯ ಭೂಮಿಗಳನ್ನೇ ಪಡೆದಿದ್ದರು. ಹಾನಗಲ್ಲ ಪರಗಣಾದಲ್ಲಿ ೨೧ ಹಳ್ಳಿಗಳನ್ನು ಪರಭಾರೆ (Alienaled) ಮಾಡಿದ್ದರೆ, ೪೪ ಖಾಲಸಾ ಅರ್ಥಾತ್ ಸರಕಾರದ ಒಡೆತನದಲ್ಲಿದ್ದವು. ಪರಭಾರೆ ಆಗಿದ್ದ ಹಳ್ಳಿಗಳಲ್ಲಿ ೭ ಹಳ್ಳಿಗಳು ದೇಸಾಯರಿಗೆ ಇನಾಮು ಆಗಿದ್ದರೆ, ೭ ದೇಶಪಾಂಡೆ ಅವರಿಗೆ ಇನಾಮು ಆಗಿದ್ದವು. ಇವುಗಳನ್ನು ಗೋವಿಂದ, ನರಸಿಂಹ ಮತ್ತು ಶ್ರೀನಿವಾಸ ವೆಂಕಾಜಿ ಅನುಭೋಗಿಸುತ್ತಿದ್ದರು. ಉಳಿದ ೭ ಹಳ್ಳಿಗಳನ್ನು ರುದ್ರೋ ಕಾಳೋ ಮತ್ತು ಮಹದೇವ ವಿಷ್ಣೋ ಅನುಭೋಗಿಸುತ್ತಿದ್ದರು. ೧ ಹಳ್ಳಿ ಬೀಜಮಾಲ ದೇಸಾಯಿ ಮತ್ತು ದೇಶಪಾಂಡೆ ಅವರವು ಇದ್ದರೆ, ೫ ಹಳ್ಳಿಗಳು ನಾಡಗೌಡ ಹಾವನೂರಕರ ಅವರ ಕಡೆಗಿದ್ದವು. ೧ ಹಳ್ಳಿ ಗಳೇಹಳ್ಳಿ ಬಸಪ್ಪಾ ಪಟ್ಟಣಶೆಟ್ಟಿ ಅವರ ಕಡೆಗಿದ್ದರೆ, ೩ ಹಳ್ಳಿಗಳು ದುಮಾಲ ಹಳ್ಳಿಗಳಿದ್ದವು. ಅವುಗಳಲ್ಲಿ ಒಂದು ಹಳ್ಳಿ ಶೃಂಗೇರಿ ಮಠಾಧಿಪತಿಗಳ ಕಡೆ ಇದ್ದರೆ, ಎರಡು ಹಳ್ಳಿಗಳನ್ನು ಸೈಯದ್ ನಸೀರುದ್ದೀನ ಪೀರಜಾದೆ ಅವರಿಗೆ ಕೊಡಲ್ಪಟ್ಟಿದ್ದವು. ಶಿಗ್ಗಾಂವಿ ಪರಗಣಾದ ೩ ಹಳ್ಳಿಗಳಲ್ಲಿ ೨ ಹಳ್ಳಿಗಳನ್ನು ಶ್ರೀನಿವಾಸ ತಿರುಮಲ ದೇಶಪಾಂಡೆ ನಾಡಗೌಡ ಅವರ ಕಡೆ ಇದ್ದರೆ, ೧ ಹಳ್ಳಿಯನ್ನು ಬಂಕಾಪುರ ಕೋಟೆಯ ಸಲುವಾಗಿ ತೆಗೆದಿರಿಸಲಾಗಿತ್ತು. ಉಳಿದ ೧೮ ಗ್ರಾಮಗಳು ಖಾಲಸಾ ಇದ್ದವು. ರಾಣೇಬೆನ್ನೂರ ಪರಗಣೆಯು ೫ ಹಳ್ಳಿಗಳು ತುಂಗಭದ್ರಾ ನದಿಯ ಆಚೆಗೆ ಇದ್ದುದರಿಂದ ಟಿಪ್ಪು ಸುಲ್ತಾನನಿಗೆ ಕೊಡಲ್ಪಟ್ಟಿದ್ದವು. ೫ ಹಳ್ಳಿಗಳನ್ನು ಜಮೀನುದಾರ ದೇಸಾಯಿ ಹನುಮಂತಗೌಡ ಹಾವನೂರಕರ ಅವರಿಗೆ ಕೊಟ್ಟಿದ್ದರೆ, ೧ ಹಳ್ಳಿಯನ್ನು ಜಮೀನುದಾರ, ನಾಡಗೀರ ಅವರಿಗೆ ಕೊಡಲಾಗಿತ್ತು. ಎರಡು ಹಳ್ಳಿಗಳನ್ನು ಶೃಂಗೇರಿ ಆಚಾರ್ಯರಿಗೆ ಮತ್ತು ಸತ್ಯಬೋಧಸ್ವಾಮಿಗಳಿಗೆ ಕೊಡಲಾಗಿತ್ತು. ಪೀರಜಾದೆ ಮತ್ತು ಜಮಾಲಸಾಹೇಬ ದರ್ಗಾದ ವೆಚ್ಚಕ್ಕೆಂದು ೩ ಗ್ರಾಮಗಳನ್ನು ನೀಡಲಾಗಿತ್ತು. ಉಳಿದ ೫೦ ಗ್ರಾಮಗಳು ಖಾಲಸಾ ಗ್ರಾಮಗಳಿದ್ದವು.

ನಿಡಸಂಗಿ ಪರಗಣಾದ ೩ಹಳ್ಳಿಗಳು ಬಂಕಾಪುರ ತಾಲೂಕಿಗೆ ಮತ್ತು ೨ ಹಳ್ಳಿಗಳು ಸ್ವಾದಿ ತಾಲ್ಲೂಕುಗಳಿಗೆ ಹೋಗಿದ್ದವು. ೬ ಹಳ್ಳಿಗಳನ್ನು ಜಮೀನುದಾರರಿಗೆ ಕೊಡಲಾಗಿತ್ತು. ೧ ಹಳ್ಳಿಯನ್ನು ಗುರುಮಲ್ಲಪ್ಪ ದೇಸಾಯಿಗೆ, ೨ ಹಳ್ಳಿಗಳನ್ನು ರಾಮಜಿ ಭೀಮಜಿ ದೇಸಾಯಿಗೆ, ೨ ಹಳ್ಳಿಗಳನ್ನು ದೇಶಪಾಂಡೆ, ಸಮರ್ತ್‌ನ್ನು ದೇವಜಿ ದಾದೋ ಮತ್ತು ಗಿರಿಮಾಜಿ ದಾದೋ ದೇಶಪಾಂಡೆ, ೧ ಹಳ್ಳಿಯನ್ನು ಮಹಮ್ಮದ ಸಾಹೇಬ ಪೀರ್ ಮತ್ತು ಇನ್ನೊಂದನ್ನು ಸವಣೂರಕರ ನವಾಬನ ಗೋರಿಯನ್ನು ನೋಡಿಕೊಳ್ಳಲು ನೀಡಲಾಗಿತ್ತು. ಟಿಪ್ಪುವಿನ ಕಾಲದಲ್ಲಿಯೇ ನವಾಬನ ಗೋರಿಯನ್ನು ನೋಡಿಕೊಳ್ಳಲು

ಕೊಡಲಾಗಿತ್ತು. ಉಳಿದ ೫೧ ಹಳ್ಳಿಗಳು ಖಾಲಸಾ ಆಗಿದ್ದವು. ತಿಳವಳ್ಳಿ ಪರಗಣಾದ ೮ ಹಳ್ಳಿಗಳನ್ನು ಇನಾಮಾಗಿ, ೨ ಹಳ್ಳಿಗಳನ್ನು ದೇವದಾಯ (ದೇವರಿಗೆ ಬಿಟ್ಟುಕೊಟ್ಟಿದ್ದು) ಮತ್ತು ೧ ಹಳ್ಳಿಯನ್ನು ಮಠಮಾನ್ಯವೆಂದು ಬಿಟ್ಟುಕೊಡಲಾಗಿತ್ತು. ೪ ಇನಾಮು ಹಳ್ಳಿಗಳು ದೇಸಾಯಿ ಹನುಮಂತಗೌಡ ಹಾವನೂರಕರ, ೪ ಹಳ್ಳಿಗಳನ್ನು ಭೀಮರಾವ ಕಾಳೋ ಮತ್ತು ಭೀಮಾಜಿ ಮಹದೇವ ಅವರ ಕಡೆ ಹೋಗಿದ್ದವು. ಒಂದು ಹಳ್ಳಿಯನ್ನು ಸಾತೇನಹಳ್ಳಿ, ಹನುಮಂತ ದೇವರಿಗೆ, ಇನ್ನೊಂದನ್ನು ಚಕಿಸಿಕೊಪ್ಪ ಹನುಮಂತದೇವರ ಸೇವೆಗೆ ನೀಡಲಾಗಿತ್ತು. ಶ್ರೀ ಗುರು ಸತ್ಯಬೋಧ ಸ್ವಾಮಿಗಳಿಗೆ ಗುಡ್ಡದ ಮಲ್ಲಾಪುರ ಹಳ್ಳಿಯನ್ನು ನೀಡಲಾಗಿತ್ತು. ರಟ್ಟಿಹಳ್ಳಿ ಪರಗಣೆಯಲ್ಲಿ ೫ ಇನಾಮು ಹಳ್ಳಿಗಳಿದ್ದು, ಅದರಲ್ಲಿ ೨ ಗ್ರಾಮಗಳನ್ನು ಸತ್ಯಬೋಧ ಸ್ವಾಮಿಗಳ ಸೇವೆಗೆ, ಒಂದು ಹಳ್ಳಿಯನ್ನು ಶ್ರೀ ರಾಘವೇಂದ್ರಸ್ವಾಮಿಗಳಿಗೆ ಮತ್ತು ಉಡುಪಿ ಶ್ರೀ ಕೃಷ್ಣನ ದೇವಾಲಯಕ್ಕೆ ಕೊಡಲಾಗಿತ್ತು. ಹರಿಹರ ತಾಲೂಕಿನ ಒಂದು ಹಳ್ಳಿ ಕಳೆದ ೨೦ ವರುಷಗಳಿಂದ ಶತ್ರುಗಳ ಬಳಿ ಇದ್ದಿತು. ೨೪ ಹಳ್ಳಿಗಳು ಖಾಲಸಾ ಆಗಿದ್ದವು. ಪರಭಾರೆ ಆದ ಹಳ್ಳಿಗಳಲ್ಲಿ ಒಂದು ಬಿದನೂರು ತಾಲ್ಲೂಕಿನ ಉದುಗಣಿ ಮಹಾಲಿನಲ್ಲಿ ಇದ್ದರೆ, ೨ ಹಳ್ಳಿಗಳಲ್ಲಿ ಒಂದು, ಸರ್ವಸಾಮಾನ್ಯವೆಂದು ಹನುಮಂತಗೌಡ ಹಾವನೂರಕರ ಅವರ ಬಳಿ ಇದ್ದಿತು. ಇನ್ನೊಂದು ತಿಮ್ಮಪ್ಪ ಗರುರಾವ ನಾಡಗೀರ ಅವರಿಗೆ ಮಾನ್ಯವೆಂದು (ಆದರಣೀಯ) ಕೊಡಲಾಗಿತ್ತು. ಕುಪ್ಪೇಲೂರ ಪರಗಣಾದಲ್ಲಿಯ ಎರಡು ಹಳ್ಳಿಗಳಲ್ಲಿ ಒಂದನ್ನು ಶ್ರೀ ಸತ್ಯಭೋದಸ್ವಾಮಿಗಳಿಗೆ, ಇನ್ನೊಂದನ್ನು ಕೂಡ್ಲಿ ಶೃಂಗೇರಿ ಮಠದ ಶ್ರೀ ಶಂಕರ ಭಾರತಿ ಸ್ವಾಮಿಗಳಿಗೆ ನೀಡಲಾಗಿತ್ತು. ೩೮ ಹಳ್ಳಿಗಳು ಖಾಲಸಾ ಆಗಿದ್ದರೆ, ಉಳಿದ ೩ ಹಳ್ಳಿಗಳನ್ನು ಸರಕಾರದಿಂದ ಜಪ್ತು ಮಾಡಲ್ಪಟ್ಟಿದ್ದವು. ಸರಕಾರವು ಜಪ್ತು ಮಾಡುವ ಪೂರ್ವದಲ್ಲಿ ಈ ಮೂರು ಹಳ್ಳಿಗಳು ದೇವಣಭಟ್ಟ ಭಾನಾಭಟ್ಟ ಜೋಶಿ, ಹರಭಟ್ಟ, ಆಯ್ಯಭಟ್ಟ ಜೋಶಿ, ರಟ್ಟೆಹಳ್ಳಿ ಹಾಗೂ ಕುಪ್ಪಲೂರ ನಾಡಗೌಡರಿಗೆ ಸೇರಿದ್ದವು.

ಗುತ್ತಲ ಪರಗಣಾದ ೫ ಹಳ್ಳಿಗಳನ್ನು ಹನುಮಂತಗೌಡ ಹಾವನೂರಕರ ದೇಸಾಯಿ ಮತ್ತು ಎರಡೂವರೆ ಹಳ್ಳಿಗಳ್ನಸು ಬ್ರಾಹ್ಮಣರಿಗೆ ಕೊಡಲಾಗಿತ್ತು. ಉಳಿದ ಎರಡೂವರೆ ಹಳ್ಳಿಗಳಲ್ಲಿ ಅರ್ಧ ಹಳ್ಳಿಯನ್ನು ಶೇಷಂಭಟ್ಟ ಪುರಾಣಿಕ ಹಾವನೂರಕರ ಅವರಿಗೆ, ಒಂದು ಹಳ್ಳಿಯನ್ನು ವಿಷ್ಣುಪಾದ ರಂಗಾಪುರಕರ ಮತ್ತು ಒಂದು ಹಳ್ಳಿಯನ್ನು ಹರಪನಹಳ್ಳಿ ಸೋಮಯಾಜಿ ಅವರಿಗೆ, ಕೊಡಲಾಗಿತ್ತು. ಉಳಿದ ಹಳ್ಳಿಗಳು ಖಾಲಸಾ ಆಗಿದ್ದವು. ಕಾಗಿನೆಲ್ಲಿ ಪರಗಣಾದ ಏಳು ಹಳ್ಳಿಗಳು ಇನಾಮಿ ಹಳ್ಳಿಗಳಾಗಿದ್ದವು. ಅವುಗಳಲ್ಲಿ ೬ ಹಳ್ಳಿಗಳನ್ನು ಹಣಮಂತರಾವ್ ದೇಸಾಯಿ ಹಾವನೂರಕರ ಅವರಿಗೆ, ಒಂದು ಹಳ್ಳಿಯನ್ನು ಕಾಗಿನೆಲ್ಲಿಯ ಆದಿಕೇಶವ ದೇವರ ಸೇವೆಗಾಗಿ ಬಿಡಲಾಗಿತ್ತು. ಈ ಹಳ್ಳಿಯು ಜೂಡಿ ಹಳ್ಳಿಯಾಗಿತ್ತು. ಕಸಬಾ, ಹಾವೇರಿಪೇಠ ಮಹಲ ಆಗಿದ್ದು, ೭೮ ಹಳ್ಳಿಗಳು ಖಾಲಸಾ

ಆಗಿದ್ದವು. ಕೊನೆಗೆ ಮಾಸೂರು ಪರಗಣೆಯ ೧೬ ಹಳ್ಳಿಗಳೂ ಖಾಲಸಾ ಆಗಿದ್ದವು.

(ಗ್ರಾಮಗಳ ಪೂರ್ಣ ವಿವರಗಳಿದ್ದ ೧೭೮೩ರ ಸವಣೂರ ತಾಲೂಕಿನ ಈ ದೇಹರ್ಝಾಡ (ಅಂಗರಚನೆ) ಒಂದು ಮಹತ್ವದ ದಾಖಲೆ. ಕಾರಣ ಈ ತಾಲ್ಲೂಕಿನಲ್ಲಿ ಒಳಗೊಂಡ ಪರಗಣಾ ಮತ್ತು ಹಳ್ಳಿಗಳು ವಿವರಗಳು ಇಲ್ಲಿವೆ. ೧೪ ಪರಗಣಾಗಳಲ್ಲಿ ೬೩೮ ಹಳ್ಳಿಗಳು, ೨ ಕಸಬಾ ಮತ್ತು ೧ ಪೇಠಾ ವಿವರಗಳು ಇಲ್ಲಿ ಲಭ್ಯವಿದೆ.

## ಯಾದಿ ಮುಸಲಾ ಅಥವಾ ಸಂಬಳವನ್ನು ಪಡೆಯುತ್ತಿದ್ದ ಚಿಕ್ಕ ಕಂದಾಯ ಅಧಿಕಾರಿಗಳ ಪಟ್ಟಿ-ಸವಣೂರು ತಾಲೂಕು-೧೭೯೬

(ಪುಣೆ ಪತ್ರಾಗಾರ, ಕರ್ನಾಟಕ ಕಾಗದ ಪತ್ರಗಳ ಗಂಟು ನಂ.೨೪೩)

ಸವಣೂರು ತಾಲ್ಲೂಕಿನಲ್ಲಿರುವ ಹಲವಾರು ಪಗಣಾಗಳಲ್ಲಿರುವ ಕಂದಾಯ ಅಧಿಕಾರಿಗಳಿಗೆ ಪತ್ರಗಳನ್ನು ಬರೆದು ಅವರ ೧೭೯೧ ರಿಂದ ೧೭೯೬ರವರೆಗಿನ ಎಲ್ಲ ಅಯವ್ಯಯ ಪತ್ರಿಕೆಗಳನ್ನು ತಂದು ಹುಜೂರರಿಗೆ ಒದಗಿಸಬೇಕೆಂದು ತಿಳಿಸಲಾಗಿತ್ತು. ಅಲ್ಲದೆ, ಚಿಕ್ಕ ಚಿಕ್ಕ ಸ್ಥಾನಿಕ ಅಧಿಕಾರಿಗಳಿಗೆ ಅವರು ಕಂದಾಯವನ್ನು ವಸೂಲು ಮಾಡಿದ ಪ್ರತಿಫಲವನ್ನು ಕೊಟ್ಟು ಬರಬೇಕೆಂದೂ ತಿಳಿಸಲಾಗಿತ್ತು.

| ಅಧಿಕಾರಿಗಳು | | ಹಣ(ರೂ) | ಪರಗಣಾ |
|---|---|---|---|
| ೦೧. ಪಾಂಡುರಂಗ ಭಾಸ್ಕರ | ಕಾಮವೀಸದಾರ | ೫೫ | ಕಾಗಿನೆಲ್ಲಿ |
| ೦೨. ರಾಮಚಂದ್ರ ನಾರಾಯಣ | ದಫ್ತರದಾರ | | |
| ೦೩. ವೀಸಾಜಿ ರಘುನಾಥ | ಸಬನೀಸ್ | | |
| ೦೧. ರಾಮಚಂದ್ರ ಗೋವಿಂದ<br>ಎಸಾಜಿ ಗೋವಿಂದ | ಕಾಮವೀಸದಾರ | ೭೫ | ಕೋಡ |
| ೦೨. ಗಣೇಶ ನರಸಿ | ಫಡನೀಸ್ | | |
| ೦೩. ಗಣೇಶ ನರಸಿ | ದಫ್ತರದಾರ | | |
| ೦೧. ವೆಂಕಟರಾವ ಶಿವಾಜಿ | ಕಾಮವೀಸದಾರ | ೪೦ | ಕುಪ್ಪೇಲೂರು |
| ೦೨. ಮೋರೋ ಗೋಪಾಲ | ಫಡನೀಸ | | |
| ೦೧. ಅಪ್ಪಾಜಿ ಗೋವಿಂದ | ಕಾಮವೀಸದಾರ | ೩೫ | ಶಿಗ್ಗಾಂವಿ |
| ೦೨. ಶೇಷೋ ನಾರಾಯಣ | ದಫ್ತರದಾರ | | |
| ೦೧. ಶಿವಾಜಿ ಖಂಡೇರಾವ | ಕಾಮವೀಸದಾರ | ೬೦ | ನಿಡಸಂಗಿ |
| ೦೨. ಕಾಶೀ ವಿಠ್ಠಲ | ಫಡನೀಸ | | |
| ೦೩. ಗಣೇಶ ಜಗನ್ನಾಥ | ದಫ್ತರದಾರ | | |
| ೦೪. ನಾನೋ ಬಾಬೂರಾವ | ಸಬನೀಸ | | |

| ೦೧. ಗೋವಿಂದ ಬಾಪೂಜಿ | ಫಡನೀಸ | ೧೦ | ತಿಳವಳ್ಳಿ |
|---|---|---|---|
| ೦೧. ಸದಾಶಿವ ರಾಮಚಂದ್ರ | ಫಡನೀಸ | ೨೫ | ಅಡೂರು |
| ೦೨. ಬಾಪೂಜಿ ರಾವಜಿ | ಸಬನೀಸ್ | | |
| ೦೧. ದೇವರಾವ ಅನಂತ | ಕಾಮವೀಸದಾರ | ೫೦ | ರಟ್ಟೇಹಳ್ಳಿ |
| ೦೨. ನಾರೋ ಮಹದೇವ | ಫಡನೀಸ | | |
| ೦೩. ದಾಜೀ ಮಾದೇಶ್ವರ | ದಪ್ತರದಾರ | | |
| ೦೧. ನಾರಾಯಣ ಭಾಸ್ಕರ | ಕಾಮವೀಸದಾರ | ೨೫ | ಗುತ್ತಲ |
| ೦೧. ಲಿಂಗೋ ಬಾಬೂರಾವ | ಕಾಮವೀಸದಾರ | ೫೦ | ಜಖಿ |
| ೦೨. ಯದು ಬೀಕಾಜಿ | ಫಡನೀಸ | | |
| ೦೩.ಪಾಂಡುರಂಗ ಮಹಾದೇವ | ಸಬನೀಸ | | |
| ೦೧.ತ್ರಯಂಬಕರಾವ್ ಬಲ್ಲಾಳ | ಕಾಮವೀಸದಾರ | ೫೦ | ಹಾನಗಲ್ಲ |
| ೦೨. ಧೊಂಡೋ ಭಾಸ್ಕರ | ಫಡನೀಸ | | |
| ೦೩. ರಾಮಚಂದ್ರ ಕೃಷ್ಣ | ಸಬನೀಸ | | |
| ೦೧. ರಘುನಾಥ ಬಾಬುರಾವ | ಕಾಮವೀಸದಾರ | ೫೦ | ಮಾಸೂರು |
| ೦೨. ದಾದೋ ಕೃಷ್ಣ | ಫಡವೀಸ | | |
| ೦೩. ಶಂಕರಜಿ ಕೃಷ್ಣ | ದಪ್ತರದಾರ | | |
| ೦೧.ಆನಂದರಾವ್ ರಾಮಚಂದ್ರ | ಕಾಮವೀಸದಾರ | ೫೦ | ಮೊರಬ |
| ೦೨. ಕೃಷ್ಣಾಜಿ ನಾರಾಯಣ | ದಪ್ತರದಾರ | | |
| ೦೩. ಹರಿನಾರಾಯಣ | ಫಡನೀಸ | | |
| ೦೧. ಸುಬ್ಬರಾವ್ ಅನಂತ | ಕಾಮವೀಸದಾರ | | |
| ೦೧. ಅಪ್ಪಾಜಿ ದೇವರಾವ್ | ಕಾಮವೀಸದಾರ | ೨೫ | ಕಸಬಾ ಹಂಸಭಾವಿ |

| | | | |
|---|---|---|---|
| ೦೧. ಚಿಂತೊ ಅನಂತ | ಕಾಮವೀಸದಾರ | ೫೦ | ಕಸಬಾ, ಕೆರೂರು, ಖುರ್ದಾ |
| ೦೨. ನಾನಾಜಿ ವೆಂಕಟೇಶ | | | |
| ೦೩. ವಾಸುದೇವ ಗೋಪಾಳ | ದಪ್ತರದಾರ | | |
| ೦೧. ಜನಾರ್ಧನ ಭಟ್ಟಾಜಿ | ಫಡನೀಸ | ೧೫ | ಕರಿಯಾತ್ ಅಣ್ಣಿಗೇರಿ |
| ೦೧. ರಘುನಾಥ ಭಾಸ್ಕರ | ಕಾಮವೀಸದಾರ | ೧೦೫ | ದೇಶಗತ |
| ೦೨. ಜೀವಾಜಿ ಕೇಶವ | ಫಡನೀಸ | | |
| ೦೩. ಶೇಷೋ ನರಹರ | ಸಬನೀಸ | | |
| ೦೪. ಸಚೀವ ರಾಮಚಂದ್ರ | ದಪ್ತರದಾರ | ೮೨೦ | |
| ಸವಣೂರು ತಾಲೂಕಿನ ಜಕಾತಿ (ವಸೂಲು ಮಾಡಿದವರು ವಿನಾಯಕ ರಘುನಾಥ ಖರೆ) | | ೨೫ | |
| | | ೮೪೫ | |

**ಒಟ್ಟು ೧೪ ಪರಗಣಾಗಳು**

೦೧. ಕಾಗೆನೆಲ್ಲಿ
೦೨. ಕೋಡ
೦೩. ಕುಪ್ಪೇಲೂರು
೦೪. ಶಿಗ್ಗಾಂವ
೦೫. ನಿಡಸಂಗಿ
೦೬. ತಿಳವಳ್ಳಿ
೦೭. ಅಡೂರು
೦೮. ರಟ್ಟೇಹಳ್ಳಿ
೦೯. ಗುತ್ತಲ
೧೦. ಜಖ
೧೧. ಹಾನಗಲ್ಲ
೧೨. ಮಾಸೂರು
೧೩. ಮೊರಬ
೧೪. ಕಾರಡಗಿ

**ಕಸಬಾ** ೧. ಹಂಸಭಾವಿ ೨.ಕೆರೂರು ಖುರ್ದ

ಕರಿಯಾತ ಅಣ್ಣೀಗೇರಿ ದೇಶಗತಿ, ಬಹುಶಃ ಹಾವನೂರು ಇದ್ದಿರಬೇಕು

ಒಂದೊಂದು ಫರಗಣೌಥಲ್ಲಿ ಸಾಮಾನ್ಯವಾಗಿ ೪ ಅಧಿಕಾರಿಗಳು ಇರುತ್ತಿದ್ದರು. ಅವರು ೧. ಕಾಮವೀಸದಾರ (ಮಾಮಲೇದಾರ) ೨.ಫಡನೀಸ (ಕಾಗದ ಪತ್ರಗಳ ರಕ್ಷಕ) ೩.ಸಬನೀಸ (ಸಂಬಳ ವಿತರಿಸುವ ಅಧಿಕಾರಿ) ೪. ದಪ್ತರದಾರ (ಕಾಗದ ಪತ್ರಗಳನ್ನು ಬರೆಯುವವ)

# ಸವಣೂರು ನವಾಬರ ವಂಶಾವಳಿ

(೧) ರಗಟೆ ಬಹುಲೋಲಖಾನ

(೨) ಅಬ್ದುಲ್ ರಹೀಮಖಾನ

(೩) ಅಬ್ದುಲ್ ಕರೀಮಖಾನ

(೪) ಅಬ್ದುಲ್ ರಾವೂಫ್ ಖಾನ(೧೬೮೬-೧೭೧೯)




ವಿವರಗಳು

(೧) ಅಬ್ದುಲ್ ಯಾದಖಾನರು (ಕ್ರಮಾಂಕ ೬) ಅಬ್ದುಲ್ ಫತೇಖಾನರ ತಮ್ಮಂದಿರು.

(೨) ಅಬ್ದುಲ್ ಗಫರಖಾನರು (ಕ್ರಮಾಂಕ ೭) ಅಬ್ದುಲ್ ಯಾದಖಾನರ ತಮ್ಮಂದಿರು.

(೩) ಅಬ್ದುಲ್ ಗಫರಖಾನರ ಮಗ ಅಬ್ದುಲ್ ಮಜೀದಖಾನರು (೧೭೩೦-೧೭೫೪) (ಕ್ರಮಾಂಕ ೮) ಅಪ್ರಾಪ್ತ ವಯಸ್ಕರಾಗಿದ್ದರಿಂದ ಅವರ ಕಕ್ಕ ಸತ್ತಾರಖಾನ ಆಡಳಿತೆಯನ್ನು ನಿರ್ವಹಿಸಿದರು.

(೪) ಅಬ್ದುಲ್ ಹಕೀಮಖಾನರ ನಂತರ ಅವರ ಜ್ಯೇಷ್ಠ ಮಗ ಖೈರಖಾನ ನಿಜವಾಗಿ ಪಟ್ಟಕ್ಕೆ ಬರಬೇಕಿತ್ತು. ಆದರೆ ಅಬ್ದುಲ್ ಖೈರಖಾನರು (೧೭೯೮-೧೮೨೭) ಶ್ರೀರಂಗಪಟ್ಟಣದಲ್ಲಿ ಇದ್ದುದರಿಂದ, ಅವರ ತಮ್ಮ ಅಬ್ದುಲ್ ಹಕೀಮಖಾನರು (೧೭೬೪-೧೭೯೭) ಪಟ್ಟಕ್ಕೆ ಬಂದರು. ಅಣ್ಣ ಖೈರಖಾನ ಮರಳಿ ಬಂದಾಗ ಮೊದಲು ಪಟ್ಟವನ್ನು ಬಿಟ್ಟುಕೊಡಲಿಲ್ಲ. ಹೀಗಾಗಿ ಮೊದಲು ತಮ್ಮನು ಆಳಿ, ನಂತರ ಅಣ್ಣನು ಪಟ್ಟಕ್ಕೆ ಬಂದನು.

(೫) ಅಬ್ದುಲ್ ಮುನವರಖಾನ (ಕ್ರಮಾಂಕ ೧೩) ಅಬ್ದುಲ್ ಫೈಜಖಾನರ ತಮ್ಮಂದಿರು.

(೬) ಅಬ್ದುಲ್ ದಲೇಲಖಾನ ಊರ್ಫ್ ದಿಲೇರಖಾನರು (ಕ್ರಮಾಂಕ ೧೪) ಅಬ್ದುಲ್ ಮುನವರಖಾನ ತಮ್ಮಂದಿರು.

(೭) ೧೮೬೮ ರಿಂದ ೧೮೮೩ರವರೆಗೆ ಛೋಟಾ ದಿಲೇರಖಾನರು ಅಪ್ರಾಪ್ತ ವಯಸ್ಕರಾಗಿದ್ದರಿಂದ, ಮಹಮ್ಮದ ಗೌಸ ಎಂಬ ದಿವಾಣರು ಸವಣೂರು ಸಂಸ್ಥಾನದ ಆಡಳಿತವನ್ನು ನಿರ್ವಹಿಸುತ್ತಿದ್ದರು.

(೮) ೧೮೯೨ ರಿಂದ ೧೯೧೨ರವರೆಗೆ ಅಬ್ದುಲ್ ಮಜೀದಖಾನರು (ಕ್ರಮಾಂಕ ೧೮) ಅಪ್ರಾಪ್ತ ವಯಸ್ಕರರಾಗಿದ್ದರಿಂದ, ತಾಯಿಯ ತಂದೆ, ಅಜ್ಜ ದಾದಾ ಮಹಮ್ಮದಖಾನರು ಸಂಸ್ಥಾನದ ಆಡಳಿತೆಯನ್ನು ನಿರ್ವಹಿಸಿದರು. ಅಬ್ದುಲ್ ಮಜೀದಖಾನರು ೧೯೧೨ರಲ್ಲಿ ಸಂಸ್ಥಾನದ ಗಾದೆಯನ್ನು ಅಲಂಕರಿಸಿದರು.

# ದಿಲೇರ ಜಂಗೀ

## (ಸವಣೂರು ನವಾಬರ ಇತಿಹಾಸ)

ಬಿಸಿಮಿಲ್ಲಾಹಿ ರಹಿಮಾನ ಜಿರಹಿಂದ (ನರ್ರಹೀಮ) ಎಂದು ದೇವರ ಪ್ರಾರ್ಥನೆಯೊಂದಿಗೆ ಪ್ರಾರಂಭವಾಗುವ ಸವಣೂರು ನವಾಬರ ಇತಿಹಾಸವನ್ನು ರಚಿಸಿದವನು ಮೊಹಮ್ಮದ ಗೌಸಖಾನ ಬಹದ್ದೂರ ರಿಸಾಲದಾರ. ಇದನ್ನು ಬರೆಸಿದವನು ನವಾಬ ಹಜರೇಜಂಗ ಬಹದ್ದೂರ ಹಜರೇ ಜಂಗ ಸವಣೂರ. ನವಾಬ ಹಜರೇ ಜಂಗನೆಂದರೆ ೧೮೩೪-೧೮೬೨ರ ಮಧ್ಯೆ ಸವಣೂರು ಸಂಸ್ಥಾನದ ಸಿಂಹಾಸನದ ಮೇಲಿದ್ದ ಅಬ್ದುಲ್ ದಲೇಲಖಾನ-ಊರ್ಫ್ ದಿಲೇರಖಾನ ನವಾಬನು.

ಈ ಇತಿಹಾಸವು ಮೀಯಾನ್ ಮನೆತನದ ಅಬ್ದುಲ್ ಕರೀಮಖಾನನಿಂದ (೧೬೭೨-೧೬೭೮) ಪ್ರಾರಂಭವಾಗಿ, ಅಬ್ದುಲ್ ದಿಲೇರಖಾನ(೧೮೩೪-೧೮೬೨) ನವಾಬನ ಅರ್ಧ ಆಳಿಕೆಗೆ ಮುಗಿಯುತ್ತದೆ. ಅರ್ಧ ಗದ್ಯ, ಅರ್ಧ ಪದ್ಯದಲ್ಲಿರುವ ಈ ಇತಿಹಾಸವನ್ನು ಬರೆಯಲಯ ಅರಮನೆಯ ದಾಖಲೆಗಳನ್ನೂ ಮತ್ತು ಸಮಕಾಲಿನ ಕಾಗದ ಪತ್ರಗಳನ್ನು ನೋಡಿದ್ದೇನೆ ಎಂದು ಲೇಖಕನು ಹೇಳುತ್ತಾನೆ. ಮೊಹಮ್ಮದ ಫೈಜುದ್ದೀನನ ಮಗನಾದ ಮುನಸಿ ಅಜೀಮುದ್ದೀನನು ಸವಣೂರಲ್ಲಿ ಈ ಗ್ರಂಥವನ್ನು ಹಿಜರಿ ಶಕಾ ೧೨೬೩ (೧೮೪೨)ರಲ್ಲಿ ಪ್ರಕಟಪಡಿಸಿದನು. ಗ್ರಂಥವು ರಚನೆಯಾದೊಢನೆ ಪ್ರಕಟಿಸಿರಬೇಕು. ಮಹಮ್ಮದ ಗೌಸಖಾನ ಹಾಗೂ ಮುನಸಿ ಅಜೀಮುದ್ದೀನನು ದಿಲೇರಖಾನನ ಸೇವೆಯಲ್ಲಿದ್ದರು.

ಮೂಲ ಪರ್ಶಿಯನ್ ಭಾಷೆಯಲ್ಲಿ ಇರುವ ಈ ಗ್ರಂಥದಲ್ಲಿ ೧೫ ಪ್ರಕರಣಗಳಿದ್ದು. ೩೮೯ ಪದ್ಯಗಳಿವೆ ನಂತರ ಈ 'ದಿಲೇರಜಂಗಿ' ಗ್ರಂಥವನ್ನು ಮರಾಠಿಗೆ ಭಾಷಾಂತರಿಸಿದ್ದಾರೆ. ಮೊದಲು, ಮೋಡಿಲಿಪಿ ಮರಾಠಿಯಲ್ಲಿದ್ದ ಈ ಗ್ರಂಥವನ್ನು ನಂತರ ದೇವನಾಗರಿ ಲಿಪಿಗೆ ಪರಿವರ್ತಿಸಿದ್ದಾರೆ. ಈ ಗ್ರಂಥವು ಇನ್ನೂ ಹಸ್ತಲಿಖಿತ ರೂಪದಲ್ಲಿಯೇ ಇದೆ. ೧೮೬೭ರ ಹೊತ್ತಿಗೆ ಧಾರವಾಡದಲ್ಲಿದ್ದ ಸರಕಾರಿ ಮುದ್ರಣಾನಾಲಯದಲ್ಲಿ ಪರ್ಶಿಯನ್ ಭಾಷೆಯ ನಾಲ್ಕಾರು ಕಲ್ಲಚ್ಚು ಪ್ರತಿಗಳನ್ನು ತೆಗೆದಿರಬೇಕು. ಈಗ ಒಂದು ಪರ್ಶಿಯನ್ (ಕಲ್ಲುಚ್ಚು ಮುದ್ರಣ) ಪ್ರತಿ ಮುಂಬಯಿ ವಿಶ್ವವಿದ್ಯಾಲಯದಲ್ಲಿದೆ. ಇನ್ನೊಂದು ಮರಾಠಿ ಹಸ್ತಪ್ರತಿ ಪುಣೆಯ ಭಾರತೀಯ ಇತಿಹಾಸ ಸಂಶೋಧಕ ಮಂಡಳದಲ್ಲಿದೆ.

ವಿಲೀನಕರಣವಾದ ಮೇಲೆ ಸವಣೂರು ಕೊನೆಯ ನವಾಬರಾಗಿದ್ದ ಅಬ್ದುಲ್ ಮಜೀದಖಾನರು ಬೆಂಗಳೂರಿಗೆ ಹೋದಮೇಲೆ ಅವನ ಅರಮನೆಯ ವಾಚನಾಲಯದಿಂದ ಈ ದಿಲೇರಿಜಂಗಿ ಪ್ರತಿ ಮಾಯವಾಗಿರಬೇಕು. ಸವಣೂರಿನ ವಕೀಲರಾಗಿದ್ದ ಶ್ರೀ ಪ್ರಹ್ಲಾದರಾವ ರಿತ್ತಿ ಅವರು ಒಂದು ಪರ್ಶಿಯನ್ ಪ್ರತಿಯನ್ನು ನನಗೆ ತೋರಿಸಿ ಮರಳಿ ಒಯ್ದರು ಎಂದು ಮುಂಬಯಿ ವಿಶ್ವವಿದ್ಯಾಲಯದ ಡಾ। ಜಿ.ಎಚ್.ಖರೆ ಅವರು ಭಾರತೀಯ ಸಂಶೋಧಕರ ಮಂಡಳದ ಒಂದು ತ್ರೈಮಾಸಿಕ ಸಂಚಿಕೆಯಲ್ಲಿ ದಾಖಲಿಸಿದ್ದಾರೆ. ಹಾಗೆಯೇ ಶ್ರೀ ರಿತ್ತಿ ಪ್ರಹ್ಲಾದರಾಯರ ಬಳಿ ದಿಲೇರಿಜಂಗೀ ಕಾವ್ಯದ ಮರಾಠಿ ಪ್ರತಿ ಇದ್ದಿತು. ಅದನ್ನು ಅವರು ಇತಿಹಾಸಜ್ಞ ಶ್ರೀ ಬಿ.ಏ. ಸಾಲೊತೊರೆ ಅವರಿಗೆ ೮-೧೧-೧೯೬೧ರಂದು ತೋರಿಸಿದ್ದರಂತೆ. ಆಗ ಯಾರಿಗೂ ಸವಣೂರ ಇತಿಹಾಸವನ್ನು ಬರೆಯಬೇಕೆನಿಸಲಿಲ್ಲವೇನೋ! ಈ ಪ್ರತಿ ಈಗ ನನ್ನ ಬಳಿ ಇದೆ.

ನಾನು,ಒಂದು ಪರ್ಶಿಯನ್ ಕಲ್ಲಚ್ಚಿನ 'ದಿಲೇರಿಜಂಗೀ' ಪ್ರತಿಯ ಜೆರಾಕ್ಸ ಪ್ರತಿಯನ್ನು ಧಾರವಾಡದ ಡಾ। ನೂರ ಅನ್ನುವ ಗೃಹಸ್ಥರಿಂದ ದೊರಕಿಸಿದ್ದೇನೆ. ಸವಣೂರಿನ ಖಾಂಜಾದಾ ಮನೆತನಕ್ಕೆ ಸಂಬಂಧಿಸಿದ ಇವರು ಈ ಪ್ರತಿಯನ್ನು ಎಲ್ಲಿಂದ ದೊರಕಿಸಿದರೋ ಗೊತ್ತಿಲ್ಲ. ಧಾರವಾಡ ರೇಲ್ವೇ ನಿಲ್ದಾಣದ ಬಳಿ ಮಾಳಮಡ್ಡಿಯಲ್ಲಿ ಅವರು ಒಂದು ಹಳೆ ಮನೆಯಲ್ಲಿ ಇರುತ್ತಿದ್ದರು. ಬಹು ಪ್ರಯಾಸದಿಂದ ಈ ಜೆರಾಕ್ಸ ಪ್ರತಿ ಪಡೆದಿದ್ದೇನೆ. ಕೆಂಪು ರಟ್ಟಿನ ಮೂಲ ಪ್ರತಿ ಅವರ ಬಳಿ ಇದ್ದಿತು. ಇದು ಏಂಟ್ಹತ್ತು ವರುಷಗಳ ಹಿಂದಿನ ಮಾತು.

ನನಗೆ ಪರ್ಶಿಯನ್ ಬರುವದಿಲ್ಲ. ಹೀಗಾಗಿ ಇದನ್ನು ಕನ್ನಡಕ್ಕೋ, ಇಂಗ್ಲೀಷಿಗೋ ಭಾಷಾಂತರಿಸಲು ಧಾರವಾಡ, ಮೈಸೂರು, ಹೈದ್ರಾಬಾದ, ಬೆಂಗಳೂರಲ್ಲಿ ಅಲೆದಾಡಿದೆ. ಆದರೆ ಈ ಕಾರ್ಯಕ್ಕೆ ಎಲ್ಲರೂ ಹಿಂಜರಿದರು. ಕೊನೆಗೆ ಸವಣೂರಿನವರೇ ಆದ ಶ್ರೀ ಏ.ಏಮ್ ಖಾಂಜಾದೆ ಮಾಸ್ತರರು ಶ್ರಮವಹಿಸಿ, ಇಳಿವಯಸ್ಸಿನಲ್ಲಿಯೂ ಇಂಗ್ಲೀಷಿಗೆ ತರ್ಜುಮೆ ಮಾಡಿಕೊಟ್ಟರು. ಇವರು ನನ್ನ ವಿದ್ಯಾಗುರುಗಳು.

ಈ ಇತಿಹಾಸವನ್ನು ಓದುವಾಗ ಎಲ್ಲಿಯೂ ನೀರಸವೆನಿಸುವದಿಲ್ಲ. ಮಧ್ಯಮಧ್ಯೆ ಉಪಕಥೆಗಳಿವೆ. ಗಾದೆಗಳಿವೆ, ಉಪಮಾನ ಉಪಮೇಯಗಳಿವೆ. ಕವಿಲೇಖಕ ಎಲ್ಲ ನವಾಬರನ್ನೂ ಮುಕ್ತಕಂಠದಿಂದ ಹೊಗಳಿದ್ದಾನೆ. ಹೆಚ್ಚು ವರ್ಣನಾತ್ಮಕ ಭಾಗಗಳು, ಹೆಚ್ಚುಚ್ಚು ವಿಶೇಷಣಗಳನ್ನು ಬಳಸಿ ಹೊಗಳುವದು ಒಮ್ಮೊಮ್ಮೆ ಅನವಶ್ಯಕವೆನಿಸುತ್ತದೆ. ದಿಲೇರಖಾನನು ಜೀವಿಸಿರುವಾಗಲೇ ಈ ಇತಿಹಾಸವು ನಿರ್ಮಾಣವಾಗಿರುವದರಿಂದ, ಕವಿ ವಿಜಯಕಾವ್ಯದಂತೆ ನಾಯಕ ನವಾಬರನ್ನು ಹೊಗಳಿದ್ದಾನೆ. ಈ 'ದಿಲೇರಜಂಗಿ' ಗ್ರಂಥವನ್ನು ಬಿಟ್ಟರೆ ಸವಣೂರು ಇತಿಹಾಸವನ್ನು ಹೇಳುವ ಬೇರಾವ ಗ್ರಂಥವೂ ಇಲ್ಲ. ಈ ಮನೆತನದವರು ಇಡೀ ಕರ್ನಾಟಕವನ್ನು ಆವರಿಸಿದ್ದ ಕರ್ನಾಟಕ ಸುಭಾವನ್ನು ೧೮೦

ವರ್ಷವಾಳಿ, ನಂತರ ರಾಜ್ಯವು ಇಪ್ಪತ್ತೈದು ಹಳ್ಳಿಗಳ ಕುಬ್ಜ ಸಂಸ್ಥಾನವಾದ ಮೇಲೆ ಕೂಡ ೮೨ ವರುಷ ಆಳಿದ್ದಾರೆ. ಈ ಇತಿಹಾಸವೆಂದರೆ ಪೇಶ್ವೆ ಮತ್ತು ಕರ್ನಾಟಕದ ಸಂಬಂಧವಿದ್ದಂತಿದೆ. ಅದೇಕೆ - ಒಂದು ರೀತಿ ಉತ್ತರ ಕರ್ನಾಟಕದ ಇತಿಹಾಸವೇ ಇದಾಗಿದೆ!

* * * * *

## ಆಧಾರ ಗ್ರಂಥಗಳು

೧ 'ದಿಲೇರಿ ಜಂಗಿ' ಪರ್ಶಿಯನ್ ಕಾವ್ಯ

೨ 'ದಿಲೇರಿ ಜಂಗಿ', ಮರಾಠಿ ಹಸ್ತಪ್ರತಿ

೩. ಮುಂಬಯಿ ರಾಜ್ಯದಲ್ಲಿ ಪ್ರಕಟವಾಗಿದ್ದ ಮುಂಬಯಿ ಗ್ಯಾಜೇಟಿಯರ್‌ಗಳು

೪. 'ತರಘಕಿರಾತ್-ಉಲ್-ಬಿಲಾದ ವಾಲ ಹುಕುಮ್' ಮೀರಘುಸೇನ ಅಲಿ ಕಿರ್ಮಾನಿಯವರ ಪರ್ಶಿಯನ್ ಗ್ರಂಥವನ್ನು ಡಾ. ಶಫಿ ಅಹಮ್ಮದ ಶರೀಫರು ಇಂಗ್ಲಿಷ್‌ಗೆ ತರ್ಜುಮೆ ಮಾಡಿದ್ದಾರೆ.

೫. ಮಹಾರಾಷ್ಟ್ರ ಸರಕಾರದ ಪತ್ರಾಗಾರದ ಪೇಶ್ವೆ ದಪ್ತರಗಳು.



ಅಬ್ದುಲ್ ಮಜೀದ್ ಖಾನ್
1730 - 1754



ಅಬ್ದುಲ್ ಖೈರ್ ಖಾನರಿಗೆ ಜನರಲ್ ವೆಲ್ಲಸ್ಲಿ ಅವರು
ಖಡ್ಗವನ್ನು ಕಾಣಿಕೆಯಾಗಿ ಕೊಡುತ್ತಿರುವುದು
1797 - 1827



ಅಬ್ದುಲ್ ದಿಲೇರ್ ಖಾನ್
1883 - 1884

**ಕನ್ನಡ** ವಿಶ್ವವಿದ್ಯಾಲಯದ ಪ್ರಥಮ ಗುರಿ 'ಕನ್ನಡ ಸಂಸ್ಕೃತಿ'ಯ ಶೋಧ, ವಿಮರ್ಶೆ ಮತ್ತು ಪ್ರಸಾರ. ಅಂತಿಮ ಗುರಿ ಸುತ್ತಲಿನ ಸಂಸ್ಕೃತಿಗಳ ವಿವೇಕಪೂರ್ಣ ವಿನಿಯೋಗ.

ಕನ್ನಡ ಸಮಾಜ, ಉದ್ದಕ್ಕೂ ದ್ವಿಭಾಷಾ ಸಂದರ್ಭದಲ್ಲಿ ಬದುಕು ಮಾಡಿದೆ. ಹಿಂದಿನದು ಕನ್ನಡ-ಸಂಸ್ಕೃತ ದ್ವಿಭಾಷಾ ಸಂದರ್ಭ, ಇಂದಿನದು ಕನ್ನಡ-ಇಂಗ್ಲಿಷ್ ದ್ವಿಭಾಷಾ ಸಂದರ್ಭ. ಗ್ರಂಥಸ್ಥ ಭಾಷೆಯಾದ ಸಂಸ್ಕೃತಕ್ಕಿಂತ ಜೀವಂತ ಭಾಷೆಯಾದ ಇಂಗ್ಲಿಷ್ ಬೆಳಕಾಗುತ್ತಲೇ ಬೆಂಕಿಯಾಗಬಹುದೇ? ಎಂಬ ಭಯ ನಮ್ಮಲ್ಲಿ ಹುಟ್ಟಿದೆ. ಹೆಚ್ಚಿನದಾಗಿ ಆಂಗ್ಲ ಜೀವನಶೈಲಿ ನಮ್ಮ ಜೀವನಾಡಿಗಳನ್ನು ದಿನೇದಿನೇ ನಿಯಂತ್ರಿಸತೊಡಗಿ, ಒಂದು ಬಗೆಯ ಅತಿರೇಕ ಸೃಷ್ಟಿಯಾಗುತ್ತಲಿದೆ.

ಗಾಂಧೀಜಿಯವರು ಈ ಅತಿರೇಕವನ್ನು ಬಹಳ ಹಿಂದೆಯೇ ಊಹಿಸಿ, 'ಸ್ವದೇಶೀ ಚಳುವಳಿ'ಯನ್ನು ಕೈಗೆತ್ತಿಕೊಂಡಿದ್ದರು. ಈ ಮತ್ತು ಇಂಥ ದೇಶೀ ಚಿಂತನೆಗಳ ಆದರ್ಶದಲ್ಲಿ 'ಕನ್ನಡವು ಕನ್ನಡವ ಕನ್ನಡಿಸುತಿರಬೇಕು' ಎಂಬಂತೆ ನಾವು ಕನ್ನಡವನ್ನು ಬದುಕಿಸಬೇಕಾಗಿದೆ, ಬೆಳೆಸಬೇಕಾಗಿದೆ. ಹಾಗೆ ಮಾಡಿದಾಗ ಮಾತ್ರ ಕನ್ನಡತ್ವವನ್ನು ನಾಶ ಮಾಡಿಕೊಂಡು ಜಾಗತಿಕವಾಗುವುದು ತಪ್ಪಿ, ಕನ್ನಡವೂ ಜಾಗತಿಕವಾಗುತ್ತದೆ. ಜಾಗತಿಕವಾಗುವುದೆಂದರೆ ಸ್ಥಾನಿಕದ ನಿರಾಕರಣೆ ಯಲ್ಲವೆಂಬ ಸತ್ಯ ಸ್ಥಾಪನೆಗೊಳ್ಳುತ್ತದೆ.

ಹೆಗಲ ಮೇಲೆ ಈ ಹೊಣೆಯನ್ನು ಹೊತ್ತು, ಅಸ್ತಿತ್ವಕ್ಕೆ ಬಂದಿರುವ ಕನ್ನಡ ವಿಶ್ವವಿದ್ಯಾಲಯ, ಅದನ್ನು ತನ್ನ ಪ್ರಸಾರಾಂಗದ ಮೂಲಕ ಪ್ರಧಾನವಾಗಿ ಪೂರೈಸುತ್ತಲಿದೆ. ಈ ನಿಟ್ಟಿನಲ್ಲಿ ಪ್ರಕಟವಾದ ಹೊಸ ಪುಸ್ತಕ 'ಸವಣೂರು ನವಾಬರು'.

ದೇಶವೆನ್ನುವುದು ಬಹುಸಂಸ್ಕೃತಿಗಳ ಕೋಶ. ಇವುಗಳ ಭೌತಿಕ ಮತ್ತು ಅಭೌತಿಕ ಅಧ್ಯಯನ ಮಾತ್ರ ಆ ದೇಶವನ್ನು ಇಡಿಯಾಗಿ ಕಾಣಿಸಿಕೊಡುತ್ತದೆ. ಕನ್ನಡ ದೇಶದ ವಿಷಯದಲ್ಲಿ ಈ ಕನಸನ್ನು ನನಸನ್ನಾಗಿಸಲು ಹೊರಟಿರುವುದರ ದ್ಯೋತಕವೆಂಬಂತೆ 'ಸವಣೂರು ನವಾಬರು' ಕೃತಿಯನ್ನು ಕನ್ನಡ ವಿಶ್ವವಿದ್ಯಾಲಯ ಪ್ರಕಟಿಸಿದೆ. ಇದನ್ನು ರಚಿಸಿದ ಶ್ರೀ ಗೋವಿಂದಮೂರ್ತಿ ದೇಸಾಯಿ ಅವರಿಗೆ ನಮ್ಮ ಕೃತಜ್ಞತೆಗಳು ಸಲ್ಲುತ್ತವೆ.

ಎಂ.ಎಂ. ಕಲಬುರ್ಗಿ
ಕುಲಪತಿಗಳು

